ಭಾರತ-ದೇಶ ಮತ್ತು ಜನ

# ನಮ್ಮ ನ್ಯಾಯಾಂಗ

ಬಿ.ಆರ್. ಅಗರ್‌ವಾಲ

ಅನುವಾದ

ಎಸ್.ಆರ್. ಗೌತಮ್



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

# ವಿಷಯಾನುಕ್ರಮಣಿಕೆ

*S. C. Agrawal*



JUDGE, SUPREME COURT OF INDIA

# ಮುನ್ನುಡಿ

ರಾಜ್ಯದ ಮೂರು ಮೂಲಭೂತ ಅಂಗಗಳಲ್ಲಿ ಶಾಸಕಾಂಗ, ಕಾರ್ಯಾಂಗದ ಜೊತೆಗೆ ನ್ಯಾಯಾಂಗವೂ ಕೂಡ ಒಂದಾಗಿದೆ. ರಾಜ್ಯದ ಚಟುವಟಿಕೆಯಲ್ಲಿ ಅದಕ್ಕೆ ಅತಿ ಮುಖ್ಯ ಪಾತ್ರವಿದೆ; ಕಾನೂನಿನ ನಿಯಮಗಳಾಧಾರಿತ ಆಡಳಿತವಿರುವ ಪ್ರಜಾಪ್ರಭುತ್ವದಲ್ಲಿ ಈ ಪಾತ್ರಕ್ಕೆ ಇನ್ನೂ ಹೆಚ್ಚಿನ ಪ್ರಾಮುಖ್ಯತೆ ಇದೆ. ಪುರಾತನ ಕಾಲದಿಂದ ಕಾನೂನು ಮತ್ತು ನ್ಯಾಯಾಂಗವು ಭಾರತದ ರಾಜ್ಯಾಡಳಿತ ವ್ಯವಸ್ಥೆಯಲ್ಲಿ ಒಂದು ಮುಖ್ಯವಾದ ಭೂಮಿಕೆಯನ್ನು ನಿರ್ವಹಿಸಿವೆ. ಪುರಾತನ ಧರ್ಮಗ್ರಂಥಗಳಲ್ಲೂ ನ್ಯಾಯಾಂಗದ ಪ್ರಾಮುಖ್ಯತೆಯನ್ನು ಮಾನ್ಯಮಾಡಲಾಗಿದೆ. ನ್ಯಾಯ ವಿಧಾಯಕ ಮತ್ತು ಆಡಳಿತಾತ್ಮಕ ಕ್ರಿಯೆಗಳ ನ್ಯಾಯಿಕ ವಿಮರ್ಶೆಯನ್ನು ಮಾಡುವ ಅಧಿಕಾರವನ್ನು ನ್ಯಾಯಾಂಗದಲ್ಲಿ ನಿಹಿತಗೊಳಿಸಿರುವುದೂ ಅಲ್ಲದೆ, ಸಂವಿಧಾನದಲ್ಲಿ ಖಾತರಿಗೊಳಿಸಲ್ಪಟ್ಟ ಮೂಲಭೂತ ಹಕ್ಕುಗಳನ್ನು ಒತ್ತಾಯಿಸಿ ಜಾರಿಮಾಡುವ ಹೊಣೆಯನ್ನು ಅದಕ್ಕೆ ವಹಿಸಿಕೊಡುವುದರ ಮೂಲಕ, ಸಂವಿಧಾನವು ನ್ಯಾಯಾಂಗಕ್ಕೆ ಒಂದು ಹೆಮ್ಮೆಪಡುವಂಥ ಸ್ಥಾನವನ್ನು ದೊರಕಿಸಿಕೊಟ್ಟಿದೆ.

ಸಂವಿಧಾನವು ದೃಷ್ಟಿಯಲ್ಲಿರಿಸಿಕೊಂಡ ಸಾಮಾಜಿಕ ಕಲ್ಯಾಣ ರಾಜ್ಯದಲ್ಲಿ, ಅದು ಅನೇಕ ರೀತಿಯ ಜವಾಬ್ದಾರಿಗಳನ್ನು ಜನಗಳ ಕಲ್ಯಾಣಕ್ಕಾಗಿ ನಿಭಾಯಿಸಬೇಕಾಗುತ್ತದೆ. ರಾಜ್ಯದ ಪಾತ್ರವು ವಿಸ್ತಾರಗೊಂಡುದುದರಿಂದ, ಅನೇಕ ಕ್ಷೇತ್ರಗಳಲ್ಲಿ ನ್ಯಾಯವಿಧಾಯಕವನ್ನು ಮಾಡಬೇಕಾದ ಆವಶ್ಯಕತೆ ಉಂಟಾಗಿದ್ದು, ತತ್ಪರಿಣಾಮವಾಗಿ ನ್ಯಾಯಾಂಗದ ಕರ್ತವ್ಯಭಾರವೂ ಅಧಿಕವಾಗಿದೆ. ಈ ದಿನದಲ್ಲಿ, ರಾಜ್ಯವು ಪೌರರ ನಡುವಿನ ವ್ಯಾಜ್ಯವನ್ನು ಪರಿಹರಿಸಬೇಕಾದುದರ ಜೊತೆಗೆ ರಾಜ್ಯ ಮತ್ತು ಪೌರನ ನಡುವಿನ ವ್ಯಾಜ್ಯವನ್ನೂ ಪರಿಹರಿಸಬೇಕಾಗಿ ಬಂದಿದೆ. ಇಂಥ ವ್ಯಾಜ್ಯಗಳ ವಿನ್ಯಾಸವೂ ಬದಲಾಗುತ್ತ ಬಂದುದರಿಂದ, ವಿಶೇಷ ನ್ಯಾಯಾಲಯಗಳ ಮತ್ತು ನ್ಯಾಯಾಧೀಕರಣಗಳ ಆವಶ್ಯಕತೆ ಉಂಟಾಗಿದೆ. ಕೌಟುಂಬಿಕ ಕಲಹಗಳು, ತೆರಿಗೆ, ಅಪಘಾತ ಪರಿಹಾರ ಕೇಳಿಕೆ, ಕಾರ್ಮಿಕ ವಿವಾದಗಳು, ಸರ್ಕಾರ ಮತ್ತು ಅದರ ನೌಕರರ ನಡುವಿನ ವ್ಯಾಜ್ಯಗಳು, ಗ್ರಾಹಕ ಸಂರಕ್ಷಣೆ, ಏಕಸ್ವಾಮ್ಯ ಮತ್ತು ಪರಿಬಂಧಕ ವ್ಯಾಪಾರ ಪದ್ಧತಿಗಳು ಇತ್ಯಾದಿಗಳಿಗೆ ಸಂಬಂಧಿಸಿದ ಪ್ರಶ್ನೆಗಳನ್ನು ವಿಚಾರಣೆ ಮಾಡುವ ಅನೇಕ ವಿಶೇಷ ನ್ಯಾಯಾಲಯಗಳು ಮತ್ತು ನ್ಯಾಯಾಧಿಕರಣಗಳು ಈಗ ಅಸ್ತಿತ್ವದಲ್ಲಿವೆ.

ತಮ್ಮ ಹಕ್ಕುಗಳ ಬಗ್ಗೆ ಜನರಲ್ಲಿ ಹೆಚ್ಚುತ್ತಿರುವ ಜಾಗೃತಿಯಿಂದಾಗಿ

ಮೊಕದ್ದಮೆಗಳಲ್ಲಿ ಗಣನೀಯವಾದ ಏರಿಕೆ ಉಂಟಾಗಿದ್ದು, ಇದರಿಂದಾಗಿ ನ್ಯಾಯಾಲಯಗಳು ನ್ಯಾಯವಿತರಣೆ ಮಾಡುವುದರಲ್ಲಿ ವಿಳಂಬ ಉಂಟಾಗಿದೆ. ಹೀಗಾಗಿ ವ್ಯಾಜ್ಯಗಳ ಶೀಘ್ರ ಇತ್ಯರ್ಥಕ್ಕಾಗಿ ಪರ್ಯಾಯ ಮಾರ್ಗಗಳನ್ನು ಯೋಚಿಸುವುದು ಅವಶ್ಯಕವಾಗಿದೆ. ಇಂಥ ಒಂದು ಮಾರ್ಗವೇ, ಗಣನೀಯವಾಗಿ ಫಲತಂದುಕೊಟ್ಟಿರುವ ಲೋಕ್ ಅದಾಲತ್ತುಗಳು. ಪಕ್ಷಗಾರರು, ನ್ಯಾಯಾಲಯಗಳಲ್ಲಿ ಇತ್ಯರ್ಥವಾಗದೆ ಉಳಿದಿರುವ ವ್ಯಾಜ್ಯಗಳನ್ನು ಈ ಅದಾಲತ್ತುಗಳಲ್ಲಿ ಅನ್ಯೋನ್ಯವಾಗಿ ಬಗೆಹರಿಸಿಕೊಳ್ಳಲು ಸಾಧ್ಯವಾಗಿದೆ.

ಅನೇಕ ಬಾರಿ ಬಡತನ, ಅನಕ್ಷರತೆ ಅಥವಾ ಸಾಮಾಜಿಕ ಮತ್ತು ಆರ್ಥಿಕ ದುರ್ಬಲತೆಯಿಂದಾಗಿ, ಕಾನೂನಿನನ್ವಯ ಪರಿಹಾರಕ್ಕೋಸ್ಕರ ನ್ಯಾಯಾಲಯಗಳಿಗೆ ಹೋಗಲು ಬಹುಮಂದಿ ಜನಗಳಿಗೆ ಸಾಧ್ಯವಾಗುತ್ತಿಲ್ಲವೆಂದು ಮನಗಾಣಲಾಯಿತು. ಇಂಥ ಜನರು ಪರಿಹಾರವನ್ನು ಪಡೆಯಲು ಸಾಧ್ಯವಾಗುವಂತೆ ಮಾಡುವ ದೃಷ್ಟಿಯಿಂದ ಪ್ರಕ್ರಿಯೆಯ ಸಾಧಾರಣ ನಿಯಮಗಳನ್ನು ಸಡಿಲಗೊಳಿಸಿ, ಸ್ವಯಂ ಸೇವಾ ಸಂಸ್ಥೆಗಳು, ಸಾಮಾಜಿಕ ಕ್ರಿಯಾಶೀಲ ಗುಂಪುಗಳು, ಅಥವಾ ಒಬ್ಬ ಸಾಮಾಜಿಕ ಕಾರ್ಯಕರ್ತನೂ ಸಹ, ಅವರ ಪರವಾಗಿ ನ್ಯಾಯಾಲಯದ ಮೊರೆಹೊಕ್ಕು, ಅವರಿಗಾಗಿ ಪರಿಹಾರವನ್ನು ಪಡೆದುಕೊಳ್ಳುವುದಕ್ಕೆ ನ್ಯಾಯಾಲಯಗಳು ಸಮ್ಮತಿಸಿವೆ. ಸಾಮಾಜಿಕ ಹಿತಾಸಕ್ತಿ ಮೊಕದ್ದಮೆಗಳೆಂದು ಪ್ರಚಲಿತವಾಗಿರುವ ಈ ಮೊಕದ್ದಮೆಗಳ ವಿಭಾಗವು, ನಿರ್ಬಲರಿಗೂ, ಅಸಂಘಟಿತರಿಗೂ, ಮತ್ತು ಸಮಾಜದ ಶೋಷಿತವರ್ಗದವರಿಗೂ, ನ್ಯಾಯವನ್ನು ದೊರಕಿಸಿಕೊಡುವಲ್ಲಿ ನಿರ್ದಿಷ್ಟವಾಗಿ, ಸಹಾಯಕವಾಗಿದೆ. 'ನಮ್ಮ ನ್ಯಾಯಾಂಗ'ವೆಂಬ ಈ ಪುಸ್ತಕದಲ್ಲಿ, ಪುರಾತನ ಭಾರತದ, ಮೊಘಲರಕಾಲದ, ಬ್ರಿಟಿಷರ ಕಾಲದ ನ್ಯಾಯಾಂಗ ವ್ಯವಸ್ಥೆಯ ಚಾರಿತ್ರಿಕ ಹಿನ್ನೆಲೆಯನ್ನು ನಿರೂಪಿಸಿದ ಮೇಲೆ, ಗ್ರಂಥಕರ್ತ ಶ್ರೀ ಬಿ.ಆರ್. ಅಗರ್‌ವಾಲ ಅವರು, ಸದ್ಯದ ನ್ಯಾಯಿಕ ವ್ಯವಸ್ಥೆಯನ್ನು ಕುರಿತು ವಿಚಾರ ಮಾಡಿದ್ದಾರೆ. ವ್ಯವಹಾರಿಕ ಹಾಗೂ ಅಪರಾಧಿಕ ನ್ಯಾಯಾಲಯಗಳ, ಉಚ್ಚ ನ್ಯಾಯಾಲಯಗಳ, ಸರ್ವೋಚ್ಚ ನ್ಯಾಯಾಲಯದ, ನ್ಯಾಯಿಕ ಮತ್ತು ನ್ಯಾಯಿಕ ಸ್ವರೂಪದ ಕೆಲಸಗಳನ್ನು ನಿರ್ವಹಿಸುತ್ತಿರುವ ವಿವಿಧ ನ್ಯಾಯಾಧಿಕರಣಗಳ ಮತ್ತು ಆಯೋಗಗಳ ಶ್ರೇಣಿ ಮತ್ತು ಪ್ರಕ್ರಿಯೆಯ ಸರಳ ವಿವರಣೆಯನ್ನು ಈ ಪುಸ್ತಕ ಒಳಗೊಂಡಿದೆ. ಇತರ ವೇದಿಕೆಗಳಾದ, ಮಧ್ಯಸ್ಥಿಕೆ, ಲೋಕ್ ಅದಾಲತ್ತುಗಳು, ಮತ್ತು ಪಂಚಾಯತಿಗಳೂ ಅಲ್ಲದೆ, ನಮ್ಮ ದೇಶದಲ್ಲಿ ಸಕಾರಾತ್ಮಕವಾದ ಪಾತ್ರವಿರುವ ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆಗಳ ಬಗ್ಗೆಯೂ ಅವರು ವಿವರಣೆ ನೀಡಿದ್ದಾರೆ. ತಾವು ಚರ್ಚಿಸಿರುವ ವಿವಿಧ ವಿಷಯಗಳನ್ನು ಜನಸಾಮಾನ್ಯನಿಗೂ ಅರ್ಥವಾಗುವ ಸರಳವಾದ ಭಾಷೆಯಲ್ಲಿ ವಿವರಣೆಯನ್ನು ಕೊಡುವುದರ ಮೂಲಕ ಗ್ರಂಥಕರ್ತರು ಈ ಕ್ಷೇತ್ರದಲ್ಲಿ ತಮ್ಮ ಪಾಂಡಿತ್ಯ ಮತ್ತು ಅನುಭವವನ್ನು ಮೆರೆದಿದ್ದಾರೆ.

ಈ ಪುಸ್ತಕವು ಬೋಧಪ್ರದವೂ ಮತ್ತು ವಿಚಾರಪ್ರದವೂ ಆಗಿದೆ. ದೇಶದಲ್ಲಿ ಈಗಿರುವ ನ್ಯಾಯಿಕ ವ್ಯವಸ್ಥೆಯು ಹೇಗೆ ಕೆಲಸಮಾಡುತ್ತಿದೆಯೆಂಬುದನ್ನು ನಿಖರವಾಗಿ ತಿಳಿಯುವುದಕ್ಕೆ ಓದುಗನಿಗೆ ಬಹಳ ಸಹಾಯಕವಾಗಿದೆ. ಈ ಪುಸ್ತಕದ

ಪ್ರಕಾಶನ ಮಾಡಿದ್ದಕ್ಕಾಗಿ, ನ್ಯಾಷನಲ್ ಬುಕ್ ಟ್ರಸ್ಟ್ಅನ್ನು ನಾವು ಪ್ರಶಂಸಿಸಬೇಕಾಗಿದೆ. ಶ್ರೀ ಬಿ.ಆರ್. ಅಗರ್ವಾಲ ಅವರ ವಿಷಾದಕರ ಹಾಗೂ ಅಕಾಲಿಕ ನಿಧನದ ಕಾರಣ, ಈ ಪುಸ್ತಕವನ್ನು ಮರಣೋತ್ತರವಾಗಿ ಪ್ರಕಾಶನ ಮಾಡುತ್ತಿರುವುದು ದುರದೃಷ್ಟಕರ ವಿಷಯವಾಗಿದೆ. ಅದನ್ನು ಪ್ರಕಟಿಸುತ್ತಿರುವುದು, ಗ್ರಂಥಕರ್ತರ ನೆನಪಿಗೆ ಒಂದು ಉಚಿತವಾದ ಕಾಣಿಕೆ ಆಗಿದೆ.

ಆಗಸ್ಟ್, 1992 ಎಸ್.ಸಿ. ಅಗ್ರವಾಲ್

# ಪೀಠಿಕೆ

ನ್ಯಾಯಾಲಯಗಳು ಮತ್ತು ನ್ಯಾಯಾಲಯದ ಪ್ರಕ್ರಿಯೆಯು ಸಾರ್ವಜನಿಕರೆಲ್ಲರನ್ನೂ ಮಹತ್ತಾಗಿ ಸಮ್ಮೋಹನಗೊಳಿಸುತ್ತವೆ. ಸಮಾಜಗಳ ಹೆಚ್ಚುತ್ತಿರುವ ಸಂಕೀರ್ಣತೆಯಿಂದಾಗಿ, ನಾವೆಲ್ಲರೂ ನಮ್ಮ ಜೀವನದಲ್ಲಿ ಒಮ್ಮೆಯಾದರೂ ನ್ಯಾಯಾಲಯದ ಮೊರೆ ಹೋಗುತ್ತೇವೆ. ಈ ದಿನದಲ್ಲಿ, ಸಾಂಪ್ರದಾಯಿಕವಾದ ವ್ಯಾವಹಾರಿಕ ಮತ್ತು ಅಪರಾಧಿಕ ನ್ಯಾಯಾಲಯಗಳಿಗೆ, ನ್ಯಾಯ ಪರಿಪಾಲನೆಯು ಸೀಮಿತವಾಗಿಲ್ಲ. ಕಳೆದ ಅರ್ಧ ಶತಮಾನದ ಸುಮಾರಿನ ಅವಧಿಯಲ್ಲಿ ನ್ಯಾಯಾಧಿಕರಣಗಳು, ಆಯೋಗಗಳು, ಇತ್ಯಾದಿಗಳು, ಅಧಿಕ ಸಂಖ್ಯೆಯಲ್ಲಿ ಅಸ್ತಿತ್ವಕ್ಕೆ ಬಂದಿವೆ. ಇವು ಬಗೆ ಒಗೆಯ ವ್ಯಾಜ್ಯಗಳಲ್ಲಿ ನ್ಯಾಯ ವಿತರಣೆಯನ್ನು ಮಾಡಿ, ಸಾಂಪ್ರದಾಯಿಕ ನ್ಯಾಯಾಲಯಗಳಲ್ಲಿ ದೊರಕದಿರುವ ಪರಿಹಾರಗಳನ್ನು ಪ್ರದಾನಮಾಡುತ್ತಿವೆ. ಉದಾಹರಣೆಗೆ ಏಕಸ್ವಾಮ್ಯ ಆಯೋಗ, ಗ್ರಾಹಕರುಗಳ ಆಯೋಗ ಇತ್ಯಾದಿಗಳನ್ನು ಹೆಸರಿಸಬಹುದು. ನ್ಯಾಯ ದೇಗುಲವನ್ನು ಈಗ ವಕೀಲರುಗಳಿಲ್ಲದೆಯೂ ಸಮೀಪಿಸಬಹುದಾಗಿದೆ. (ಆದರೂ ಕೂಡ, ವಕೀಲರುಗಳಿಗೆ ಈಗಲೂ ಮುಖ್ಯವಾದ ಪಾತ್ರವಿಲ್ಲ ಎನ್ನುವಂತಿಲ್ಲ) ಹೇಗಾದರೂ, ಅನೇಕರಿಗೆ, ಈ ಪರ್ಯಾಯ ನ್ಯಾಯಾಲಯಗಳು ಮತ್ತು ನ್ಯಾಯಾಧಿಕರಣಗಳು ಅಸ್ತಿತ್ವದಲ್ಲಿದೆಯೆಂಬ ಅರಿವೇ ಇಲ್ಲದೆ ಅವರುಗಳು ಅವುಗಳ ಉಪಯೋಗವನ್ನು ಪಡೆಯಲಾಗುತ್ತಿಲ್ಲ.

ಈ ಪುಸ್ತಕದ ಮುಖ್ಯವಾದ ಉದ್ದೇಶ, ಸದ್ಯದಲ್ಲಿರುವ ಈ ನಮ್ಮ ನ್ಯಾಯಿಕ ವ್ಯವಸ್ಥೆ ಮತ್ತು ಅದರ ಇತಿಹಾಸವನ್ನು ಸಾರ್ವಜನಿಕರೆಲ್ಲರ ಮುಂದೆ ಸರಳವಾದ ಭಾಷೆಯಲ್ಲಿ ಮಂಡಿಸುವುದಲ್ಲದೆ, ಜನಸಾಮಾನ್ಯನಿಗೆ, ವ್ಯವಹಾರಿಕ ನ್ಯಾಯಾಲಯಗಳು, ಅಪರಾಧಿಕ ನ್ಯಾಯಾಲಯಗಳು ಮತ್ತು ನ್ಯಾಯಾಧಿಕರಣಗಳ ಪರಿಚಯವನ್ನು ಮಾಡಿಕೊಡುವುದೇ ಆಗಿದೆ. ಭಾರತ ನ್ಯಾಯಾಂಗದ ವಿಕಾಸ ಈಗಿರುವಂತೆ, ಹಾಗೂ ಅದರ ವಿವಿಧ ಚಟುವಟಿಕೆಗಳ ಚಿತ್ರಣವನ್ನು ಕೊಡಲು ನಾನಿಲ್ಲಿ ಪ್ರಯತ್ನಪಟ್ಟಿದ್ದೇನೆ.

ಈ ದಿನಗಳಲ್ಲಿ ವಿವಿಧ ನ್ಯಾಯಾಲಯಗಳು ಕೆಲಸ ಮಾಡುತ್ತಿರುವ ರೀತಿ, ಅಸಾಧಾರಣವಾದ ವಿಳಂಬಗಳು, ಮೊಕದ್ದಮೆಗಳಿಗೆ ತಗಲುವ ವಿಪರೀತ ಖರ್ಚು, ನ್ಯಾಯಾಧೀಶರುಗಳ, ವಕೀಲರುಗಳ, ನ್ಯಾಯಾಲಯಗಳ ಅಧಿಕಾರಿಗಳ ಹಾಗೂ ಸಿಬ್ಬಂದಿವರ್ಗದ ಪ್ರಾಮಾಣಿಕತೆ ಮತ್ತು ಋಜುತ್ವ ಅಲ್ಲದೆ ನ್ಯಾಯಿಕ ವಿಧಾನದಲ್ಲಿ ರಾಜಕೀಯ ಮಧ್ಯಪ್ರವೇಶ ಇವುಗಳ ಬಗ್ಗೆ ಬಹಳವಾದ ಟೀಕೆ ಇದೆ. ಇಂಥ ದೂರುಗಳನ್ನು ಈ ಪುಸ್ತಕದ ಕೊನೆಯ ಅಧ್ಯಾಯದಲ್ಲಿ ಬೊಟ್ಟುಮಾಡಿ

ತೋರಿಸುವುದರ ಹೊರತಾಗಿ ಅದೇ ಗುಂಪಿನಲ್ಲಿ ಸೇರಿಕೊಳ್ಳದಿರುವಂತೆ ನನ್ನನ್ನು ನಾನು ನಿಗ್ರಹಿಸಿಕೊಂಡಿದ್ದೇನೆ.

ನಾಗರಿಕ ಸಮಾಜಗಳ ಅತಿ ಮುಖ್ಯವಾದ ಲಕ್ಷಣಗಳಲ್ಲಿ ಆ ಸಮಾಜಗಳಲ್ಲಿನ ನಿವಾಸಿಗಳು, ತಮ್ಮೊಳಗಿನ ವ್ಯಾಜ್ಯಗಳನ್ನು ಶಾಂತಿಯುತವಾಗಿ ಹೇಗೆ ಪರಿಹರಿಸಿಕೊಳ್ಳುತ್ತಾರೆ ಎಂಬುದು ಒಂದಾಗಿದೆ. ಶಾಂತಿಯಿರುವೆಡೆಯಲ್ಲಿ ಮುನ್ನಡೆಯಿದೆ. ಜನಗಳಿಗೆ ನ್ಯಾಯ ಸಿಕ್ಕರೆ ಅವರು ತೃಪ್ತಿಪಟ್ಟುಕೊಂಡು ಇರುತ್ತಾರೆ. ನ್ಯಾಯ ದೊರಕಿಸಿಕೊಳ್ಳುವಲ್ಲಿ ಸೋತರೆ, ಅವರು ದಂಗೆಯೇಳುತ್ತಾರೆ. ಬಡವ ಬಲ್ಲಿದ, ಸಬಲ ನಿರ್ಬಲರೆಂಬ ಭೇದಭಾವವಿಲ್ಲದೆ, ಯಾರಿಗೇ ಆಗಲಿ, ನ್ಯಾಯ ದೊರಕಲೇಬೇಕಾದ ಸ್ಥಳಗಳೆಂದರೆ ನ್ಯಾಯಾಲಯಗಳು ಮತ್ತು ನ್ಯಾಯಾಧಿಕರಣಗಳು. ಮುಖ್ಯ ನ್ಯಾಯಾಧೀಶ ಆರ್.ಎನ್. ಮಿಶ್ರಾ ಹೇಳಿದಂತೆ "ನಮ್ಮ ನ್ಯಾಯಿಕ ವ್ಯವಸ್ಥೆಯು, ಹಳತಾಗಿದೆಯೆಂದೂ, ಕುಸಿದಿದೆಯೆಂದೂ ಅಥವಾ ಕುಸಿಯುತ್ತಿದೆಯೆಂದೂ ನಾನು ನಂಬುವುದಿಲ್ಲ. ದೀರ್ಘಕಾಲದ ಪರೀಕ್ಷೆಗೊಳಪಟ್ಟ ನ್ಯಾಯಿಕ ವ್ಯವಸ್ಥೆಯನ್ನು ಉತ್ತರಾಧಿಕಾರಿಗಳಾಗಿ ಪಡೆದುಕೊಂಡು, ಎಲ್ಲರಿಗೂ ಎಟುಕಲು ಸಾಧ್ಯವಾಗುವಂತೆ ಅದನ್ನು ವಿಕಾಸಗೊಳಿಸಿದ್ದೇವೆಂಬುದು ನನ್ನ ಅಭಿಪ್ರಾಯ. ಆದರೂ ಅವಕ್ಕೆ ಇನ್ನೂ ವಿಶೇಷವಾಗಿ ಶೃತಿಮಾಡಬೇಕಾದ ಅವಶ್ಯಕತೆ ಇದೆ."

ನ್ಯಾಯಾಧೀಶ ಸ್ಟೋರಿ ಮಹಾಶಯನ ಅಂತ್ಯಕ್ರಿಯೆಯ ಸಂದರ್ಭದಲ್ಲಿ ಮಾತನಾಡುತ್ತಾ, ಅಮೆರಿಕಾದ ಮಹಾನ್ ನ್ಯಾಯಾಧೀಶನಾದ ಡಿ. ವೆಬ್‌ಸ್ಟರ್ ಅವರು, ಚಿರನೆನಪಿನಲ್ಲುಳಿಯುವ ಈ ಮಾತುಗಳನ್ನು ಹೇಳಿದ್ದಾರೆ:

> "ಸ್ವಾಮಿ, ಪೃಥ್ವಿಯ ಮೇಲೆ ಮನುಷ್ಯನ ಮಹದಾಸಕ್ತಿಯೆಂದರೆ ನ್ಯಾಯ. ಸುಸಂಸ್ಕೃತ ಮಾನವನನ್ನು ಮತ್ತು ಸುಸಂಸ್ಕೃತ ದೇಶಗಳನ್ನು ಒಟ್ಟಿಗೇ ಇರುವಂತೆ ಹಿಡಿದಿಡುವ ಅಸ್ಥಿಬಂಧವೆಂದರೆ ಇದೇ ಆಗಿದೆ. ನ್ಯಾಯ ದೇಗುಲ ಎಲ್ಲಿ ಸ್ಥಾಯಿಯಾಗಿದೆಯೋ ಎಲ್ಲಿಯವರೆಗೆ ಅದನ್ನು ಗೌರವಿಸಲಾಗುತ್ತದೆಯೋ, ಅಲ್ಲಿ, ಸಾಮಾಜಿಕ ಭದ್ರತೆ, ಸರ್ವತ್ರ ಸುಖಸಮಾಧಾನ ಮತ್ತು ನಮ್ಮ ಜನಾಂಗದ ಅಭಿವೃದ್ಧಿ ಮತ್ತು ಮುನ್ನಡೆಗೆ ಬುನಾದಿಯಾಗಿ ಇರುತ್ತದೆ. ಮತ್ತು ಯಾರೇ ಆಗಲಿ, ಈ ಮಂದಿರಕ್ಕಾಗಿ ಪ್ರಯೋಜನಕಾರಿಯಾಗಿ ಮತ್ತು ಘನತೆಯಿಂದ ಶ್ರಮಿಸುತ್ತಾನೋ ಅದರ ಅಸ್ತಿಭಾರಗಳನ್ನು ಪೂರ್ಣಗೊಳಿಸುತ್ತಾನೋ ಅದರ ಕಂಬಗಳನ್ನು ಬಲಪಡಿಸುತ್ತಾನೋ ಅದರ, ಅಲಂಕಾರಗಂಬದ ಸುತ್ತು ಚಿತ್ರಗಳನ್ನು ಅಲಂಕರಿಸುತ್ತಾನೋ, ಅದರ ಉನ್ನತ ಗುಮ್ಮಟವನ್ನು ಆಕಾಶದಲ್ಲಿ ಇನ್ನೂ ಎತ್ತರಕ್ಕೆ ಏರಿಸುವುದರಲ್ಲಿ ಪಾಲ್ಗೊಳ್ಳುತ್ತಾನೋ, ಅವನ ಹೆಸರು, ಕೀರ್ತಿ ಮತ್ತು ಮರ್ಯಾದೆ ಮಾನವ ಸಮಾಜದ ಸ್ವಾತಂತ್ರ್ಯದಷ್ಟೇ ತಂತಾನೇ ಬಹು ದೀರ್ಘಕಾಲ ಉಳಿಯುತ್ತದೆ."

ಈ ಪುಸ್ತಕವನ್ನು ಜನಸಾಮಾನ್ಯನಿಗೋಸ್ಕರ ಬರೆಯಲಾಗಿದೆ. ನಾನು, ವಿಷಯಗಳನ್ನು, ಸರಳವಾದ, ಅರ್ಥವಾಗುವ ಭಾಷೆಯಲ್ಲಿ ನಿರೂಪಿಸಲು

ಪ್ರಯತ್ನಿಸಿದ್ದೇನೆ. ಆದೇ ಕಾಲಕ್ಕೆ ಅದರ ಯಥಾರ್ಥತೆಯನ್ನು ಉಳಿಸಿಕೊಂಡಿದ್ದೇನೆ. ಇಂದಿಗೆ ನಲವತ್ತು ವರ್ಷಗಳಿಗೂ ಹೆಚ್ಚುಕಾಲ ನಾನು ನ್ಯಾಯಾಲಯಗಳೊಂದಿಗೆ ಸಹಯೋಗ ಮಾಡಿದ್ದೇನೆ. ಹಾಗಾಗಿ ಬಹುಮಟ್ಟಿನ ನ್ಯಾಯಾಲಯಗಳನ್ನು ಅತಿ ಹತ್ತಿರದಿಂದ ಬಲ್ಲವನಾಗಿದ್ದೇನೆ. ಹೇಗಾದರೂ, ಕೆಲವು ತಾಂತ್ರಿಕತೆಗಳನ್ನು ನಿವಾರಿಸಲು ಆಗಲಿಲ್ಲ. ಓದುಗರು ಏನಾದರೂ ಕೊರತೆಗಳನ್ನು ಕಂಡರೆ ಅದಕ್ಕೆ ನಾನೇ ಸಂಪೂರ್ಣ ಹೊಣೆಗಾರ. ಈ ಪುಸ್ತಕವನ್ನು ವಿಚಾರಪ್ರದವಾಗಿಯೂ ಮತ್ತು ಓದಲಾಗುವಂತೆಯೂ ಮಾಡುವುದಕ್ಕೆ ನನ್ನ ಕೈಲಾದಷ್ಟು ಶ್ರಮಿಸಿದ್ದೇನೆ. ಓದುಗನಿಗೆ ಇದು ಉಪಯೋಗಕರವಾಗುತ್ತದೆಂದು ನಾನು ಆಶಿಸುತ್ತೇನೆ.

**ಆಗಸ್ಟ್, 1992** **ಬಿ.ಆರ್. ಅಗರ್‌ವಾಲ**

# 1

# ಪ್ರಾಚೀನ ಭಾರತ

## ನ್ಯಾಯಾಂಗದ ವ್ಯವಸ್ಥೆ

ಬಹು ಮುಂಚಿನ ಸಮಾಜದಲ್ಲಿ ವ್ಯಾಜ್ಯಗಳ ನ್ಯಾಯಿಕ ಇತ್ಯರ್ಥಕ್ಕೆ ವ್ಯವಸ್ಥಿತ ಪದ್ಧತಿಯೊಂದು ಇದ್ದ ಹಾಗೆ ತೋರುವುದಿಲ್ಲವೆಂದು ಸಮಾಜ ವಿಜ್ಞಾನದ ಹಾಗೂ ಕಾನೂನು ಚರಿತ್ರೆಯ ವಿದ್ವಾಂಸರುಗಳು ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಆನಂತರದ ದಿನಗಳಲ್ಲಿ ಸಮುದಾಯದ ನೆರವಿನಿಂದ ಬಗೆಹರಿಯುತ್ತಿದ್ದ ಕೆಲವು ಸಂದರ್ಭಗಳನ್ನು ಹೊರತುಪಡಿಸಿ ನ್ಯಾಯವಿತರಣೆಯು ವೈಯಕ್ತಿಕ ವಿಷಯವಾಗಿದ್ದು ಸೆಣಸಾಟ ಹಾಗೂ ಬಲಪ್ರಯೋಗದಿಂದ ತೀರ್ಮಾನವಾಗುತ್ತಿದ್ದಿತು. ನಿಜಕ್ಕೂ, ಸಮುದಾಯಗಳು ಅಸ್ತಿತ್ವಕ್ಕೆ ಬಂದಾಗಲೇ ನಡವಳಿಕೆಯ ಕೆಲವು ನಿಯಮಗಳನ್ನು ರೂಪಿಸಲಾಯಿತು. ಸಮುದಾಯದ ನಿಯಮಗಳಿಗೆ ಅಗೌರವ ತೋರಿಸಿದರ ಸಮುದಾಯವನ್ನೇ ಅಗೌರವಿಸಿದಂತೆ ಆಗುತ್ತದೆಂದು ಪರಿಗಣಿಸಲಾಗುತ್ತಿತ್ತು. ಕಾನೂನು ಮುರಿದವರ ಮೇಲೆ ತೀವ್ರವಾದ ಕ್ರಮವನ್ನು ಕೈಗೊಂಡು ಸಾಮೂಹಿಕವಾಗಿ ಶಿಕ್ಷೆಯನ್ನು ಜಾರಿಗೊಳಿಸಲಾಗುತ್ತಿತ್ತು.

ನ್ಯಾಯ ಪರಿಪಾಲನೆಯ ಮುಖ್ಯ ಉದ್ದೇಶಗಳು ಎರಡು: ಸತ್ಯಾನ್ವೇಷಣೆ ಹಾಗೂ ಜನಗಳು ಕಾನೂನಿನ ನಿಯಮಗಳಿಗೆ ಬದ್ಧರಾಗಿರುವಂತೆ ಮಾಡುವ ಪ್ರಯತ್ನ. ವಿನೋಗ್ರೇಡಾಫ್‌ನ ಪ್ರಕಾರ ಪ್ರಾಚೀನ ಕಾಲದಲ್ಲಿ ಸತ್ಯಾನ್ವೇಷಣೆಗಿಂತ ಸಮಸ್ಯೆಗಳ ಪರಿಹಾರಕ್ಕೆ ಹೆಚ್ಚು ಒತ್ತು ಕೊಡಲಾಗುತ್ತಿತ್ತು. ನ್ಯಾಯಾನ್ಯಾಯವನ್ನು ರಾಜನು ತೀರ್ಮಾನಿಸುತ್ತಿದ್ದ; ಮನು ಮತ್ತು ನಾರದರು ರಾಜನನ್ನು ಶಸ್ತ್ರವೈದ್ಯನಿಗ ಹೋಲಿಸಿದ್ದಾರೆ. ರಾಜನು ನ್ಯಾಯ ವಿತರಕನೂ ಆಗಿದ್ದು, ಸತ್ಯಮಾರ್ಗವನ್ನು ಬಿಡದ ಬೌದ್ಧಿಕ ಮನೋಧರ್ಮವುಳ್ಳ ಸುಸಂಸ್ಕೃತ ವ್ಯಕ್ತಿಯಾಗಿರಬೇಕೆಂದು ಮಹಾಭಾರತ ಹೇಳುತ್ತದೆ.

ನಾರದೀಯ ಧರ್ಮಶಾಸ್ತ್ರ ಹೀಗೆ ಹೇಳುತ್ತದೆ:

> ಮಾನವ ಜನಾಂಗವನ್ನು ರಕ್ಷಿಸುವ ಸಲುವಾಗಿ, ಕಾನೂನು ಮತ್ತು ಸುವ್ಯವಸ್ಥೆಯನ್ನು ಕಾಪಾಡಲು ಹಾಗೂ ತಮ್ಮ ರಾಜ್ಯಗಳಲ್ಲಿ ನಡೆದ ಅಪರಾಧಗಳ ಜವಾಬ್ದಾರಿಯನ್ನು ಅಂದರೆ ಅಪರಾಧಿಗಳನ್ನು ಹಿಡಿದು ಶಿಕ್ಷಿಸುವ ಹೊಣೆಯನ್ನು ಆಯಾ ರಾಜರುಗಳು ನಿರ್ವಹಿಸಲು ನ್ಯಾಯಿಕ ಪ್ರಕ್ರಿಯೆಯನ್ನು

ಸ್ಥಾಪಿಸಲಾಗಿದೆ. ಮಾನವರು ಕಟ್ಟುನಿಟ್ಟಾಗಿ ಸದ್ಗುಣಗಳು ಹಾಗೂ ಸತ್ಯವಂತರಾಗಿದ್ದಾಗ ಯಾವ ಕಲಹಗಳಾಗಲೀ, ಈರ್ಷ್ಯೆಯಾಗಲೀ, ಸ್ವಾರ್ಥವಾಗಲೀ ಇರಲಿಲ್ಲ. ಮಾನವರಲ್ಲಿ ಸದ್ಗುಣಗಳು ನಂದಿಹೋಗಿ ನ್ಯಾಯಿಕ ಪ್ರಕ್ರಿಯೆಯು ಸ್ಥಾಪಿತವಾಯಿತು ಮತ್ತು ರಾಜನಿಗೆ ಶಿಕ್ಷೆವಿಧಿಸುವ ವಿಶೇಷಾಧಿಕಾರವಿದ್ದು, ವ್ಯಾಜ್ಯಗಳನ್ನು ಇತ್ಯರ್ಥಮಾಡುವುದಕ್ಕೆ ಅವನನ್ನು ನ್ಯಾಯಾಧಿಪತಿಯನ್ನಾಗಿ ನಿಯುಕ್ತಗೊಳಿಸಲಾಗಿದೆ.

ಭಾರತದ ಬಹುತೇಕ ಕಡೆಗಳಲ್ಲಿ ದಂಡನೆಯ ಭಯವೇ ಜನಗಳು ಬೇರೆಯವರ ಹಕ್ಕುಗಳನ್ನು ಗೌರವಿಸುವ ಹಾಗೆ ಮಾಡಿತ್ತು. ಕಾನೂನು ಮುರಿಯುವವರನ್ನು ಶಿಕ್ಷಿಸಿ ಸಮಾಜವು ಸುಗಮವಾಗಿ ವ್ಯವಹರಿಸಲು ಬೇಕಾದ ಸ್ಥಿತಿಗತಿಗಳು ಇರುವ ಹಾಗೆ ನೋಡಿಕೊಳ್ಳುವುದು ರಾಜನ ಕರ್ತವ್ಯವಾಗಿತ್ತು. ಪ್ರತಿಯೊಬ್ಬ ವ್ಯಕ್ತಿಗೂ ನ್ಯಾಯ ದೊರಕಿಸಿಕೊಳ್ಳುವ ಹಕ್ಕಿದ್ದು, ರಾಜ್ಯವು ಅದನ್ನು ಅವನಿಗೆ/ಅವಳಿಗೆ ದೊರಕಿಸಿಕೊಡುತ್ತಿತ್ತು. ಆದರೆ, ರಾಜನು ಶಕ್ತಿಶಾಲಿಯಾಗಿದ್ದರೂ, ರಾಜ್ಯದ ಪ್ರತೀಕವೇ ಆಗಿದ್ದರೂ, ಕಾನೂನನ್ನು ರಚಿಸಲು ಅವನಿಗೆ ಹಕ್ಕಿರಲಿಲ್ಲ. ಅವನು ಕಾನೂನನ್ನು ಎತ್ತಿಹಿಡಿಯುವವನೂ, ಘೋಷಣೆ ಮಾಡುವವನೂ, ನ್ಯಾಯಪರಿಪಾಲಕನೂ ಆಗಿದ್ದ. ರಾಜ್ಯದ ಅತ್ಯುನ್ನತ ನ್ಯಾಯಾಲಯದ ಪೀಠಾಧ್ಯಕ್ಷನಾಗಿದ್ದರೂ, ನ್ಯಾಯ ಸಂಹಿತೆಗಳಲ್ಲಿ ವಿಧಿಸಲ್ಪಟ್ಟ ಪ್ರಕಾರ ತನ್ನ ಕರ್ತವ್ಯವನ್ನು ಮಾಡಬೇಕಾಗಿದ್ದಿತು. ಪ್ರಕೃತಿಯಲ್ಲಿ ಅಸ್ತಿತ್ವದಲ್ಲಿದ್ದ 'ಋತ' ಎಂಬ ಕಲ್ಪನೆಯ ಮುಂದೆ ಸಾಮಾಜಿಕ ಹಾಗೂ ರಾಜಕೀಯ ವ್ಯವಸ್ಥೆಯಾಗಿ ಸ್ಥಾಪಿಸಲ್ಪಟ್ಟು ಅನಂತರ ಮಾನವೀಯ ಸಂಬಂಧಗಳನ್ನು ನಿಯಂತ್ರಿಸುವ ಕಾನೂನಾಗಿ ರೂಪುಗೊಂಡಿತು. ಸಮಾಜದ ಪ್ರತಿಯೊಬ್ಬ ವ್ಯಕ್ತಿಗೂ ರಾಜ್ಯದಲ್ಲಿ ಕಾನೂನಿನನ್ವಯ ನ್ಯಾಯ ದೊರಕಲೇಬೇಕೆಂಬ ಹಾಗೂ ಅವರ ಹಕ್ಕುಗಳನ್ನು ಕಾಪಾಡಬೇಕೆಂಬ ಮನವರಿಕೆಯು ನ್ಯಾಯಾಂಗದ ಒಂದು ಪದ್ಧತಿ ರೂಪುಗೊಳ್ಳಲು ಕಾರಣವಾಯಿತು. ರಾಜ್ಯದ ಮೂಲಕವೇ ಪ್ರಜೆಗಳಿಗೆ ನ್ಯಾಯ ವಿತರಣೆಯಾಗಬೇಕಾಗಿದ್ದು, ಅದು ಪ್ರಾಚೀನ ಭಾರತದ ರಾಜನೊಬ್ಬನ ಆದ್ಯ ಕರ್ತವ್ಯವಾಗಿತ್ತು. ರಾಜ್ಯ ಮತ್ತು ನ್ಯಾಯಿಕ ಪದ್ಧತಿ ಇವುಗಳ ಪರಿಕಲ್ಪನೆಗಳು ಒಂದಕ್ಕೊಂದು ನಿಕಟವಾಗಿ ಬೆಸೆದುಕೊಂಡಿವೆ. ರಾಜ್ಯವು ಕಾನೂನನ್ನು ಅನುಷ್ಠಾನಗೊಳಿಸಿ ನಿಷ್ಪಕ್ಷಪಾತವಾದ ನ್ಯಾಯವನ್ನು ಜನರಿಗೆ ದೊರಕಿಸಿಕೊಡುತ್ತಿತ್ತು.

ವೇದಗಳ ಕಾಲದಲ್ಲಿ ನ್ಯಾಯ ವಿತರಣೆಯ ಏಕೈಕ ವ್ಯವಸ್ಥೆಯೊಂದಿದ್ದು ಕಾಲಕ್ರಮೇಣ ಈ ವ್ಯವಸ್ಥೆ ಕಾನೂನು ಲೇಖನದಾತರಿಂದಲೂ, ನ್ಯಾಯ ವಿಧಾಯಕರುಗಳಿಂದಲೂ, ವಿಸ್ತೃತವಾದ ಹಾಗೂ ಸುಧಾರಿಸಲ್ಪಟ್ಟ ವ್ಯವಸ್ಥೆಯಾಗಿ ರೂಪುಗೊಂಡಿತು. ಈ ಬೆಳವಣಿಗೆಯ ಮುಖ್ಯ ಮಜಲುಗಳೆಂದರೆ 1)ವೈದಿಕ ಅಂದರೆ ಮೌರ್ಯರಿಗೆ ಮುಂಚಿನ, 2) ಮೌರ್ಯರ, ಮತ್ತು 3) ಗುಪ್ತರ ಕಾಲಗಳು. ಮೌರ್ಯಪೂರ್ವ ಹಂತದಲ್ಲಿ ಕಾನೂನಿನ ನಿಜವಾದ ಸ್ಥಿತಿಯನ್ನು ವೈದಿಕ ಮತ್ತು ಧರ್ಮಸೂತ್ರಗಳ ಕಾಲವೆಂದು ನಿರ್ಧರಿಸಬಹುದು.

ವೇದಗಳ ಕಾಲದಲ್ಲಿ ನ್ಯಾಯಿಕಕ್ಷೇತ್ರದಲ್ಲಿ ಸಭೆ ಮತ್ತು ಸಮಿತಿಗಳು ಪ್ರಧಾನ

ಪಾತ್ರವನ್ನು ವಹಿಸಿದ್ದವು. ಈ ಸಭೆ ಹಾಗೂ ಸಮಿತಿಗಳು ರಾಜನ ನ್ಯಾಯಾಂಗ ಅಧಿಕಾರವನ್ನು ಬಲಗೊಳಿಸಿದವು. ಹೇಗಾದರೂ, ಋಗ್ವೇದದಲ್ಲಿ ಉಕ್ತವಾಗಿರುವಂತೆ ಮೊದಮೊದಲಿಗೆ ರಾಜನು ಪ್ರಜೆಗಳು ಸಂದಾಯ ಮಾಡಿದ ಕರಗಳಿಗೆ ಪ್ರತಿಫಲವಾಗಿ ನ್ಯಾಯಾಧೀಶನ ಕರ್ತವ್ಯವನ್ನು ನಿಭಾಯಿಸುತ್ತಿದ್ದ. ಹೀಗಾಗಿ ತಪ್ಪುಮಾಡಿದವರನ್ನು ದಂಡಿಸಿ, ಸುವ್ಯವಸ್ಥೆಯನ್ನು ಕಾಪಾಡುವುದು ರಾಜನ ಕರ್ತವ್ಯಗಳಲ್ಲಿ ಅತ್ಯಂತ ಪ್ರಯೋಜನಕಾರಿಯೂ, ಮುಖ್ಯವಾದದ್ದೂ ಆಗಿದ್ದಿತು. ಜೀವನವು ಸರಳವಾಗಿದ್ದಿದ್ದರಿಂದ ನ್ಯಾಯ ಮತ್ತು ವ್ಯವಸ್ಥೆಯ ನಿರ್ವಹಣೆ ಸಮರ್ಥವಾಗಿ, ಕ್ರಮಬದ್ಧವಾಗಿತ್ತು. ನ್ಯಾಯಾಲಯಗಳ ಆವಶ್ಯಕತೆ ಕಂಡು ಬಂದಿರಲಿಲ್ಲ. ವೈದಿಕ ಸಾಹಿತ್ಯದಲ್ಲೆಲ್ಲೂ ನ್ಯಾಯಾಲಯಗಳ ಪ್ರಸ್ತಾಪವಿಲ್ಲ. ರಾಜನೇ ವ್ಯಾಜ್ಯ ಪರಿಹಾರ ಮಾಡುವ ಹಾಗೂ ದಂಡವಿಧಿಸುವ ಅಧಿಕಾರ ವ್ಯಾಪ್ತಿಯುಳ್ಳವನಾಗಿದ್ದು, ನ್ಯಾಯ ವಿತರಣೆ ಅವನ ಹೊಣೆಯಾಗಿದ್ದಿತು.

ಪ್ರಾಚೀನ ಭಾರತದಲ್ಲಿ ನ್ಯಾಯ ವಿತರಣೆಯು 'ಸ್ಮೃತಿ'ಗಳ ಅನುಸಾರ ನಡೆಯುತ್ತಿದ್ದು ಇದು ರಾಜನ ಅತಿ ಮುಖ್ಯವಾದ ಹಾಗೂ ಮಾಡಲೇಬೇಕಾದ ಕರ್ತವ್ಯಗಳಲ್ಲಿ ಒಂದಾಗಿತ್ತು. ನಿಷ್ಪಕ್ಷಪಾತವಾದ ನ್ಯಾಯ ವಿತರಣೆಯಿಂದ ಪ್ರಜೆಗಳ ರಕ್ಷಣೆಮಾಡುವುದು ಅವನ ಹೊಣೆಗಾರಿಕೆಯಾಗಿತ್ತು. ಈ ಅತಿಮುಖ್ಯ ಕರ್ತವ್ಯದಲ್ಲಿ ತೋರಿದ ನಿರ್ಲಕ್ಷ್ಯ ಅವನಿಗೂ, ಅವನ ಪ್ರಜೆಗಳಿಗೂ ವಿನಾಶವನ್ನುಂಟುಮಾಡುತ್ತದೆಂದು ನಂಬಲಾಗಿದ್ದಿತು.

ಪ್ರಾಚೀನ ಭಾರತದ ನ್ಯಾಯಶಾಸ್ತ್ರಜ್ಞರು ನ್ಯಾಯಪರಿಪಾಲನೆಯನ್ನು ನಿಯಂತ್ರಿಸುವ ಶಾಸನದತ್ತ ಬಹಳಷ್ಟು ಲಕ್ಷ್ಯವನ್ನು ಕೊಟ್ಟರು. ಈ ವಿಷಯವನ್ನು ಕುರಿತ ಬರವಣಿಗೆಯಲ್ಲಿ ಕಂಡುಬಂದಿರುವಂತೆ ಅತ್ಯುನ್ನತ ನ್ಯಾಯಾಲಯ ರಾಜಧಾನಿಯಲ್ಲೇ ಸ್ಥಾಪನೆಯಾಗಬೇಕೆಂದು ಸೂಚಿಸುತ್ತದೆ. ಅಧೀನ ನ್ಯಾಯಾಲಯಗಳು ಕೂಡ ರಾಜಾಜ್ಞೆಯ ಪ್ರಕಾರ ಸ್ಥಾಪಿಸಲ್ಪಟ್ಟಿದ್ದವು. ಗ್ರಾಮ ಮಟ್ಟದಲ್ಲಿ ವ್ಯಾಜ್ಯ ಪರಿಹಾರ ಮಾಡಬಲ್ಲ ಜನತಾ ನ್ಯಾಯಾಲಯಗಳಿದ್ದವು. ನ್ಯಾಯಾಧೀಶರುಗಳಿಗೆ ಮತ್ತು ಇತರ ಅಧಿಕಾರಿಗಳಿಗೆ ಇರಬೇಕಾದ ಅರ್ಹತೆಯನ್ನು ನಿಗದಿಗೊಳಿಸಲಾಗಿತ್ತು. ತಾಂತ್ರಿಕ ಪ್ರಶ್ನೆಗಳನ್ನು ತೀರ್ಮಾನಿಸಬೇಕಾಗಿದ್ದಾಗ ಅಗತ್ಯವಿದ್ದಲ್ಲಿ ಆಯಾ ಕ್ಷೇತ್ರದಲ್ಲಿ ಪರಿಣತರಾದವರನ್ನು ಸಲಹೆಗಾರರನ್ನಾಗಿ ನಿಯುಕ್ತಗೊಳಿಸಲು ಅವಕಾಶವಿತ್ತು. ಪ್ರಕ್ರಿಯೆ ಹಾಗೂ ಸಾಕ್ಷ್ಯ ಅಧಿನಿಯಮಗಳನ್ನು ವಿಧಿಬದ್ಧಗೊಳಿಸಲಾಗಿತ್ತು. ಬೃಹಸ್ಪತಿ, ನಾರದ, ಮನು, ಕೌಟಿಲ್ಯ ಮತ್ತು ಇತರ ನ್ಯಾಯವಿಧಾಯಕರುಗಳು, ನ್ಯಾಯಾಧೀಶರುಗಳಿಗೂ ಮತ್ತು ನ್ಯಾಯಪರಿಪಾಲನೆಗೆ ಸಂಬಂಧಿಸಿದ ಇತರರಿಗೂ ಅವರ ನಡವಳಿಕೆಗೆ ಸಂಬಂಧಪಟ್ಟಂತೆ ಒಂದು ಸಂಹಿತೆಯನ್ನು ಮತ್ತು ನ್ಯಾಯಪರಿಪಾಲನೆಯಲ್ಲಿ ಏನಾದರೂ ಅಪರಾಧ ಮಾಡಿದರೆ ಅದಕ್ಕೆ ತಕ್ಕ ಶಿಕ್ಷೆಯನ್ನು ರೂಪಿಸಿದರು.

ಬಹುಕಾಲದ ಹಿಂದೆ ಅಸ್ತಿತ್ವದಲ್ಲಿದ್ದ ಶ್ರೇಣೀಕೃತ ನ್ಯಾಯಾಲಯಗಳ ಒಂದು ರೂಪುರೇಖೆಯನ್ನು ಪ್ರಾಚೀನ ಸ್ಮೃತಿಕಾರರು ಕೊಟ್ಟಿದ್ದರೂ, ಅವುಗಳ ರಚನೆಯ ಬಗ್ಗೆ ನಿರ್ದಿಷ್ಟವಾಗಿ ಏನನ್ನೂ ಹೇಳುವುದಕ್ಕೆ ಆಗುವುದಿಲ್ಲವೆಂದು ಭಾರತದ ಕಾನೂನು

ಆಯೋಗ ತನ್ನ ಹದಿನಾಲ್ಕನೇ ವರದಿಯಲ್ಲಿ ತಿಳಿಸಿದೆ. ಆದರೆ ಪ್ರಕ್ರಿಯೆ ನಿಯಮಗಳ ಹಾಗೂ ಸಾಕ್ಷ್ಯದ ಸಂಕೀರ್ಣ ವ್ಯವಸ್ಥೆಯ ವಿಕಾಸವನ್ನು ಗಮನಿಸಿದರೆ ಹಿಂದೆ ದೊಡ್ಡ ಪ್ರಮಾಣದಲ್ಲಿ ನ್ಯಾಯಾಲಯಗಳು ಇದ್ದಿರಲೇಬೇಕೆಂದು ನಾರದ, ಬೃಹಸ್ಪತಿ ಮತ್ತು ಇತರರ ಬರವಣಿಗೆಗಳು ಸೂಚಿಸುವಂತೆ ತೋರುತ್ತದೆ. ಜನಪ್ರಿಯ ನ್ಯಾಯಾಧಿಕರಣಗಳು, ಅದರಲ್ಲೂ ಗ್ರಾಮಾಂತರ ನ್ಯಾಯಾಲಯಗಳು ದೀರ್ಘಕಾಲದವರೆಗೆ ಅಸ್ತಿತ್ವದಲ್ಲಿದ್ದವು. ಅಷ್ಟೇಕೆ, ಬ್ರಿಟಿಷರ ಆಳ್ವಿಕೆ ಭಾರತದಲ್ಲಿ ಪ್ರಾರಂಭವಾದ ಸಮಯದಲ್ಲೂ ಅವು ಇದ್ದವು. ಪರಿಣಾಮಕಾರಿಯಾದ ಬೇರೆ ಯಾವ ನ್ಯಾಯಾಧಿಕರಣಗಳು ಹತ್ತಿರದಲ್ಲಿ ಎಲ್ಲೂ ಇರದ ಕಾರಣ, ಪ್ರಾಚೀನತೆಯ ಮೆರಗು ಇದ್ದ ಕಾರಣ ಇವುಗಳನ್ನು ಮೆಚ್ಚಿ ಮುಂದುವರಿಸಲಾಯಿತು. ಇಂಥ ನ್ಯಾಯಾಧಿಕರಣಗಳ ಪ್ರಧಾನ ಕಾರ್ಯವೆಂದರೆ ಪಕ್ಷಗಾರರ ನಡುವೆ ರಾಜಿಮಾಡಿಸುವುದು. ಸ್ಥಳೀಯ ಅರಸರುಗಳು ಸಾಮಾನ್ಯವಾಗಿ ಈ ನ್ಯಾಯಾಧಿಕರಣಗಳ ಕಾರ್ಯವಿಧಾನದಲ್ಲಿ ತಲೆಹಾಕುತ್ತಿರಲಿಲ್ಲ.

## ಪ್ರಾಚೀನ ಭಾರತದಲ್ಲಿದ್ದ ವಿವಿಧ ಬಗೆಯ ನ್ಯಾಯಾಲಯಗಳು

ರಾಜರೇ ಅಧ್ಯಕ್ಷತೆ ವಹಿಸುತ್ತಿದ್ದ ನ್ಯಾಯಾಲಯವೇ ಅತ್ಯುನ್ನತ ನ್ಯಾಯಾಲಯ. ಇದಲ್ಲದೆ ಬೇರೆ ನ್ಯಾಯಾಲಯಗಳೂ ಇದ್ದವು. ಇವುಗಳಲ್ಲಿ ಕೆಲವು ರಾಜನೇ ಸ್ಥಾಪಿಸಿದವುಗಳಾಗಿದ್ದವು. ಮತ್ತೂ, ಕೆಲವು ಜನತಾ ನ್ಯಾಯಾಲಯಗಳು. ಸ್ಮೃತಿಗಳ ಪ್ರಕಾರ ಈ ಜನತಾ ನ್ಯಾಯಾಲಯಗಳಿಗೆ ನ್ಯಾಯ ನಿರ್ಧರಿಸುವ ಅಧಿಕಾರ ಇದ್ದಿತು. ಆರೋಹ ಕ್ರಮದಲ್ಲಿ ಈ ಜನತಾ ನ್ಯಾಯಾಲಯಗಳು ಈ ಕೆಳಗೆ ಕಾಣಿಸಿರುವಂತೆ ಇದ್ದವು:

i. ಕುಲ-ಸಭೆಗಳು ಅಥವಾ ಕುಟುಂಬ ಸಮಿತಿಗಳು: ಈ ಸಭೆಗಳು ಅಥವಾ ಸಮಿತಿಗಳು ಪಕ್ಷಗಾರರ ಜಾತಿ ಅಥವಾ ಕುಟುಂಬದೊಳಗಿನ ನಿಷ್ಪಕ್ಷಪಾತ ವ್ಯಕ್ತಿಗಳನ್ನು ಒಳಗೊಂಡಿರುತ್ತಿದ್ದವು. ಈ ವ್ಯಕ್ತಿಗಳು ಪಂಚಾಯಿತಿದಾರರಾಗಿಯೋ ಅಥವಾ ಪಂಚಾಯಿತಿ ಮಂಡಳಿಯ ಸದಸ್ಯರಾಗಿಯೋ, ತಮ್ಮ ಕುಟುಂಬದ ಅಥವಾ ಜಾತಿಯ ನಡುವಣ ವ್ಯಾಜ್ಯಗಳನ್ನು ತೀರ್ಮಾನಿಸುತ್ತಿದ್ದರು.

ii. ಶ್ರೇಣಿ (ನಿಗಮ): ಒಂದೇ ಕುಲಕಸುಬು, ವೃತ್ತಿ ಅಥವಾ ವ್ಯಾಪಾರವನ್ನು ಮಾಡುವ ವ್ಯಕ್ತಿಗಳ ಸಮೂಹವನ್ನು ಒಳಗೊಂಡ ನ್ಯಾಯಾಲಯ.

iii. ಗಣ (ಕ್ಷೇತ್ರ ಸಭೆ): ಒಂದೇ ಸ್ಥಳಕ್ಕೆ ಸೇರಿದ, ಬೇರೆ ಬೇರೆ ಜಾತಿಯುವರಾಗಿದ್ದು, ಬೇರೆ ಬೇರೆ ಕಸುಬಿನ ವ್ಯಕ್ತಿಗಳನ್ನು ಒಳಗೊಂಡಿದ್ದ ಸಭೆಗಳು.

iv. ಅಧಿಕೃತ: ರಾಜನಿಂದ ಸ್ಥಾಪಿತವಾದ ನ್ಯಾಯಾಲಯಗಳು.

v. ನೃಪ: ರಾಜನೇ ನ್ಯಾಯಾಧಿಪತಿಯಾಗಿ ಕೂರುತ್ತಿದ್ದ ನ್ಯಾಯಾಲಯಗಳು.

ಇವುಗಳಲ್ಲದೇ, ಪ್ರತಿಷ್ಠಿತ (ಗ್ರಾಮ ಅಥವಾ ಊರಿನಲ್ಲಿ ಸ್ಥಾಪಿಸಲ್ಪಟ್ಟ ನ್ಯಾಯಾಲಯ), ಅಪ್ರತಿಷ್ಠಿತ (ಊರಿಂದೂರಿಗೆ ಸಂಚರಿಸುತ್ತಿದ್ದ ಸಂಚಾರಿ ನ್ಯಾಯಾಲಯ), ಮುದ್ರಿತ (ರಾಜನಿಂದ ಸ್ಥಾಪಿಸಲ್ಪಟ್ಟು ರಾಜ್ಞನ ಮುದ್ರೆಯನ್ನು ಬಳಸಲು ಅಧಿಕಾರವಿದ್ದ ನ್ಯಾಯಾಲಯ) ಮತ್ತು ಶಾಸಿತ (ರಾಜನು ಅಧಿಷ್ಠಿತನಾಗಿರುತ್ತಿದ್ದ ನ್ಯಾಯಾಲಯ) ಎಂಬುದಾಗಿ ವರ್ಗೀಕೃತ ಮಾಡಿದ ನ್ಯಾಯಾಲಯಗಳು ಇದ್ದವು.

## ಅಧಿಕಾರ ವ್ಯಾಪ್ತಿ

ಕುಲ, ಶ್ರೇಣಿ, ಮತ್ತು ಗಣ - ಈ ನ್ಯಾಯಾಲಯಗಳು ಸಾಹಸ ಎಂಬ ಶೀರ್ಷಿಕೆಯಡಿ ಬಾರದೆ ಇದ್ದ ಎಲ್ಲಾ ವ್ಯಾಜ್ಯಗಳನ್ನು ತೀರ್ಮಾನ ಮಾಡಬಲ್ಲವಾಗಿದ್ದವು. ಆದರೆ ದಂಡ ಮತ್ತು ದಂಡನೆ ಇವುಗಳನ್ನು ರಾಜ ಮಾತ್ರ ನಿರ್ಧರಿಸಬಲ್ಲವನಾಗಿದ್ದ.

ಜನತಾ ನ್ಯಾಯಾಲಯಗಳಲ್ಲಿ ಪಂಚಾಯಿತಿದಾರರುಗಳು ಇರುತ್ತಿದ್ದರು. ಎಲ್ಲ ತೆರನಾದ ವ್ಯಾವಹಾರಿಕ ವ್ಯಾಜ್ಯಗಳನ್ನು, ಕ್ರೌರ್ಯ ರಹಿತ ಅಪರಾಧ ಪ್ರಕರಣಗಳನ್ನೂ ಜನತಾ ನ್ಯಾಯಾಲಯಗಳು ತೀರ್ಮಾನ ಮಾಡುತ್ತಿದ್ದವು. ಆದರೆ, ತಾವು ವಿಧಿಸುತ್ತಿದ್ದ ದಂಡವನ್ನಾಗಲೀ ಅಥವಾ ದಂಡನೆಯನ್ನಾಗಲೀ ಜಾರಿಗೊಳಿಸಲು ಅವುಗಳಿಗೆ ಅಧಿಕಾರವಿರಲಿಲ್ಲ. ಈ ವಿಷಯಗಳು ದೊರೆಯ ಅವಗಾಹನೆಗೆ ಬಂದು ಸಮ್ಮತಿಪಡೆದುಕೊಂಡ ನಂತರ, ಅವನ ಆದೇಶದಂತೆ ಜಾರಿಗೊಳಿಸಲಾಗುತ್ತಿತ್ತು.

ಕುಲನ್ಯಾಯಾಲಯದ ತೀರ್ಮಾನವನ್ನು ಶ್ರೇಣಿ, ಶ್ರೇಣಿ ನ್ಯಾಯಾಲಯದ ತೀರ್ಮಾನವನ್ನು ಗಣ ನ್ಯಾಯಾಲಯ ಪುನರ್ ವಿಮರ್ಶೆ ಮಾಡುವ ಅಧಿಕಾರವನ್ನು ಹೊಂದಿದ್ದವು. ಗಣ ನ್ಯಾಯಾಲಯದ ತೀರ್ಮಾನವನ್ನು ನ್ಯಾಯಾಧೀಶರು ಪುನರ್‌ವಿಮರ್ಶೆ ಮಾಡಬಲ್ಲವರಾಗಿದ್ದರು. ರಾಜನ ನ್ಯಾಯಾಲಯ ಎಲ್ಲಕ್ಕಿಂತ ಉಚ್ಚಮೇಲ್ಮನವಿ ನ್ಯಾಯಾಲಯವಾಗಿದ್ದು ಅವನ ತೀರ್ಮಾನ ಅಂತಿಮ ತೀರ್ಮಾನವಾಗಿರುತ್ತಿತ್ತು.

ರಾಜ್ಯದಲ್ಲಿ ಅತ್ಯುಚ್ಚ ನ್ಯಾಯಾಲಯವಾಗಿ ತೀರ್ಪುಕೊಡುವ ವಿಶೇಷಾಧಿಕಾರ ರಾಜನದು ಎಂಬುದಾಗಿ ಮಾನ್ಯಮಾಡಲಾಗಿತ್ತು. ಯಾವನೇ ಪಕ್ಷಗಾರನು, ಯಾವುದೇ ನ್ಯಾಯಾಲಯದ, ಅಂದರೆ ಕುಲ, ಗಣ, ಶ್ರೇಣಿ ಅಥವಾ ಇನ್ನಾವುದೇ ನ್ಯಾಯಾಲಯದ ತೀರ್ಮಾನದ ಪುನರ್ ವಿಮರ್ಶೆಗಾಗಿ ರಾಜನಲ್ಲಿ ಮನವಿಮಾಡಿಕೊಳ್ಳಬಹುದಾಗಿತ್ತು. ಯಾವುದೇ ತೀರ್ಮಾನ ತಪ್ಪಾಗಿದ್ದರೆ - ಆ ತೀರ್ಮಾನ ಕೆಳಗಿನ ನ್ಯಾಯಾಲಯದ ತೀರ್ಮಾನವಾಗಿರಬಹುದು, ಇಲ್ಲವೇ, ತನ್ನದೇ ತೀರ್ಮಾನವಾಗಿರಬಹುದು - ರಾಜನು ಅದನ್ನು ಪುನರ್‌ವಿಮರ್ಶೆಯ ಅನಂತರ ತಳ್ಳಿಹಾಕಬಹುದಾಗಿತ್ತು ಎಂದು ಯಾಜ್ಞವಲ್ಕ್ಯನು ಹೇಳುತ್ತಾನೆ. ನ್ಯಾಯಾಲಯದ ಖರ್ಚನ್ನು ಕೂಡ ಕೊಡಬೇಕೆಂದು ರಾಜನು ಆಜ್ಞೆಮಾಡಬಹುದಾಗಿತ್ತು. ಅವನಲ್ಲಿ ಆವಾಹಿಸಿದ್ದ ಈ ಅಧಿಕಾರವನ್ನು ಅನಂತರದ ಮೊಘಲ್ ದೊರೆಗಳು, ಬ್ರಿಟಿಷ್ ರಾಜರುಗಳು ಮತ್ತು ಪ್ರಿವೀ ಕೌನ್ಸಿಲ್ ಚಲಾಯಿಸುತ್ತಿದ್ದ ಅಧಿಕಾರಕ್ಕೆ ಹೋಲಿಸಬಹುದು. ಈ ಪುನರ್‌ವಿಮರ್ಶೆಯ

ಅಧಿಕಾರವನ್ನೇ ಈಗ ದೇಶದ ಸರ್ವೋಚ್ಚ ನ್ಯಾಯಾಲಯಕ್ಕೆ ರಾಜ್ಯಾಂಗದ ಅನುಚ್ಛೇದ - 136ರ ಅನ್ವಯ ಕೊಡಲಾಗಿದೆ.

## ರಾಜನ ನ್ಯಾಯಾಲಯ

ಶಾಸಿತ ಎಂದು ಕರೆಯಲ್ಪಡುತ್ತಿದ್ದ ರಾಜನ ನ್ಯಾಯಾಲಯ ಅವನ ರಾಜ್ಯದಲ್ಲೇ ಸರ್ವೋಚ್ಚ ನ್ಯಾಯಾಲಯವಾಗಿರುತ್ತಿತ್ತು. ಸ್ಮೃತಿಗಳ ಅನುಸಾರ ಈ ನ್ಯಾಯಾಲಯ ರಾಜಧಾನಿಯಲ್ಲಿ, ರಾಜನ ಅರಮನೆಯಲ್ಲಿ ಇರಬೇಕಾಗಿದ್ದಿತು.

ರಾಜ, ಮುಖ್ಯ ನ್ಯಾಯಾಧೀಶ (ಪ್ರಾಡ್ವಿವಕ), ಮತ್ತು ನ್ಯಾಯಾಧೀಶರುಗಳು (ಸಭ್ಯರುಗಳು) ನ್ಯಾಯಾಲಯದ ನ್ಯಾಯಿಕ ಅಧಿಕಾರಿಗಳಾಗಿದ್ದರು. ಲೆಕ್ಕಿಗ (ಗಣಕ), ಬರಹಗಾರ (ಲೇಖಕ) ಮತ್ತು ಅಮೀನ (ಸ್ವಪುರುಷ) ಇವರುಗಳು ನ್ಯಾಯಿಕೇತರ ಅಧಿಕಾರಿಗಳಾಗಿದ್ದರು.

ಅಂತಿಮ ಆದೇಶವನ್ನು ಕೊಡುವ ಅಧಿಕಾರ ರಾಜನಲ್ಲಿ ನಿಹಿತವಾಗಿತ್ತು. ಪ್ರಕರಣಗಳ ಮೇಲೆ ತನ್ನ ಅಂತಿಮ ಅಭಿಪ್ರಾಯವನ್ನು ಮುಖ್ಯ - ನ್ಯಾಯಾಧೀಶ ಕೊಡಬೇಕಾಗಿದ್ದಿತು. ಹಾಗೆಯೇ, ಪ್ರತಿ ಪ್ರಕರಣದ ಟೊಳ್ಳುಗಟ್ಟಿಯನ್ನು ನ್ಯಾಯಾಧೀಶರುಗಳು ತನಿಖೆ ಮಾಡಬೇಕಾಗಿದ್ದಿತು. ಲೆಕ್ಕಿಗನು (ಗಣಕನು) ದಾವೆಯಲ್ಲಿ ಕೇಳಿದ ಹಣದ ಬಗ್ಗೆ ಲೆಕ್ಕ ಹಾಕಬೇಕಾಗಿದ್ದಿತು. ಬರಹಗಾರನು (ಲೇಖಕನು) ದಾವೆಯ ಪತ್ರ ಮತ್ತು ಸಾಕ್ಷಿಗಾರರ ಸಾಕ್ಷ್ಯಗಳು ಸೇರಿದಂತೆ ನ್ಯಾಯಾಲಯದ ನಡವಳಿಕೆಗಳನ್ನು ದಾಖಲಿಸಬೇಕಾಗಿದ್ದಿತು. ಪ್ರತಿವಾದಿಯನ್ನು ನಿರ್ಧಾರಕರನ್ನು ಹಾಗೂ ಸಾಕ್ಷಿಗಳನ್ನು ನ್ಯಾಯಾಲಯದಲ್ಲಿ ಹಾಜರುಪಡಿಸುವುದು ಅಮೀನರ ಹೊಣೆಯಾಗಿದ್ದಿತು. ಅಂತಿಮ ತೀರ್ಮಾನವನ್ನು ಕೊಡಲು ಆಧಾರವೇನೆಂಬುದನ್ನು ಸ್ಮೃತಿಗಳು ತಿಳಿಸುತ್ತವೆ. ಪ್ರಮಾಣಮಾಡಿಸಲು ಚಿನ್ನ ಮತ್ತು ಬೆಂಕಿಯನ್ನು ಇಡಲಾಗುತ್ತಿತ್ತು.

## ಮುಖ್ಯ ನ್ಯಾಯಾಧೀಶ

ನ್ಯಾಯ ಶಾಸ್ತ್ರದಲ್ಲಿ ಹೆಚ್ಚು ತಿಳುವಳಿಕೆಯುಳ್ಳವನು, ತರ್ಕಶಾಸ್ತ್ರ, ಮೀಮಾಂಸೆ ಮತ್ತು ಸಂಬಂಧಿಸಿದ ಇತರ ವಿಷಯಗಳಲ್ಲಿ ಪರಿಣಿತನು, ವೇದಗಳಲ್ಲಿ ಮತ್ತು ಸ್ಮೃತಿಯಲ್ಲಿ ಪಂಡಿತನು, ನ್ಯಾಯದ ಒರೆಗಲ್ಲಿಗೆ ಹಚ್ಚಿ ನ್ಯಾಯಿಕ ನಡವಳಿಕೆಗಳಿಂದ ಸತ್ಯವೇನು ಎಂದು ಕಂಡುಕೊಳ್ಳಬಲ್ಲ ಪುರುಷನೇ ಮುಖ್ಯ ನ್ಯಾಯಾಧಿಪತಿಯಾಗಿ ನೇಮಕಗೊಳ್ಳಲು ಅರ್ಹನಾಗಿರುತ್ತಿದ್ದನು.

## ನ್ಯಾಯಾಧೀಶರು ಮತ್ತು ಅವರ ಅರ್ಹತೆಗಳು

ಪ್ರಾಮಾಣಿಕತೆಯನ್ನು ಪರೀಕ್ಷಿಸಿ, ಪ್ರಮಾಣಿಸಿ ನೋಡಲ್ಪಟ್ಟ ಗೌರವಾನ್ವಿತ ಪುರುಷರನ್ನು ರಾಜನು ನ್ಯಾಯಾಧೀಶರನ್ನಾಗಿ ನೇಮಕ ಮಾಡುತ್ತಿದ್ದನು. ಇವರುಗಳು ನ್ಯಾಯಪರಿಪಾಲನೆಯ ಭಾರವನ್ನು ಹೊರಬಲ್ಲವರಾಗಿರಬೇಕಾಗಿದ್ದಿತು. ಅಲ್ಲದೇ, ಇವರು ಧರ್ಮಶಾಸ್ತ್ರದಲ್ಲೂ, ನ್ಯಾಯಶಾಸ್ತ್ರದ ನಿಯಮಗಳಲ್ಲೂ, ಚೆನ್ನಾಗಿ

ತಿಳುವಳಿಕೆಯುಳ್ಳವರಾಗಿದ್ದು ಮಿತ್ರರೇ ಆಗಲಿ, ಶತ್ರುಗಳೇ ಆಗಲಿ, ನಿಷ್ಪಕ್ಷಪಾತಿಗಳು ಮತ್ತು ಉದಾತ್ತ ಮನೋಭಾವವುಳ್ಳವರೂ ಕೂಡ ಆಗಿರಬೇಕಾಗಿದ್ದಿತು.

ರಾಜನು ನ್ಯಾಯದ ಮೂಲ ಸ್ಥಾನವಾಗಿದ್ದು, ಅವನೂ ಈ ನ್ಯಾಯಾಧೀಶರುಗಳನ್ನೇ ಅವಲಂಬಿಸಬೇಕಾಗಿತ್ತು. ಆದುದರಿಂದ, ಅವನ ಹಿತದೃಷ್ಟಿಯಿಂದಲೇ ನಂಬಲರ್ಹವಾದವರು, ಯೋಗ್ಯರೂ ಆದ, ಪುರುಷರನ್ನೇ ಈ ಸ್ಥಾನಗಳಿಗೆ ನೇಮಕಗೊಳಿಸಬೇಕಾಗಿದ್ದಿತು.

ನ್ಯಾಯಾಧೀಶರುಗಳಾಗಿ ನೇಮಕಗೊಳ್ಳಲು ವ್ಯಕ್ತಿಗಳಿಗೆ ಇರಬೇಕಾದ ಇನ್ನೂ ಕೆಲವು ವಿಶೇಷ ಲಕ್ಷಣಗಳನ್ನು ಕಾತ್ಯಾಯನನು ಹೇಳಿದ್ದಾನೆ:

i. ನ್ಯಾಯಾಧೀಶನು ಕ್ರೂರಿಯಾಗಿರಬಾರದು. ಹಸನ್ಮುಖಿಯೂ, ದಯಾಳುವೂ, ಬುದ್ಧಿವಂತನೂ, ಲವಲವಿಕೆಯುಳ್ಳವನೂ ಆಗಿದ್ದು, ದುರಾಸೆ ಇಲ್ಲದವನಾಗಿರಬೇಕು.

ii. ನ್ಯಾಯಾಧೀಶನು ಏಕಶಾಸ್ತ್ರ ಪಂಡಿತನಾಗಿರದೆ, ಬಹುಶಾಸ್ತ್ರಗಳನ್ನು ತಿಳಿದಂಥವನಾಗಿರಬೇಕು.

ಈ ಮೇಲ್ಕಂಡ ಅರ್ಹತೆಗಳೆಲ್ಲಾ ಇದ್ದ ಬ್ರಾಹ್ಮಣನಿಗೆ ಮೊದಲ ಒಲವು. ಅಂತಹ ಬ್ರಾಹ್ಮಣ ಸಿಗದೇ ಹೋದರೆ, ಈ ಅರ್ಹತೆಗಳಿರುವ ಕ್ಷತ್ರಿಯ ಅಥವಾ ವೈಶ್ಯನನ್ನು ನ್ಯಾಯಾಧೀಶನನ್ನಾಗಿ ನೇಮಕ ಮಾಡಬಹುದಾಗಿದ್ದಿತು. ಆದರೆ ಶೂದ್ರನೊಬ್ಬನನ್ನು ನ್ಯಾಯಾಧೀಶನನ್ನಾಗಿ ನೇಮಕಮಾಡಲು ಶಿಫಾರಸ್ಸುಮಾಡುವ ಹಾಗೇ ಇರಲಿಲ್ಲ. ಏಕೆಂದರೆ, ಆ ಕಾಲದ ಜನರ ಪದ್ಧತಿಯಂತೆ ಪವಿತ್ರ ಗ್ರಂಥಗಳನ್ನು ಶೂದ್ರರು ಅಭ್ಯಸಿಸುವ ಹಾಗಿರಲಿಲ್ಲ.

ಎಲ್ಲ ಧರ್ಮಶಾಸ್ತ್ರಗಳು ಹಾಗೂ ಸ್ಮೃತಿಗಳು ನ್ಯಾಯ ನಿರ್ಣಯವೇ ನ್ಯಾಯಾಧೀಶನ ಅತ್ಯುನ್ನತ ಧರ್ಮವೆಂದು ವಿಧಿಸಿದ್ದವು. ಮುಂದುವರೆದು ಹೀಗೆ ಹೇಳಲಾಗಿತ್ತು:

i. ನ್ಯಾಯ, ಧರ್ಮಕ್ಕೆ ಕ್ಷತಿಯಾಗಿದ್ದರೆ ಅಥವಾ ಅಧರ್ಮಕ್ಕೆ ಬಲಿಯಾಗಿ ಅವು ಸೊರಗಿದ್ದರೆ, ಅನ್ಯಾಯವನ್ನು ತೊಡೆದುಹಾಕುವುದರಲ್ಲಿ ನ್ಯಾಯಾಧೀಶರು ಸೋತಿದ್ದರೆ ಅಂಥ ಅಧರ್ಮದ ಕೆಲಸಕ್ಕೆ ಅವರು ಶಿಕ್ಷೆ ಅನುಭವಿಸಬೇಕು.

ii. ಎಲ್ಲಿ ಅಧರ್ಮದಿಂದ ಧರ್ಮವನ್ನು ಮತ್ತು ಅಸತ್ಯದಿಂದ ಸತ್ಯವನ್ನು ನಾಶಪಡಿಸುವ ಉದ್ದೇಶವಿರುತ್ತದೆಯೋ, ಅದಾಗ್ಯೂ ಅದನ್ನು ತಡೆಯುವುದರಲ್ಲಿ ನ್ಯಾಯಾಧೀಶರು ವಿಫಲರಾಗಿ ಮೂಕ ಪ್ರೇಕ್ಷಕರಾಗಿರುತ್ತಾರೋ ಅಂಥವರು ಖಂಡಿತವಾಗಿ ವಿನಾಶಹೊಂದುವರು.

### ಕಾನೂನಿನ ಪರಿಪಾಲನೆ

ಕುಲನ್ಯಾಯ ಪದ್ಧತಿಯಲ್ಲಿ ಅಥವಾ ಸಂಘಗಳಲ್ಲಿ, ಅಥವಾ ಗ್ರಾಮಗಳಲ್ಲಿ ನ್ಯಾಯ ತೀರ್ಮಾನಮಾಡುವಾಗ ಅವರು ಅನುಸರಿಸುತ್ತಿದ್ದ ಕಾನೂನು, ರೂಢಿ ಮತ್ತು ಬಳಕೆಯನ್ನು (ಪಾವಿತ್ರ್ಯದ ವರ್ತುಲದಲ್ಲಿ ಬರುವ ಧರ್ಮಸೂತ್ರಗಳ ಹೊರತಾಗಿ)

ಅವಲಂಬಿತವಾಗಿತ್ತು. ಕಾಲಾನುಕ್ರಮದಲ್ಲಿ ಆಯಾ ಸಮುದಾಯದ ವಿದ್ವಾಂಸರುಗಳು ಈ ರೂಢಿಗಳನ್ನು ಅಭ್ಯಸಿಸಿ ನಿರ್ದಿಷ್ಟವಾದ ನಿಯಮಗಳನ್ನಾಗಿ ಅವುಗಳನ್ನು ರೂಪಿಸಿ, ಕೈಪಿಡಿಗಳಲ್ಲಿ ಅಳವಡಿಸಿದರು. ಈ ಕೈಪಿಡಿಗಳೇ ಮುಂದೆ ಆಯಾ ಸಂಘಗಳ ಅಥವಾ ಸಂಪ್ರದಾಯಗಳ ಧರ್ಮಸೂತ್ರಗಳಾಗಿ ಪರಿವರ್ತನೆ ಹೊಂದಿದವು.

ರಾಜನು ನ್ಯಾಯಪರಿಪಾಲನೆ ಮಾಡುವುದಕ್ಕೆ ನ್ಯಾಯಸೂತ್ರಗಳನ್ನು ಮೂರು ಮೂಲಗಳಿಂದ ಪರಿಗ್ರಹಿಸಬೇಕೆಂದು ಗೌತಮನು ವಿಧಿಸಿದ್ದಾನೆ:

i. ವೇದಗಳು, ಧರ್ಮಸೂತ್ರಗಳು, ವೇದಾಂಗಗಳು, ಪುರಾಣಗಳು, ಇವುಗಳನ್ನೂ ಒಳಗೊಂಡಂತೆ ಶಾಸ್ತ್ರ ಗ್ರಂಥಗಳು,

ii. ದೇಶಗಳು, ಸಮುದಾಯಗಳು ಮತ್ತು ಕುಲಗಳು ಅನುಸರಿಸುವ ರೂಢಿ ಮತ್ತು ಬಳಕೆಗಳು,

iii. ಕೃಷಿಕರು, ವ್ಯಾಪಾರಿಗಳು, ಪಶುಪಾಲಕರು, ಸಾಲ ಕೊಡುವವರು ಮತ್ತು ಕುಶಲಕರ್ಮಿಗಳು ತಮ್ಮ ತಮ್ಮ ಸಮುದಾಯಗಳು, ತಮ್ಮ ವಿಷಯಕ್ಕೆ ಸಂಬಂಧಪಟ್ಟಂತೆ ತೀರ್ಮಾನ ಮಾಡಲು ಅನುಸರಿಸುತ್ತಿರುವ ರೂಢಿ ಮತ್ತು ಬಳಕೆಗಳು.

ರಾಜನ ನ್ಯಾಯಾಲಯದ ಸದಸ್ಯರುಗಳು ರಾಜನು ಅನ್ಯಾಯವಾಗಿ ವರ್ತಿಸಿದಾಗ ಮೌನಸಮ್ಮತಿಯನ್ನು ಕೊಡಬಾರದೆಂದು ಪ್ರಾಚೀನ ಗ್ರಂಥಗಳು ಸೂಚಿಸಿವೆ. ಹಾಗೇನಾದರೂ, ಸಮ್ಮತಿ ಸೂಚಕವಾಗಿ ಮೌನತಾಳಿದರೆ ಅವರೂ ಕೂಡ ಆ ರಾಜನ ಸಂಗಡವೇ ತಲೆ ಮುಂದಾಗಿ ನರಕಕ್ಕೆ ಬೀಳುತ್ತಾರೆಂದು ಎಚ್ಚರಿಸಿವೆ. ಯಾವ ನ್ಯಾಯಾಧೀಶರುಗಳು ದೊರೆಯು ಅನ್ಯಾಯವಾಗಿ ನಡೆದುಕೊಂಡಾಗ ತಮ್ಮ ಸಮ್ಮತಿಯನ್ನು ಕೊಡುತ್ತಾರೋ, ಆ ಪಾಪಕ್ಕೆ ಅವರೂ ದೊರೆಯೊಡನೆ ಭಾಗಿಗಳಾಗುತ್ತಾರೆಂದು ಆ ಗ್ರಂಥಗಳಲ್ಲಿ ಹೇಳಲಾಗಿದೆ.

ಇಂಥ ಸಂದರ್ಭವೊದಗಿದಾಗ ರಾಜನಿಗೆ ಪ್ರಿಯವಾಗುವಂಥ ಮಾತುಗಳನ್ನು ಮೊದಲು ಆಡಿ ಅವನನ್ನು ಸಮಾಧಾನ ಸ್ಥಿತಿಗೆ ತಂದು, ಅನಂತರ ಹಂತಹಂತವಾಗಿ ಅವನನ್ನು ಸರಿಯಾದ ದಾರಿಗೆ ಬರುವಂತೆ ಪ್ರೇರಿಸಿ, ಒಲಿಸಬೇಕು. ರಾಜನೇನಾದರೂ ಅನ್ಯಾಯವಾದ ತೀರ್ಮಾನವನ್ನು ಕೊಡುವಂತೆ ನ್ಯಾಯಾಧೀಶರಿಗೆ ನಿರ್ದೇಶಿಸಿದರೆ ಅಂಥ ಸಂದರ್ಭದಲ್ಲಿ, ನ್ಯಾಯಾಧೀಶನು ಆ ರೀತಿ ಆದೇಶ ನೀಡಬಾರದೆಂದು ದೊರೆಯನ್ನು ಪ್ರಾರ್ಥಿಸಿಕೊಳ್ಳಬೇಕು. ಅನ್ಯಾಯದ ದಾರಿ ಹಿಡಿಯುವ ಆದೇಶಗಳನ್ನು ಕೊಟ್ಟು ತಪ್ಪುಮಾಡದ ಹಾಗೆ ಅವನಿಗೆ ಮನವರಿಕೆ ಮಾಡಿಕೊಡಬೇಕು. ನ್ಯಾಯಾಧೀಶರುಗಳು ನ್ಯಾಯ ಮತ್ತು ಧರ್ಮಕ್ಕೆ ಅನುಸಾರವಾಗಿ ಮಾತ್ರ ತೀರ್ಪುಕೊಡಬೇಕು. ರಾಜನು ಅವರ ಈ ನ್ಯಾಯಾಯುತವಾದ ತೀರ್ಪನ್ನು ಕಡೆಗಣಿಸಿದರೆ, ಆ ಪಾಪವು ಅವರನ್ನೇನೂ ತಟ್ಟುವುದಿಲ್ಲವೆಂದು ಅವರನ್ನು ಹುರಿದುಂಬಿಸಲಾಗಿದೆ.

ನಿಷ್ಠುರವಾಗಿ ಮಾತನಾಡಿದ ಮಂತ್ರಿಗಳು, ನ್ಯಾಯಾಧೀಶರುಗಳು ಅಥವಾ ವೈದ್ಯರುಗಳ ಮೇಲೆ ರಾಜರು ಕೋಪಮಾಡಿಕೊಳ್ಳಬಾರದೆಂದು ಕೂಡ ಹೇಳಲಾಗಿದೆ.

ಏಕೆಂದರೆ, ಯಾವುದು ಉಚಿತವೋ, ಯಾವುದು ಸರಿಯೋ ಅದನ್ನು ಮಾತ್ರ ಅವರು ಹೇಳಬೇಕೇ ವಿನಾ ದೊರೆಗೆ ಒಪ್ಪಿಗೆಯಾಗುವಂಥ ಮಾತುಗಳನ್ನು ಅಲ್ಲ. ಯಾವ ರಾಜ್ಯದಲ್ಲಿ ಮಂತ್ರಿಗಳು, ನ್ಯಾಯಾಧೀಶರು, ವೈದ್ಯರುಗಳು ದೊರೆಯ ಮೂಗಿನ ನೇರಕ್ಕೆ ತಮ್ಮ ನಿರ್ಣಯವನ್ನು ಕೊಡುತ್ತಾರೋ, ಅಂಥಲ್ಲಿ, ಧರ್ಮವನ್ನು ನಿರ್ಲಕ್ಷ್ಯಮಾಡಿದ ಆ ದೊರೆಯು, ಅತಿ ಶೀಘ್ರದಲ್ಲಿ ತನ್ನ ರಾಜ್ಯವನ್ನೂ, ಶಾಂತಿ ಸಮಾಧಾನವನ್ನೂ ಕಳೆದುಕೊಳ್ಳುತ್ತಾನೆ.

ಸ್ಮೃತಿಗಳಲ್ಲಿ ವಿಧಿಸಿರುವಂತೆ ನ್ಯಾಯ ಪರಿಪಾಲನೆಯಲ್ಲಿ ನ್ಯಾಯಾಧೀಶರುಗಳ ಪಾತ್ರ ಉದಾತ್ತವಾದುದು. ದೊರೆಯ ಇಚ್ಛೆಗೆ ವಿರೋಧವಾಗಿದ್ದರೂ, ನಿರ್ಭೀತಿಯಿಂದ, ನಿಷ್ಪಕ್ಷಪಾತವಾಗಿ, ಮುಕ್ತ ಮನಸ್ಸಿನಿಂದ ತೀರ್ಮಾನಗಳನ್ನು ಕೊಡಬೇಕಾಗಿದ್ದುದು, ಅತ್ಯಗತ್ಯವೂ ಮತ್ತು ಮೆಚ್ಚಬೇಕಾಗಿದ್ದುದೂ ಆಗಿತ್ತು; ಇಂತಹ ವಿಧಿಗಳನ್ನು ಧೈರ್ಯವಾಗಿ ತಮ್ಮ ಗ್ರಂಥಗಳಲ್ಲಿ ಅಳವಡಿಸಿದ ಪ್ರಾಚೀನ ಸ್ಮೃತಿಕಾರರ ಬುದ್ಧಿಮತ್ತೆ ವೇದ್ಯವಾಗುತ್ತದೆ. ಸ್ವಾರಸ್ಯವೆಂದರೆ ಸ್ಮೃತಿಕಾರರು ಇಂಥ ವಿಧಿಗಳನ್ನು ಅಳವಡಿಸುವುದನ್ನು ಪ್ರಶ್ನಿಸಲು ಯಾವ ದೊರೆಯೂ ಧೈರ್ಯ ಮಾಡಲಿಲ್ಲ. ರಾಜನನ್ನು ಕಟ್ಟಿಹಾಕುವ ಧರ್ಮದ ಪರಮ ಪ್ರಧಾನತೆ, ನ್ಯಾಯಾಂಗದ ಸ್ವಾತಂತ್ರ್ಯ ಇವುಗಳನ್ನು ಬಿಂಬಿಸುವ ಇಂಥ ವಿಧಿಗಳು ನ್ಯಾಯಕ್ಕಿದ್ದ ಪ್ರಾಮುಖ್ಯತೆಯನ್ನು ತೋರಿಸುತ್ತವೆ. ಇದು 'ಕಾನೂನೆಂಬುದು ರಾಜರುಗಳ ರಾಜ' ಎಂಬ ಸ್ಪಷ್ಟೋಕ್ತಿಗೂ ಅನುಗುಣವಾಗೇ ಇದೆ. ರಾಜ ಮತ್ತು ಪ್ರಜೆಗಳಿಗೆ ಧರ್ಮದಲ್ಲಿದ್ದ ಶ್ರದ್ಧೆ, ನಂಬಿಕೆಗಳು ಕಾನೂನಿಗೆ ಅಧಿಕಾರ ಮುದ್ರೆಯನ್ನು ಕೊಟ್ಟವು; ಇದೇ ಸ್ವತಂತ್ರ ನ್ಯಾಯಾಂಗದ ಬುನಾದಿಯಾಯಿತು. ಅನುವಂಶಿಕ ರಾಜನ ರಾಜ್ಯದಲ್ಲೂ ಸಹ ಧರ್ಮವೇ ಪರಮ ಪ್ರಧಾನವಾದದ್ದು ಎಂಬ ತತ್ವವನ್ನು ಎತ್ತಿ ಹಿಡಿಯುವುದೇ ಸ್ವತಂತ್ರ ನ್ಯಾಯಾಂಗಕ್ಕೆ ಕೊಟ್ಟ ನಿರೂಪ.

## ಧರ್ಮಾಧಿಕರಣ (ನ್ಯಾಯಾಸ್ಥಾನ)

ನ್ಯಾಯಾಸ್ಥಾನವನ್ನು ಧರ್ಮಾಧಿಕರಣವೆಂದು ಕರೆಯಲಾಯಿತು. ರಾಜನು ನ್ಯಾಯ ಪ್ರದಾನಮಾಡಲು ಅರಮನೆಯಲ್ಲಿ ಅವನಿಗೆ ಒಂದು ವಿಶಾಲವಾದ ಸಭಾಂಗಣವನ್ನು ಕಾಯ್ದಿರಿಸಬೇಕೆಂದು ಸ್ಮೃತಿಗಳು ನಿಗದಿಪಡಿಸಿದ್ದವು. ಭವನದ ಸುತ್ತಮುತ್ತ ಮರಗಳನ್ನು ಬೆಳೆಸಬೇಕಾಗಿತ್ತು. ಹತ್ತಿರದಲ್ಲೇ ನೀರಿನ ಸೌಲಭ್ಯವು ಇರಬೇಕಾಗಿತ್ತು. ಸಭಾಂಗಣವನ್ನು ಹೂವಿನಿಂದ ಮತ್ತು ಮಣಿಗಳಿಂದ ಅಲಂಕರಿಸಿ ಸಾಕಾಗುವಷ್ಟು ಆಸನಗಳ ವ್ಯವಸ್ಥೆಯನ್ನು ಮಾಡಬೇಕಿತ್ತು. ದೇವದೇವತೆಯರ ವಿಗ್ರಹಗಳನ್ನು ಗೋಡೆಗಳ ಮೇಲೆ ಪ್ರದರ್ಶಿಸಬೇಕಾಗಿತ್ತು.

## ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶನಾಗಿ ರಾಜನ ಹೊಣೆಗಳು

ನ್ಯಾಯ ಪರಿಪಾಲನೆಯ ಹೊಣೆಗಾರಿಕೆಯನ್ನು ರಾಜನೇ ವಹಿಸಬೇಕಾದ ಅವಶ್ಯಕತೆಯನ್ನು ಸ್ಮೃತಿಗಳು ಒತ್ತಿಹೇಳುತ್ತವೆ. ಯಾವನೇ ವ್ಯಕ್ತಿ ಮೂಲ ಅರ್ಜಿಯನ್ನೋ, ಅಥವಾ ಕೆಳಗಿನ ನ್ಯಾಯಾಲಯದ ತೀರ್ಪಿನ ವಿರುದ್ಧ

ಮೇಲ್ಮನವಿಯನ್ನೋ ರಾಜನಿಗೆ ನೇರವಾಗಿ ಸಲ್ಲಿಸಿ ನ್ಯಾಯಕೇಳಬಹುದಾಗಿತ್ತು. ರಾಜ್ಯದ ಆಡಳಿತಕ್ಕೆ ಸಂಬಂಧಪಟ್ಟ ಅತಿ ಮುಖ್ಯ ವಿಚಾರಗಳಲ್ಲಿ ರಾಜನು ಮಗ್ನನಾಗಿದ್ದಾಗ, ಅಥವಾ ಅಂಥದೇ ಅನಿವಾರ್ಯ ಸಂದರ್ಭಗಳನ್ನು ಹೊರತುಪಡಿಸಿ ರಾಜನು ರಾಜ್ಯದ ಸರ್ವೋಚ್ಚ ನ್ಯಾಯಾಲಯದ ಪೀಠದಲ್ಲಿ ಕುಳಿತು ನ್ಯಾಯ ತೀರ್ಮಾನ ಮಾಡಬೇಕಾಗಿದ್ದಿತು. ಅತಿ ವಿಶೇಷ ಸಂದರ್ಭಗಳಲ್ಲಿ ರಾಜನು ತನ್ನ ಪರವಾಗಿ ನ್ಯಾಯಪೀಠದಲ್ಲಿ ಕೂರಲು ತನ್ನ ಮುಖ್ಯನ್ಯಾಯಾಧೀಶನಿಗೆ ಅಧಿಕಾರ ಕೊಡಬಹುದಾಗಿತ್ತು. ನ್ಯಾಯಪರಿಪಾಲನೆಯನ್ನು ದೈವಿಕ ಕರ್ತವ್ಯವೆಂದೇ ಭಾವಿಸಲಾಗಿತ್ತು. ರಾಜ್ಯದ ಕಾರ್ಯಾಂಗದ ಚಟುವಟಿಕೆಗಳಲ್ಲಿ ಭಾಗವಹಿಸಬೇಕಾದರೆ ರಾಜರು ರಾಜೋಚಿತವಾದ ಉಡುಪುಗಳನ್ನು ತೊಟ್ಟು, ಕಿರೀಟವನ್ನು ಧರಿಸಿ, ದರ್ಬಾರಿನಲ್ಲಿ ಸಿಂಹಾಸನಾರೂಢರಾಗಿರಬೇಕಾಗಿದ್ದಿತು. ಆದರೆ, ನ್ಯಾಯಿಕ ಕರ್ತವ್ಯಗಳನ್ನು ನಿರ್ವಹಿಸುವಾಗ ಬೆಲೆಬಾಳುವ ಉಡುಪುಗಳನ್ನು ತ್ಯಜಿಸಿ ಸರಳವಾದ ಉಡುಪನ್ನು ಧರಿಸಿ, ಮಂದಸ್ಮಿತನಾಗಿ ನ್ಯಾಯಾಂಗಣವನ್ನು ಪ್ರವೇಶಿಸಬೇಕಾಗಿದ್ದಿತು. ಇದರಿಂದಾಗಿ ಕಾರ್ಯಾಂಗದ ಚಟುವಟಿಕೆ, ನ್ಯಾಯಾಂಗದ ಚಟುವಟಿಕೆಗಳಲ್ಲಿನ ವ್ಯತ್ಯಾಸ ಸ್ಪಷ್ಟವಾಗಿ ಗೋಚರಿಸುತ್ತದೆ. ಈಗಿನ ನಮ್ಮ ನ್ಯಾಯಾಲಯಗಳಲ್ಲಿ ಅತಿ ವಿವಿರವಾದ ಸಾಧನ ಸಾಮಗ್ರಿಗಳನ್ನು ಸಜ್ಜು ಮಾಡುವುದನ್ನು ನೋಡಿದರೆ ಇವು ಮುಸ್ಲಿಂ ರಾಜರುಗಳ ಕಾಲದಲ್ಲಿ ರೂಢಿಗೆ ಬಂದು ತದನಂತರದಲ್ಲಿ ಅಟ್ಟಹಾಸ ಮತ್ತು ಪ್ರದರ್ಶನಪ್ರಿಯರಾದ ಬ್ರಿಟಿಷರ ಆಳ್ವಿಕೆಯಲ್ಲಿ ಮತ್ತಷ್ಟು ಬಲಗೊಂಡಿದ್ದು ಕಂಡುಬರುತ್ತದೆ.

ವ್ಯಾಪಾರಿಗಳ, ಕುಶಲಕೆಲಸಗಾರರ, ಕೈಕೆಲಸಗಾರರ (ಅಂದರೆ ಬಡಗಿ, ಚಮ್ಮಾರ, ಅಕ್ಕಸಾಲಿಗ ಇತ್ಯಾದಿ), ಕಲಾಕಾರರ ನಡುವಣ ವ್ಯಾಜ್ಯಗಳನ್ನು ಬಗೆಹರಿಸುವುದರಲ್ಲಿ ಸರಿಯಾದ ತೀರ್ಮಾನಕ್ಕೆ ಬರುವುದು ತಾಂತ್ರಿಕ ಸಮಸ್ಯೆಗಳ ಕಾರಣದಿಂದ ಕಷ್ಟವಾದರೆ, ಆಯಾ ಕ್ಷೇತ್ರದ ನಿಪುಣರ ಸಹಾಯವನ್ನು ಪಡೆದುಕೊಳ್ಳಬಹುದಾಗಿದ್ದಿತು. ಈ ನಿಪುಣರು ನಿರ್ಧಾರಕರಾಗಿ (ಅಸೆಸರ್ಸ್) ನಿಜ ಸಂಗತಿ ಏನೆಂದು ನಿರ್ಧರಿಸುವುದರಲ್ಲಿ ಸಹಾಯಮಾಡುತ್ತಿದ್ದರು.

ಈಗಿನ ಆಧುನಿಕ ವ್ಯವಸ್ಥೆಯಲ್ಲೂ ಕೂಡ ಇಂಥ ವಿಶೇಷ ಕ್ಷೇತ್ರಗಳಿಗೆ ಸಂಬಂಧಿಸಿದ ವ್ಯಾಜ್ಯಗಳನ್ನು ತೀರ್ಮಾನ ಮಾಡುವುದಕ್ಕೆ ನಿಪುಣರ ಸಹಾಯ ಪಡೆದುಕೊಳ್ಳುವುದರ ಔಚಿತ್ಯವನ್ನು ಕಂಡುಕೊಂಡು ಅಳವಡಿಸಿಕೊಳ್ಳಲಾಗಿದೆ. ವ್ಯಾಜ್ಯ ತೀರ್ಮಾನದಲ್ಲಿ ನಿಪುಣರ ಸಾಕ್ಷ್ಯ ಪ್ರಸಕ್ತವೆಂದು ಭಾರತ ಸಾಕ್ಷ್ಯ ಅಧಿನಿಯಮ ಪರಿಗಣಿಸಿದೆ. ಇತ್ತೀಚಿನ ಕಾಲದಲ್ಲಿ ನಿಪುಣರ ಸಹಾಯವನ್ನು ಪಡೆದುಕೊಳ್ಳುವ ಇನ್ನೊಂದು ಉದಾಹರಣೆಯೆಂದರೆ ವಿಶೇಷ ನ್ಯಾಯಾಧಿಕರಣಗಳ ರಚನೆ. ಈ ವಿಶೇಷ ನ್ಯಾಯಾಧಿಕರಣಗಳಲ್ಲಿ ನ್ಯಾಯಿಕ ವ್ಯಕ್ತಿಗಳೂ ಅಲ್ಲದೇ, ತಾಂತ್ರಿಕ ಅಥವಾ ಔದ್ಯೋಗಿಕ ಅರ್ಹತೆಗಳು ಇರುವವರನ್ನು ಮತ್ತು ಪ್ರಕೃತ ವಿಷಯಕ್ಕೆ ಸಂಬಂಧಪಟ್ಟಹಾಗೇ ಅನುಭವವಿರುವವರನ್ನು ಸದಸ್ಯರನ್ನಾಗಿ ತೆಗೆದುಕೊಳ್ಳಲಾಗುತ್ತದೆ.

ಯಾವ ಸಂದೇಹಕ್ಕೂ ಅವಕಾಶವಿರದ, ಸರ್ವಸಮ್ಮತವಾದ ತೀರ್ಮಾನಗಳನ್ನು

ಅತ್ಯುತ್ತಮವೆಂದು ಪರಿಗಣಿಸಲಾಗುತ್ತಿತ್ತು. ನ್ಯಾಯಾಧೀಶರುಗಳಲ್ಲಿ ಒಮ್ಮತವಿಲ್ಲದಿದ್ದಾಗ ಸಭ್ಯರುಗಳ (ನ್ಯಾಯಾಧೀಶರುಗಳ) ಬಹುಮತ ತೀರ್ಮಾನವೇ ನಿಲ್ಲುತ್ತಿತ್ತು. ಈಗಲೂ ಇದೇ ಉಪಾಯವನ್ನು ಅನುಸರಿಸಲಾಗುತ್ತಿದೆ.

ರಾಜನು ನ್ಯಾಯೀಧೀಶರುಗಳ ಅಭಿಪ್ರಾಯವನ್ನು ಒಪ್ಪಲೇಬೇಕಾದ ಇಲ್ಲವೇ, ಅವರ ಸಲಹೆ ತಿಳುವಳಿಕೆಯಂತೆ ನಡೆಯಬೇಕಿದ್ದ ಸಂದರ್ಭಗಳಲ್ಲಿ ಅಂಥ ಪ್ರಕರಣಗಳ ತೀರ್ಮಾನದಲ್ಲಿ ರಾಜನಿಗೆ ಹೊಣೆಗಾರಿಕೆಯೇ ಇರಲಿಲ್ಲವೆಂದೇನೂ ಹೇಳಲಾಗದು. ರಾಜನು ಪ್ರಕರಣಗಳನ್ನು ಅತ್ಯಂತ ಜಾಗರೂಕತೆಯಿಂದ ನಡೆಸಬೇಕೆಂದೂ, ನ್ಯಾಯಾಧೀಶರುಗಳು ಕೊಟ್ಟ ಅಭಿಪ್ರಾಯವನ್ನು ಗಮನದಲ್ಲಿಟ್ಟುಕೊಂಡು ಕಾನೂನಿನ ಚೌಕಟ್ಟಿನೊಳಗೆ ತೀರ್ಮಾನವನ್ನು ಕೊಡಬೇಕೆಂದು ನಿಯಮಗಳು ಸ್ಪಷ್ಟವಾಗಿ ಹೇಳುತ್ತವೆ. ಅಂದರೆ ಕಾನೂನಿನ ಪ್ರಶ್ನೆಗಳನ್ನು ನಿರ್ಧರಿಸುವಲ್ಲಿ ನ್ಯಾಯಾಧೀಶರ ಅಭಿಪ್ರಾಯವನ್ನು ಅನುಸರಿಸಬೇಕಾಗಿದ್ದು, ನಿಜಸಂಗತಿಗಳು. ಯಾವುವು ಎಂಬುದನ್ನು ರಾಜನೇ ತನ್ನ ಮನಸ್ಸಿನಲ್ಲಿ ವಿಮರ್ಶಿಸಿ ತೀರ್ಮಾನಕ್ಕೆ ಬರಬೇಕಾಗಿದ್ದಿತು. ವಸ್ತು ಸ್ಥಿತಿಯ ಬಗ್ಗೆ ತೀರ್ಮಾನಕ್ಕೆ ಬರಬೇಕಾದಾಗ, ರಾಜನು ಈ ಉದ್ದಿಶ್ಯಕ್ಕಾಗೇ ನೇಮಿಸಲ್ಪಟ್ಟ ವಣಿಕರ ಸಹಾಯವನ್ನು ಪಡೆಯಬಹುದಾಗಿತ್ತು. ಹಾಗೆಯೇ ಪ್ರಕರಣವೊಂದರ ವಿಚಾರಣೆ ನಡೆಯುವಾಗ ಪಕ್ಷಗಾರರು ನೀಡುವ ಸಾಕ್ಷ್ಯದ ಬಗ್ಗೆ ಎಚ್ಚರವಹಿಸಬೇಕಾದುದು ರಾಜನ ಕರ್ತವ್ಯವೆಂದು ವಿಧಿಸಲ್ಪಟ್ಟಿದೆ. ನ್ಯಾಯಾಲಯದ ಮುಂದೆ ಹೇಳಿಕೆ ಕೊಡುವಾಗ ಅದರ ಸತ್ಯಾಸತ್ಯತೆಯನ್ನು ಅಳೆಯಲು ಸಾಕ್ಷಿಗಳ ಮುಖಚರ್ಯೆಯನ್ನು ಅವನು ಗಮನಿಸಬೇಕಾಗಿದ್ದಿತು. ರಾಜ ಅಥವಾ ನ್ಯಾಯಾಧೀಶರು ಕಾನೂನಿನಲ್ಲಿ ನುರಿತ ವ್ಯಕ್ತಿಯ ಸಹಾಯವನ್ನೂ ಪಡೆಯಬಹುದಾಗಿದ್ದಿತು. ಇದನ್ನು ಈಗಿನ ವ್ಯವಸ್ಥೆಯಲ್ಲಿ ಪ್ರಚಲಿತವಾಗಿರುವ ನ್ಯಾಯಾಲಯ ಮಿತ್ರನ (ಅಮೈಕಸ್ ಕ್ಯೂರಿಯೀ) ನೇಮಕಕ್ಕೆ ಹೋಲಿಸಬಹುದು. ವಿಚಾರಣೆಯ ಕಾಲದಲ್ಲಿ ರಾಜನು ಏಕಾಗ್ರಚಿತ್ತನಾಗಿ ಇರಬೇಕಾಗಿದ್ದಿತು. ಕಾನೂನಿನ ಪ್ರಶ್ನೆಯ ಮೇಲೆ ನ್ಯಾಯಾಧೀಶರುಗಳ ಅಭಿಪ್ರಾಯವನ್ನು ಪಡೆದುಕೊಂಡು ವ್ಯವಹಾರ ಪ್ರಕರಣಗಳಲ್ಲಿ ಅಂತಿಮ ಆದೇಶವನ್ನು ಕೊಡುವುದಕ್ಕೂ ಅಪರಾಧ ಪ್ರಕರಣಗಳಲ್ಲಿ ಶಿಕ್ಷೆಯನ್ನು ನಿಗದಿಪಡಿಸುವುದಕ್ಕೂ ಕಟ್ಟಕಡೆಯ ಅಧಿಕಾರ ರಾಜನದೇ.

ವ್ಯವಹಾರ ಪ್ರಕರಣಗಳಿಗೂ ಮತ್ತು ಅಪರಾಧ ಪ್ರಕರಣಗಳಿಗೂ ನಿಚ್ಚಳವಾದ ವ್ಯತ್ಯಾಸವಿತ್ತು. ವ್ಯವಹಾರ ಪ್ರಕರಣಗಳಲ್ಲಿ ರಾಜನು ತಾನು ಅಧ್ಯಕ್ಷನಾಗಿ ಕೂರುತ್ತಿದ್ದ ನ್ಯಾಯಾಲಯದ ಇತರ ನ್ಯಾಯಾಧೀಶರುಗಳ ಅಭಿಪ್ರಾಯವನ್ನು ಪಡೆಯಲೇಬೇಕಾಗಿದ್ದಿತು. ರಾಜನು ಉಪಸ್ಥಿತನಿಲ್ಲದೇ ಇದ್ದ ಸಂದರ್ಭದಲ್ಲಿ ನ್ಯಾಯಾಲಯದ ಇತರ ನ್ಯಾಯಾಧೀಶರುಗಳ ತೀರ್ಮಾನವೇ ಕಟ್ಟಕಡೆಯ ತೀರ್ಮಾನವಾಗಿರುತ್ತಿತ್ತು. ಅದರ ಮೇಲೆ ರಾಜನ ಪುನರ್ ವಿಮರ್ಶೆಗೆ ಮಾತ್ರ ಅವಕಾಶವಿತ್ತು. ಅಪರಾಧ ಪ್ರಕರಣಗಳಲ್ಲಿ ಮಾತ್ರ ರಾಜನಿಗೆ ದಂಡ ಅಥವಾ ದಂಡನೆಯ ಪ್ರಮಾಣವನ್ನು ನಿರ್ಧರಿಸಲು ವಿಶೇಷ ಅಧಿಕಾರವಿತ್ತು.[5]

## ಕೌಟಿಲ್ಯನ ನ್ಯಾಯದ ಪರಿಕಲ್ಪನೆ

ಮೌರ್ಯರ ಕಾಲದಲ್ಲಿದ್ದ ನ್ಯಾಯಿಕ ಸಂಸ್ಥೆ ಮತ್ತು ಕಾನೂನು ಪ್ರಕ್ರಿಯೆಗಳು ಶಾಸನದ ಬಗ್ಗೆ 'ಅರ್ಥಶಾಸ್ತ್ರ'ಕ್ಕಿದ್ದ ಪರಿಕಲ್ಪನೆಯನ್ನು ಅವಲಂಬಿಸಿದ್ದವು. ಯಾವುದೇ ಒಂದು ನಿರ್ದಿಷ್ಟ ದೇಶದ ನ್ಯಾಯಿಕ ಸಂಸ್ಥೆ ಮತ್ತು ಕಾನೂನು ಪ್ರಕ್ರಿಯೆಗಳಿಗೂ ಆ ದೇಶದ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗಳಿಗೂ ಮತ್ತು ಅವುಗಳನ್ನು ನಿಭಾಯಿಸಲು ಆ ದೇಶಕ್ಕಿದ್ದ ಸಾಮರ್ಥ್ಯಕ್ಕೂ ನಿಕಟ ಸಂಬಂಧವಿರುತ್ತಿತ್ತು. ನ್ಯಾಯ ದೊರಕಿಸಿ ಕೊಡಬೇಕೆನ್ನುವ ತತ್ವದ ಬೆಳವಣಿಗೆಯು ಆ ಕಾಲದಲ್ಲಿದ್ದ ಸಾಮಾಜಿಕ ಹಾಗೂ ರಾಜಕೀಯ ಸ್ಥಿತಿಗತಿಗಳೊಂದಿಗೆ ಬೆಸೆದುಕೊಂಡಿತ್ತು. ನೈತಿಕ ಮತ್ತು ರಾಜಕೀಯ ತತ್ವಗಳು ಶಾಸನದ ಉಗಮ ಮತ್ತು ಬೆಳವಣಿಗೆಯನ್ನು ನಿರ್ಧರಿಸುತ್ತಿದ್ದವು. ಕೌಟಿಲ್ಯನ 'ಅರ್ಥಶಾಸ್ತ್ರ' ಒಂದು ಸವಿಸ್ತಾರವಾದ ಸಂಹಿತೆ. ಅದು, ಪೌರನ ಆಸ್ತಿ ಮತ್ತು ಪ್ರಾಣವನ್ನು ಕಾಪಾಡುವುದಕ್ಕೂ, ಆಸ್ತಿಯ ಒತ್ತುವರಿ, ಮಾನನಷ್ಟ, ಆಕ್ರಮಣ, ಪ್ರಾಣವನ್ನು ತೆಗೆಯಲು ಹಾಗೂ ಆಸ್ತಿಯನ್ನು ದೋಚಲು ಮಾಡುವ ಪ್ರಯತ್ನಗಳು, ವ್ಯಕ್ತಿಯ ಸ್ವಾತಂತ್ರ್ಯಹರಣ ಮಾಡಲು ಆಕ್ರಮಣ, ಸರ್ಕಾರಿ ಅಧಿಕಾರಿಗಳ ಹೇಯಕೃತ್ಯಗಳು, ಇವುಗಳೆಲ್ಲದರಿಂದ ರಕ್ಷಣೆ ನೀಡಲು ವಿಧಿಸಮ್ಮತವಾದ ನಿಯಮಗಳನ್ನು ಒಳಗೊಂಡಿದೆ.

ಬಹಳ ಹಿಂದಿನ ಕಾಲದಲ್ಲಿ ರಾಜನು ಮಾಡುವ ಶಾಸನಗಳೇ ನ್ಯಾಯಿಕ ವ್ಯವಸ್ಥೆಯಲ್ಲಿ ಪ್ರಧಾನವಾಗಿದ್ದುವು. ಇವುಗಳ ಕ್ರೋಢೀಕರಣಕ್ಕೆ ಕಾರಣವೆಂದರೆ:

i. ದೊರೆಯ ವ್ಯಕ್ತಿತ್ವವನ್ನು ಮತ್ತು ಹಕ್ಕುಗಳನ್ನು ಉಳಿಸಿಕೊಳ್ಳುವುದು

ii. ಒಳ್ಳೆಯ ಸರ್ಕಾರದಿಂದ ಪ್ರಯೋಜನಗಳು ದೊರಕುವಂತೆ ಮಾಡುವುದು

iii. ಹಿಂದಿನ ಶಾಸನಗಳಲ್ಲಿ ಸೇರ್ಪಡೆಯಾಗದಿದ್ದ ಅಪರಾಧಗಳಿಗೆ ಶಿಕ್ಷೆಯನ್ನು ಗೊತ್ತುಪಡಿಸುವುದು

ಶಾಸನಗಳ ಬಗ್ಗೆ ಕೌಟಿಲ್ಯನಿಗಿದ್ದ ಪರಿಕಲ್ಪನೆ ಕಟ್ಟುನಿಟ್ಟಾಗಿದ್ದರೂ ಅದು ಸರ್ವವ್ಯಾಪಿಯಾಗಿಯೂ ಇದ್ದಿತು. ಅವನ ಪ್ರಕಾರ ಶಾಸನವೆಂದರೆ ಸಾರ್ವಕಾಲಿಕ ಆದೇಶ, ಅದೇ ನ್ಯಾಯ, ಅದೇ ಕರ್ತವ್ಯ; ರಾಜ್ಯದ ಬುನಾದಿಯೇ ದಂಡನೆ ಅಥವಾ ಶಿಕ್ಷೆ. ಜನಗಳ ಅವಶ್ಯಕತೆಗಳಿಗೂ ಮತ್ತು ಆರ್ಥಿಕ ಸ್ಥಿತಿಗತಿಗಳಿಗೂ ಮೇಳೈಸುವ ಹಾಗೆ ಶಾಸನಗಳನ್ನು ಮಾಡುತ್ತಿದ್ದರು. "ಶಾಸನವೆಂದರೆ ದಂಡ ಶಕ್ತಿಯಿಂದ ಜಾರಿಗೆ ತರುವ ರಾಜಾಜ್ಞೆಗಳು ಮತ್ತು ಎಲ್ಲ ತೆರನಾದ ಮಾನವ ಚಟುವಟಿಕೆಗಳನ್ನು ನಿಯಂತ್ರಿಸುವ ಕಾರಣೀಭೂತವಾದ ಅಂಶ" ಎಂದು ಕೌಟಿಲ್ಯ ಹೇಳಿದ್ದಾನೆ. ಅವನು ದಂಡನೆಯನ್ನು ರಾಜಕೀಯದ ಉಗಮಸ್ಥಾನವೆಂದು ತಿಳಿದಿದ್ದನು. ರಾಜನ ಕೈಯಲ್ಲಿ ಅತ್ಯುನ್ನತ ಅಧಿಕಾರವಿದ್ದರೂ, ನ್ಯಾಯ ಪರಿಪಾಲನೆಯಲ್ಲಿ ಬೇಕಾಬಿಟ್ಟಿ ವರ್ತಿಸುವ ಹಾಗಿರಲಿಲ್ಲ.

ಮೌರ್ಯರ ಕಾಲದಲ್ಲಿ ಎರಡು ಬಗೆಯ ನ್ಯಾಯಾಸ್ಥಾನಗಳಿದ್ದವೆಂದು ಕೌಟಿಲ್ಯನ 'ಅರ್ಥಶಾಸ್ತ್ರ' ತಿಳಿಸುತ್ತದೆ. ಮೊದಲನೆಯದು ಧರ್ಮಸ್ಥೀಯ ಅಥವಾ ವ್ಯವಹಾರ ನ್ಯಾಯಾಲಯಗಳು, ಎರಡನೆಯದು, ಕಂಟಕಶೋಧನ ಅಥವಾ ಅಪರಾಧ

ನ್ಯಾಯಾಲಯಗಳು. ಧರ್ಮಸ್ಥೀಯ ನ್ಯಾಯಾಲಯಗಳು ಅಮಾತ್ಯರುಗಳಿಂದ ಸಂಸ್ಥಾಪಿಸಲ್ಪಟ್ಟು ಅವರಿಂದಲೇ ನಿರ್ದೇಶಿಸಲ್ಪಡುತ್ತಿದ್ದವು. ಸಾಂಪ್ರದಾಯಿಕ ನಿಯಮಗಳನ್ನು, ಕಟ್ಟುಪಾಡುಗಳನ್ನು ಅತಿಕ್ರಮಿಸಿದಾಗ ಉಂಟಾದ ಪ್ರಕರಣಗಳನ್ನು ವಿಲೇಮಾಡುವುದೇ ಅವುಗಳ ಮುಖ್ಯ ಕಾರ್ಯಭಾರವಾಗಿತ್ತು. ಅವುಗಳು ಅತ್ಯಲ್ಪ ಮೊತ್ತದ ದಂಡಗಳನ್ನು ವಿಧಿಸಬಹುದಾಗಿದ್ದು ಅವುಗಳ ವ್ಯಾಪ್ತಿ ಧರ್ಮಸ್ಥೀಯ ಶಾಸನಗಳಿಗೆ ಸಂಬಂಧಪಟ್ಟ ಹಾಗೆ ಮಾತ್ರ ಇದ್ದಿತು.

ಕಂಟಕಶೋಧನ ನ್ಯಾಯಾಲಯಗಳು ಸಾಮಾಜಿಕ ಹಾಗೂ ಸಂವಿಧಾನಾತ್ಮಕ ದೃಷ್ಟಿಕೋನದಿಂದ ಬಹು ಮುಖ್ಯವಾಗಿದ್ದವು. ಅದು ಅನೇಕ ಬಗೆಯ ಆರ್ಥಿಕ ಮತ್ತು ಸಾಮಾಜಿಕ ಸಮಸ್ಯೆಗಳನ್ನು ನಿಯಂತ್ರಿಸುತ್ತಿದ್ದಿತು. ಅಲ್ಲದೇ, ನ್ಯಾಯಾಲಯದ ಉಗಮವು ರಾಜಾಧಿಕಾರಯುತ ಅಧ್ಯಾದೇಶಗಳಲ್ಲಿ ನಿಹಿತವಾಗಿದ್ದಿತೆಂಬುದನ್ನು ಪ್ರಮಾಣಿಸುತ್ತಿದ್ದಿತು. ಅದರ ಅಧಿಕಾರ ವ್ಯಾಪ್ತಿಯು ಆರಕ್ಷಕರನ್ನು ನಿಯಂತ್ರಿಸುವ ನಿಯಮಗಳು; ಸಾರ್ವಜನಿಕ ಕ್ಷೇಮ, ಅಪರಾಧ ದಂಡನೆ, ಗುರುತರವಾದ ಹಾಗೂ ಸಾಮಾನ್ಯವಾದ ಅಪರಾಧಗಳ ವಿಚಾರಣೆಗೆ ಬೇಕಾದ ಪ್ರಕ್ರಿಯೆಗಳು ಇವುಗಳನ್ನು ಒಳಗೊಂಡಿರುತ್ತಿತ್ತು, ನಗರ ವಿಭಾಗ ಮತ್ತು ಗ್ರಾಮೀಣ ವಿಭಾಗವೆಂದು ಎರಡು ಮುಖ್ಯ ವಿಭಾಗಗಳನ್ನಾಗಿ ಕಂಟಕಶೋಧನ ನ್ಯಾಯಾಲಯವನ್ನು ವಿಂಗಡಿಸಲಾಗಿತ್ತು. ಸೂಕ್ಷ್ಮಾತಿಸೂಕ್ಷ್ಮ ವಿವರಗಳನ್ನೂ ಬಿಡದೆ ರಾಜನ ಶಾಸನಗಳನ್ನು ಜಾರಿ ಮಾಡುವುದೂ, ರಾಷ್ಟ್ರದ ಆಡಳಿತಾತ್ಮಕ ವ್ಯವಸ್ಥೆಯನ್ನು ನಿಯಂತ್ರಿಸುವುದೂ, ಆಡಳಿತಾಧಿಕಾರಿಗಳ ಕಾರ್ಯವಿಧಾನಕ್ಕೆ ಸಂಬಂಧಿಸಿದ ಶಾಸನವನ್ನು ನಿರ್ಧರಿಸುವುದೂ ಈ ನ್ಯಾಯಾಲಯದ ಉದ್ದೇಶ ಆಗಿತ್ತು.

ಈ ನ್ಯಾಯಾಲಯದ ಇನ್ನೊಂದು ಮುಖ್ಯ ಕಾರ್ಯಕ್ಷೇತ್ರವೆಂದರೆ ಕ್ಷಾಮಗಳಿಂದಲೂ, ಸಾಂಕ್ರಾಮಿಕ ರೋಗಗಳಿಂದಲೂ ದೇಶವನ್ನು ಕಾಪಾಡುವುದಾಗಿತ್ತು. ಭಾರತದ ಮೊದಲ ಸುವ್ಯವಸ್ಥಿತ ಸಾಮ್ರಾಜ್ಯದ ಆಶ್ರಯದಲ್ಲಿ ಮೊಟ್ಟಮೊದಲ ಬಾರಿಗೆ ಹತೋಟಿ ಮತ್ತು ನಿಯಂತ್ರಣಕ್ಕೆ ಒಳಪಟ್ಟ ಎಲ್ಲಾ ವಿಷಯಗಳ ಮೇಲೆ, ಉನ್ನತಮಟ್ಟದಲ್ಲಿ ಸಂಘಟಿತವಾದ ಅಧಿಕಾರಶಾಹಿಯು ತೆಗೆದುಕೊಂಡ ತೀರ್ಮಾನಗಳನ್ನು ಕಾರ್ಯರೂಪಕ್ಕೆ ತರುವುದರಲ್ಲಿ ಸಹಾಯ ಮಾಡಲು ಅನಂತರದ ದಿನಗಳಲ್ಲಿ ನ್ಯಾಯ ಶಾಸ್ತ್ರಜ್ಞರುಗಳನ್ನು ಜೊತೆಗೂಡಿಸಿಕೊಳ್ಳಲಾಯಿತು. ಸಮಾಜ ವಿರೋಧಿ ಶಕ್ತಿಗಳಿಂದ ಪೌರರಿಗೆ ರಕ್ಷಣೆಯನ್ನು ಕೊಡುವುದು ಕಂಟಕಶೋಧನ ನ್ಯಾಯಾಲಯಗಳ ಉದ್ದೇಶವಾಗಿತ್ತು.

ಕಂಟಕಶೋಧನವು ಬಹುಮುಖ್ಯವಾದ ನ್ಯಾಯಾಲಯವಾಗಿತ್ತೆಂಬುದರಲ್ಲಿ ಲವಲೇಶವೂ ಸಂಶಯವಿಲ್ಲ. ಅದನ್ನು ನ್ಯಾಯಿಕ ಸ್ವರೂಪದ ಇಲಾಖೆ ಎಂಬುದಾಗಿ ವರ್ಣನೆ ಮಾಡಬಹುದಾಗಿದೆ. ಇದನ್ನು ಹೆಚ್ಚುಕಡಿಮೆ ಇಂಗ್ಲೆಂಡ್ ದೇಶದ 'ಸ್ಟಾರ್ ಛೇಂಬರ್' *ಗೆ ಹೋಲಿಸಬಹುದಾಗಿದೆ. ಈ ನ್ಯಾಯಾಲಯದಲ್ಲಿ ರಾಜ್ಯದ ಶಾಸನಗಳ

---

* ಭಾಷಾಂತರಕಾರನ ಟಿಪ್ಪಣಿ: ಸ್ಟಾರ್ ಛೇಂಬರ್: - ಇಂಗ್ಲೆಂಡ್ ದೇಶದಲ್ಲಿ ಕ್ರಿ.ಶ. 1641ರವರೆಗೆ ಅಸ್ತಿತ್ವದಲ್ಲಿದ್ದ ನ್ಯಾಯಾಧಿಕರಣ. ಇದಕ್ಕೆ ವ್ಯವಹಾರ ಹಾಗೂ ಅಪರಾಧ ಪ್ರಕರಣಗಳನ್ನು ವಿಚಾರಣೆಮಾಡಲು ಅಧಿಕಾರವ್ಯಾಪ್ತಿಯಿತ್ತು. ಇದು ಲಂಡನ್ನಿನ ವೆಸ್ಟ್ ಮಿನಿಸ್ಟರ್‌ನಲ್ಲಿದ್ದ ಕೌನ್ಸಿಲ್ ಹಾಲ್‌ನಲ್ಲಿ ಸೇರುತ್ತಿತ್ತು.

ಹಾಗೂ ನಿಯಂತ್ರಣ ನಿಯಮಗಳ ಉಲ್ಲಂಘನೆಯಿಂದ ಉದ್ಭವಿಸಿದ ವ್ಯಾಜ್ಯಗಳನ್ನು ವಿಚಾರಣೆ ಮಾಡಲಾಗುತ್ತಿತ್ತು. ಇಂಥ ನ್ಯಾಯಾಲಯಗಳ ವಿಚಾರಣಾ ವ್ಯಾಪ್ತಿಯೊಳಗೆ ಈ ಕೆಳಕಂಡ ಮುಖ್ಯ ವಿಷಯಗಳು ಬರುತ್ತಿದ್ದವು:

i ಕುಶಲ ಕೆಲಸಗಾರರ ಹಿತಾಸಕ್ತಿಗಳ ರಕ್ಷಣೆ

ii ವಣಿಕರ ಹಿತಾಸಕ್ತಿಗಳ ರಕ್ಷಣೆ

iii ರಾಷ್ಟ್ರೀಯ ವಿಪತ್ತನ್ನು ಎದುರಿಸಲು ಮಾರ್ಗೋಪಾಯಗಳು

iv ಕ್ಷುದ್ರ ವಿಧಾನಗಳಿಂದ ಜನರು ಬದುಕು ಸಾಗಿಸದಂತೆ ತಡೆಗಟ್ಟುವಿಕೆ

v ಅಪರಾಧ ಪ್ರವೃತ್ತಿಯುಳ್ಳ ಯುವಕರನ್ನು ಗುರುತಿಸುವುದು

vi ಗುಮಾನಿಯ ಮೇಲೆ ಅಪರಾಧಿಗಳನ್ನು ವಶಕ್ಕೆ ತೆಗೆದುಕೊಳ್ಳುವುದು.

vii ಹಠಾತ್ ಸಾವುಗಳ ತನಿಖೆ

viii ಅನೀತಿಯುತ ಸ್ತ್ರೀಯರೊಂದಿಗೆ ಲೈಂಗಿಕ ಸಂಪರ್ಕದ ಪ್ರಕರಣಗಳು

ix ನ್ಯಾಯ ಉಲ್ಲಂಘನೆ ಮಾಡಿದವರಿಗೆ ಶಿಕ್ಷೆಗಳು

x ಚಿತ್ರಹಿಂಸೆ ಕೊಟ್ಟು ನ್ಯಾಯವಿರುದ್ಧವಾಗಿ ತಪ್ಪೊಪ್ಪಿಗೆ ಪಡೆದುಕೊಂಡ ಸಂಗತಿಗಳ ವಿಚಾರಣೆ

ಕಂಟಕಶೋಧನ ನ್ಯಾಯಾಲಯದ ನ್ಯಾಯಾಧೀಶರುಗಳು ಪ್ರಧಾನವಾಗಿ ಉನ್ನತ ಹುದ್ದೆಯ ಕಾರ್ಯನಿರ್ವಾಹಕ ಅಧಿಕಾರಿಗಳಾಗಿದ್ದು, ಅವರನ್ನು ನ್ಯಾಯಿಕ ಕರ್ತವ್ಯಗಳನ್ನೂ ನಿರ್ವಹಿಸಲು ನಿಯುಕ್ತಗೊಳಿಸಲಾಗುತ್ತಿತ್ತು ಎಂಬುದನ್ನು ಮುಖ್ಯವಾಗಿ ನೆನಪಿನಲ್ಲಿಟ್ಟುಕೊಳ್ಳಬೇಕು. ಅವರು ಧರ್ಮ, ಶಾಸನ ಮತ್ತು ನ್ಯಾಯ ಇವುಗಳಲ್ಲಿ ದೃಢನಿಷ್ಠೆಯುಳ್ಳವರಾಗಿರಬೇಕಿತ್ತು. ಕಾರ್ಯಾಂಗ ಮತ್ತು ನ್ಯಾಯಾಂಗ ಸಂಪೂರ್ಣವಾಗಿ ಬೇರ್ಪಟ್ಟಿರಲಿಲ್ಲ; ಕಾರ್ಯನಿರ್ವಾಹಕ ಅಧಿಕಾರಿಗಳು ಕಂಟಿಕಶೋಧನ ನ್ಯಾಯಾಲಯಗಳ ನ್ಯಾಯಾಧೀಶರಾಗಿ ಉಪಸ್ಥಿತರಾಗುತ್ತಿದ್ದರು. ಗಮನಿಸಬೇಕಾದ ಇನ್ನೊಂದು ಅಂಶವೆಂದರೆ ಕೌಟಿಲ್ಯನು ಯಾವಾಗಲೂ ಬಹುಪೀಠಸ್ಥ ನ್ಯಾಯಾಧೀಶರುಗಳೆಂದು ಹೇಳುತ್ತಾನೆಯೇ ವಿನಾ, ಒಬ್ಬನೇ ನ್ಯಾಯಾಧೀಶ ಕೂರುತ್ತಿದ್ದ ನ್ಯಾಯಾಲಯದ ಉಲ್ಲೇಖ ಮಾಡುವುದಿಲ್ಲ.

## ಸ್ಥಳೀಯ ಮತ್ತು ಪ್ರಾದೇಶಿಕ ನ್ಯಾಯಾಲಯಗಳು

ಮೇಲ್ಕಂಡ ಎರಡು ಮುಖ್ಯ ನ್ಯಾಯಾಲಯಗಳಲ್ಲದೆ ಅನೇಕ ಜನಪ್ರಿಯ ನ್ಯಾಯಾಲಯಗಳು ಅಸ್ತಿತ್ವದಲ್ಲಿದ್ದವು. ಇಂಥ ಅನಧಿಕೃತ ನ್ಯಾಯಾಲಯದ ಅಧಿಕಾರ ವ್ಯಾಪ್ತಿಯೊಳಗೆ ಬರುತ್ತಿದ್ದ ಅನೇಕ ಪ್ರಕರಣಗಳ ಬಗ್ಗೆ 'ಅರ್ಥಶಾಸ್ತ್ರ' ತಿಳಿಸುತ್ತದೆ. ವಿಳಂಬವಿಲ್ಲದೆ ಪ್ರಕರಣಗಳ ಇತ್ಯರ್ಥ ಆಗಬೇಕಾದ ಅಗತ್ಯ ಹಾಗೂ ಪ್ರಕರಣ ತನಿಖೆಯಲ್ಲಿ ಉಂಟಾಗುತ್ತಿದ್ದ ಜಟಿಲತೆಗಳು, ನ್ಯಾಯ ಪರಿಪಾಲನೆಯಲ್ಲಿ

ವಿಕೇಂದ್ರೀಕರಣದ ಕಡೆ ಒಲವು ಉಂಟಾಗುವುದಕ್ಕೆ ಬಹುಶಃ ಕಾರಣವೆಂದು ತೋರುತ್ತದೆ.

ಸ್ಥಳೀಯ ಜನರಿಗೆ, ಸ್ಥಳೀಯ ಸಮಸ್ಯೆಗಳು ಚೆನ್ನಾಗಿ ಪರಿಚಿತವಾಗಿರುತ್ತಿದ್ದುವೆಂದು ಭಾವಿಸಲಾಗಿತ್ತು. ಹೀಗಾಗಿ ಗಡಿ ಸರಹದ್ದುಗಳಿಗೆ ಸಂಬಂಧಿಸಿದ ವ್ಯಾಜ್ಯಗಳನ್ನು ಗ್ರಾಮದ ಹಿರಿಯರು ತೀರ್ಮಾನಿಸುತ್ತಿದ್ದರು. ಗ್ರಾಮಜೀವನದ ಎಲ್ಲ ಮುಖಗಳಲ್ಲೂ ಸಾರ್ವಜನಿಕ ಹೊಣೆಗಾರಿಕೆಯ ಅರಿವು ಎಲ್ಲ ಗ್ರಾಮಗಳಲ್ಲೂ ಇರಬೇಕೆಂದು ನಿರೀಕ್ಷಿಸಲಾಗಿತ್ತು. ಪರಿಷತ್ತುಗಳೆಂದು ಕರೆಯಲ್ಪಡುತ್ತಿದ್ದ ಸಮಿತಿಗಳು ಜಾತಿ ಮತ್ತು ಮತ ಇವುಗಳ ವಿರುದ್ಧ ನಡೆಯುತ್ತಿದ್ದ ಅಪರಾಧಗಳನ್ನು ವಿಚಾರಣೆ ಮಾಡುತ್ತಿದ್ದವು. ಏಕೆಂದರೆ, ಇಂಥ ವಿಷಯಗಳನ್ನು ಆಯಾ ಕ್ಷೇತ್ರದ ಪರಿಣಿತರು ಮಾತ್ರ ಪರಿಣಾಮಕಾರಿಯಾಗಿ ನಿರ್ವಹಿಸಬಲ್ಲವರಾಗಿದ್ದರು.

ಕೌಟಿಲ್ಯನು ರಾಜ್ಯದಲ್ಲಿನ ಬೇರೆ ಬೇರೆ ವಿಭಾಗ ಮತ್ತು ಉಪವಿಭಾಗಗಳಲ್ಲಿದ್ದ ನ್ಯಾಯಾಲಯಗಳನ್ನು ಕುರಿತು ಹೇಳುತ್ತಾನೆ. ಅವು ಯಾವುವೆಂದರೆ:

i. ಹತ್ತು ಗ್ರಾಮಗಳನ್ನೊಳಗೊಂಡ 'ಸಂಗ್ರಹಣ'

ii. ನಾಲ್ಕುನೂರು ಗ್ರಾಮಗಳನ್ನೊಳಗೊಂಡ 'ದ್ರೋಣಮುಖ'

iii. ಎಂಟುನೂರು ಗ್ರಾಮಗಳನ್ನೊಳಗೊಂಡ 'ಸ್ಥಾನೀಯ'

ಆದರೆ, ಅವನು ನ್ಯಾಯಾಲಯಗಳಲ್ಲೇ ಆಗಲಿ ಅಥವಾ ನ್ಯಾಯಾಧೀಶರುಗಳಲ್ಲೇ ಆಗಲಿ, ಹಂತ ಹಂತದ ವರ್ಗೀಕರಣವಿತ್ತೇ, ಇಲ್ಲವೇ, ಎಂದು ಹೇಳುವುದಿಲ್ಲ. ಹಾಗೆಯೇ, ಒಂದೇ ಶ್ರೇಣಿಗೆ ಸೇರಿದ ನ್ಯಾಯಾಧೀಶರುಗಳು ಸಣ್ಣ ಅಥವಾ ದೊಡ್ಡದಾದ ಆಡಳಿತಾತ್ಮಕ ಘಟಕಗಳಲ್ಲಿನ ನ್ಯಾಯಾಸ್ಥಾನಗಳಲ್ಲಿ ಉಪಸ್ಥಿತರಿರುತ್ತಿದ್ದರೇ ಎಂದು ಕೂಡ ಹೇಳುವುದಿಲ್ಲ. ನ್ಯಾಯಾಲಯಕ್ಕೆ ನೇಮಿಸಲ್ಪಡುವವರು ಮೂವರು ಧರ್ಮಸ್ಥರುಗಳು ಹಾಗೂ ಮೂವರು ಅಮಾತ್ಯರುಗಳು ಎಂದು ಮಾತ್ರ 'ಅರ್ಥಶಾಸ್ತ್ರ' ಹೇಳುತ್ತದೆ. ಈ ನ್ಯಾಯಾಲಯಕ್ಕೆ ಎಲ್ಲೆಡೆಯಲ್ಲೂ ಕೆಲಸಮಾಡಲು ಸಾಧ್ಯವಾಗುವ ಸಂಭವವೇ ಇರಲಿಲ್ಲ. ಅದರಲ್ಲೂ ಸಣ್ಣ ಘಟಕಗಳಲ್ಲಿನ ಪ್ರಕರಣಗಳನ್ನು ಗಮನಿಸುವುದಂತೂ ಸಾಧ್ಯವಾಗಲಾರದ ಮಾತು. ಆದುದರಿಂದ, ಸ್ವಲ್ಪಮಟ್ಟಿಗೆ ನ್ಯಾಯಾಂಗದ ವಿಕೇಂದ್ರೀಕರಣವಿತ್ತೆಂಬುದು ಸಂಭವನೀಯ. ಇದಲ್ಲದೇ, ರಾಜನಲ್ಲಿಗೆ ಮೇಲ್ಮನವಿ ಸಲ್ಲಿಸಲು ಪೌರನಿಗೆ ಅಂತರ್ನಿಹಿತ ಹಕ್ಕಿದ್ದರೂ ಒಂದು ನ್ಯಾಯಾಲಯದಿಂದ ಇನ್ನೊಂದು ಉನ್ನತ ನ್ಯಾಯಾಲಯಕ್ಕೆ ಶ್ರೇಣೀಕೃತ ಮೇಲ್ಮನವಿ ನ್ಯಾಯಾಲಯಗಳಿದ್ದಿರಬಹುದು ಎಂಬುದಕ್ಕೆ ಪುರಾವೆಗಳಿಲ್ಲ. ಕಂಟಕಶೋಧನ ನ್ಯಾಯಾಲಯದ ನ್ಯಾಯಾಧೀಶರುಗಳಿಗೆ, ತಪ್ಪು ಸಾಬೀತಾದ ಅಪರಾಧಿಗಳಿಗೆ ಶಿಕ್ಷೆ ವಿಧಿಸುವ ಜವಾಬ್ದಾರಿಯಲ್ಲದೆ, ವ್ಯಕ್ತಿಗಳ ಅಥವಾ ಗುಂಪುಗಳ ಸಮಾಜ ವಿರೋಧಿ ಚಟುವಟಿಕೆಗಳ ಮೇಲೆ ಕಟ್ಟುನಿಟ್ಟಾದ ನಿಗಾ ಇಡುವುದಲ್ಲದೇ, ಅಪರಾಧಗಳನ್ನು ಅಥವಾ ಸಮಾಜ ವಿರೋಧಿ ಚಟುವಟಿಕೆಗಳನ್ನು ಪತ್ತೆಹಚ್ಚಿ ತಪ್ಪು ಮಾಡಿದವರನ್ನು

ಅಥವಾ ಮಾಡುವ ಸಾಧ್ಯತೆಯಿರುವವರನ್ನು ಬಂಧಿಸುವ ಹೊಣೆಗಾರಿಕೆಯೂ ಇದ್ದಿತು.

ಬಿಂದುಸಾರನ ಮರಣಕಾಲದವರೆಗೂ ಮೌರ್ಯರ ನ್ಯಾಯಿಕ ವ್ಯವಸ್ಥೆಯು ಬದಲಾವಣೆಯಿಲ್ಲದೆ ಮುಂದುವರೆಯಿತು. ಆದರೆ, ಅಶೋಕನ ಆಳ್ವಿಕೆಯಲ್ಲಿ ಮಹತ್ವವಾದ ಆಡಳಿತಾತ್ಮಕ ಬದಲಾವಣೆಗಳನ್ನು ತರಲಾಯಿತು. ಇದರಿಂದಾಗಿ ಹೊಸ ಅಧಿಕಾರಿಗಳನ್ನು ನೇಮಕಮಾಡುವುದಲ್ಲದೇ, ಅವರ ಕರ್ತವ್ಯಗಳನ್ನು ವಿಸ್ತರಿಸಲಾಯಿತು. ಈ ಅಧಿಕಾರಿಗಳನ್ನು 'ರಾಜುಕರು' 'ಮಹಾಮಾತ್ರರು'ಗಳು ಮತ್ತು 'ಪ್ರದೇಶಿಕರು'ಗಳು ಎಂಬುದಾಗಿ ಕರೆಯಲಾಯಿತು. ಕಾರ್ಯನಿರ್ವಾಹಕ ಅಧಿಕಾರವಲ್ಲದೆ ನ್ಯಾಯಿಕ ಅಧಿಕಾರವನ್ನು ರಾಜುಕರ ಮೇಲೆ ಹೊರಿಸಿದ್ದರಿಂದ ಅವರ ಹೊಣೆಗಾರಿಕೆಗಳು ವೃದ್ಧಿಯಾದವು. ಅಪರಾಧ ಮಾಡಿದುದರ ಪರಿಣಾಮ ಎಂದರೆ - ಬಂಧನ, ತುರಂಗವಾಸ, ಮರಣದಂಡನೆಯ ಶಿಕ್ಷೆ ಇವುಗಳನ್ನು ಒಳಗೊಂಡಿತ್ತು ಎಂದು ಅಶೋಕನ ಸ್ತಂಭಶಾಸನ - IV ರಿಂದ ತಿಳಿದುಬರುತ್ತದೆ.

ಅಶೋಕನ ಶಿಲಾಶಾಸನಗಳು ಆ ಮಹಾನ್ ಚಕ್ರವರ್ತಿಯ ನ್ಯಾಯಿಕ ವ್ಯವಸ್ಥೆಯ ಸ್ವಾರಸ್ಯಕರ ವಿವರಗಳನ್ನು ತಿಳಿಸುತ್ತವೆ. ಒಟ್ಟಿನಲ್ಲಿ ಈ ಶಾಸನಗಳು ಅರ್ಥಶಾಸ್ತ್ರದಲ್ಲಿ ವಿವರಿಸಲಾಗಿರುವ ಚೌಕಟ್ಟಿನೊಳಗೆ ಈ ವ್ಯವಸ್ಥೆಗಳೂ ಇದ್ದವೆಂದು ತೋರಿಸುತ್ತವೆ.

ಹ್ಯೂ-ಯೆನ್-ತ್ಸಾಂಗ್‌ನ ಪ್ರಕಾರ ಅಶೋಕನು ತನ್ನ ಆಳ್ವಿಕೆಯ ಮೊದಲಲ್ಲಿ ಬಹಳ ಕ್ರೂರಿಯಾದ ರಾಜನಾಗಿದ್ದನೆಂದು, ನರಕವೆಂದು ಕರೆಯಲ್ಪಡುತ್ತಿದ್ದ ಒಂದು ಬಂಧೀಖಾನೆಯನ್ನು ಕಟ್ಟಿಸಿದ್ದನೆಂದು ತಿಳಿದುಬರುತ್ತದೆ. ಚಕ್ರವರ್ತಿಯ ಮುಂಚಿನ ನ್ಯಾಯಿಕ ವ್ಯವಸ್ಥೆಯ ಕಾಠಿಣ್ಯತೆಯ ಬಗ್ಗೆ ಅವನ ಶಾಸನಗಳು ಪುರಾವೆ ಒದಗಿಸುತ್ತವೆ. ಧವಳಿಯ ಬಂಡೆ ಶಾಸನ-1 ಅಶೋಕನ ಆಳ್ವಿಕೆಯಲ್ಲಿದ್ದ ನ್ಯಾಯಾಂಗದ ಕೆಲವು ಮುಖಗಳನ್ನು ವಿವರಿಸುತ್ತದೆ. ಈ ದಾಖಲೆಯು ದೇವನಾಂಪ್ರಿಯನ ಮೌಖಿಕ ಆಜ್ಞಾನುಸಾರ ಮಾಡಿದ ಹೇಳಿಕೆಯಿಂದ ಪ್ರಾರಂಭವಾಗುತ್ತದೆ. ಪಟ್ಟಣದ ನ್ಯಾಯಿಕ ಅಧಿಕಾರಿಗಳಾಗಿದ್ದ (ನಾಗಲವಿಯೋಹತಕ) ತೋಷಾಲಿಯ ಮಹಾಮಾತ್ರರುಗಳಿಗೆ (ಒರಿಸ್ಸಾ) ಹೀಗೆ ಹೇಳಬೇಕೆಂದು ಆ ಹೇಳಿಕೆ ತಿಳಿಸುತ್ತದೆ. ಅದೇನೆಂದರೆ:

> "ತೋಷಾಲಿಯ ಮಹಾಮಾತ್ರರುಗಳೇ, ನೀವು ಸಹಸ್ರಾರು ಜನರೊಂದಿಗೆ ಮಗ್ನರಾಗಿದ್ದೀರ. ನಿಮ್ಮ ಉದ್ದೇಶ ಆ ಮನುಷ್ಯರ ಪ್ರೀತಿಯನ್ನು ಸಂಪಾದಿಸುವುದು. ಆದರೆ, ಈ ನನ್ನ ಉದ್ದೇಶ ಎಷ್ಟುದೂರ ಮುಟ್ಟುತ್ತದೆ ಎಂದು ನೀವು ಕಲಿಯುವುದಿಲ್ಲ. ಎಲ್ಲೋ ಒಬ್ಬನು ಮಾತ್ರ ಕಲಿಯುತ್ತಾನೆ; ಅದರಲ್ಲೂ ಸ್ವಲ್ಪಭಾಗ ಮಾತ್ರ; ಎಲ್ಲವೂ ಅಲ್ಲ. ನ್ಯಾಯ ಪರಿಪಾಲನೆಯನ್ನು ಮಾಡುವಾಗ ಯಾವನು ಆಯಾಸವಾಯಿತೆನ್ನುತ್ತಾನೋ, ಅವನು ಮುಂದೆ ಬರುವುದಿಲ್ಲ."

ಮೇಲಿನ ರಾಜಾಜ್ಞೆಯ ಉದ್ಧೃತಿಯಿಂದ ಅಶೋಕನ ಆಳ್ವಿಕೆಯಲ್ಲಿನ ನ್ಯಾಯಿಕ ಪ್ರಕ್ರಿಯೆಗಳಲ್ಲಿ ಈ ಮುಂದೆ ತಿಳಿಸಿದ ಅಂಶಗಳಿದ್ದವೆಂದು ನಾವು ಸಾಧಿಸಬಹುದು:

i. ನಗರದ ನ್ಯಾಯಾಧೀಶರುಗಳು ಉನ್ನತ ಶ್ರೇಣಿಯ ಅಧಿಕಾರಿಗಳಾಗಿದ್ದರು.

ಅವರೇ ಮಹಾಮಾತ್ರರು. ಅವರು ಸಾವಿರಾರು ಜನರೊಂದಿಗೆ ವ್ಯವಹರಿಸುತ್ತಿದ್ದರು.

ii. ಚಕ್ರವರ್ತಿಯ ಆದೇಶಗಳನ್ನು ಜಾರಿಗೊಳಿಸುವುದು ಅವರ ಕರ್ತವ್ಯವಾಗಿತ್ತು. ನ್ಯಾಯ ಪರಿಪಾಲನೆಯನ್ನು ಅವರು ನೀತಿ (ದಂಡನೀತಿ) ಗನುಗುಣವಾಗಿ ಮಾಡಿ ಪ್ರಕರಣಗಳನ್ನು ಇತ್ಯರ್ಥಮಾಡಬೇಕಾಗಿದ್ದಿತು.

iii. ನ್ಯಾಯಾಧೀಶರುಗಳು ನಿಷ್ಪಕ್ಷಪಾತಿಗಳಾಗಿರಬೇಕಾಗಿತ್ತು. ಹಲವು ಒಲವು ಅಥವಾ ಇಚ್ಛೆಗಳಿಗೆ, ಕೋಪ ತಾಪಗಳಿಗೆ, ಆತುರ ಬುದ್ಧಿಗೆ ಬಲಿಯಾಗದಂತೆ ಇರಬೇಕಾಗಿತ್ತು.

ವಾಸ್ತವವಾಗಿ, ಅಶೋಕನ ನ್ಯಾಯಿಕ ವ್ಯವಸ್ಥೆಯು 'ನೀತಿ' ಎಂಬ ಸಂಹಿತೆಯ ಮೇಲೆ ಆಧಾರವಾಗಿತ್ತು. 'ನೀತಿ' ಎಂದರೆ 'ದಂಡನೀತಿ' ಎಂದೇ ತಿಳಿಯಲಾಗಿದೆ. ನ್ಯಾಯಿಕ ನಡವಳಿಕೆಗಳಲ್ಲೂ ಮತ್ತು ದಂಡನೆಗಳಲ್ಲೂ ನಿಷ್ಪಕ್ಷಪಾತವಾಗಿರುವುದು ಅಪೇಕ್ಷಣೀಯವಾದದ್ದು ಎಂದು ಅವನ ಶಾಸನ ಹೇಳುತ್ತದೆ. ಅಶೋಕನು ತನ್ನ ರಾಜ್ಯದಲ್ಲಿ ನ್ಯಾಯ ಪರಿಪಾಲನೆ ಸಮರ್ಪಕವಾಗಿರುವುದರ ಬಗ್ಗೆ ಕಟ್ಟೆಚ್ಚರದಿಂದ ಇರುತ್ತಿದ್ದನು. ಐದು ವರ್ಷಗಳಿಗೊಮ್ಮೆ ಅವನ ಉನ್ನತ ಅಧಿಕಾರಿಗಳು ಅಂದರೆ ಯುಕ್ತರು, ರಾಜುಕರು ಮತ್ತು ಪ್ರದೇಶಿಕರು ರಾಜ್ಯದಲ್ಲೆಲ್ಲಾ ಸಂಚರಿಸಿ ನ್ಯಾಯಾಧೀಶರುಗಳು ತಮ್ಮ ಕರ್ತವ್ಯಗಳನ್ನು ಸರಿಯಾದ ರೀತಿಯಲ್ಲಿ ನಿರ್ವಹಿಸುತ್ತಿದ್ದಾರೆಯೇ ಎಂಬುದನ್ನು ಪರೀಕ್ಷಿಸುತ್ತಿದ್ದರು.

ಅಶೋಕನ ಕಾಲದಲ್ಲಿ ನ್ಯಾಯಾಲಯಗಳು ಎರಡು ವರ್ಗಗಳಾಗಿದ್ದವೆಂದು ದೊರಕಿರುವ ಮಾಹಿತಿಗಳಿಂದ ಗೋಚರಿಸಿವೆ. ಸಾಧಾರಣ (ಮುಖ್ಯ) ಮತ್ತು ವಿಶೇಷ (ಅಮುಖ್ಯ). ಎರಡನೆಯ ವರ್ಗದಲ್ಲಿ ವಿಶೇಷ ಕಸುಬು, ವಾಣಿಜ್ಯ ಸಂಘ, ಜಾತಿಗಳಿಗೆ ಸೇರಿದ ಪಕ್ಷಕಾರರ ನಡುವಿನ ಪ್ರಕರಣಗಳನ್ನು ವಿಚಾರಣೆ ಮಾಡುತ್ತಿದ್ದ ವಿಶೇಷ ನ್ಯಾಯಾಲಯಗಳಿದ್ದವು. ಈ ಪ್ರಕರಣಗಳನ್ನು ಆಯಾ ಗುಂಪಿಗೆ ಅನ್ವಯವಾಗುವ ವಿಶೇಷ ಶಾಸನಗಳು ಅಥವಾ ಪದ್ಧತಿಗಳ ಅನುಸಾರ ತೀರ್ಮಾನ ಮಾಡಬೇಕಾಗಿತ್ತು. ಸಾಧಾರಣ ನ್ಯಾಯಾಲಯಗಳಲ್ಲಿ ಕೆಲವು ಸ್ಥಾಯಿ ನ್ಯಾಯಾಲಯಗಳು (ಪ್ರತಿಷ್ಠಿತ), ಇನ್ನು ಕೆಲವು ಸಂಚಾರಿ ನ್ಯಾಯಾಲಯಗಳಾಗಿದ್ದವು, (ಅಪ್ರತಿಷ್ಠಿತ). ಈ ನ್ಯಾಯಾಲಯಗಳಲ್ಲೂ ಎರಡು ಪ್ರಭೇದಗಳಿದ್ದವು. ಮೊದಲನೆಯದು ಸಸ್ತ್ರಿತ ಅಂದರೆ ರಾಜನು ತಾನೇ ಸ್ವತಃ ಉಪಸ್ಥಿತನಿರುತ್ತಿದ್ದ ನ್ಯಾಯಾಲಯ. ಎರಡನೆಯದು ಮುದ್ರಿತ ಅಂದರೆ ರಾಜಮುದ್ರೆಯಿಂದ ನೇಮಿಸಲ್ಪಟ್ಟ ನ್ಯಾಯಾಧೀಶರುಗಳು ಉಪಸ್ಥಿತರಾಗಿರುತ್ತಿದ್ದ ನ್ಯಾಯಾಲಯ. ಸರ್ವೋಚ್ಚ ನ್ಯಾಯಾಲಯದಲ್ಲಿ ರಾಜನು ತಾನೇ ಸ್ವತಃ ಪೀಠಸ್ಥನಾಗಿರುತ್ತಿದ್ದನೆಂದು, ಪ್ರಾಂತೀಯ ಮಟ್ಟದ ನ್ಯಾಯಾಲಯಗಳಲ್ಲಿ ಸರ್ವೋಚ್ಚ ನ್ಯಾಯಾಲಯ ನಿಯುಕ್ತಗೊಳಿಸುತ್ತಿದ್ದ ನ್ಯಾಯಾಧೀಶರುಗಳು ಕೂರುತ್ತಿದ್ದರೆಂದು ಸ್ಥೂಲವಾಗಿ ಭಾವಿಸಬಹುದು. ಮನುವಿನ ಪ್ರಕಾರ ಒಬ್ಬ ರಾಜನು ತಾನೇ ಸ್ವತಃ ಕೂರಲು ಸಾಧ್ಯವಾಗದೇ ಇದ್ದಾಗ ತನ್ನ ಪರವಾಗಿ

ಒಬ್ಬ ಪ್ರತಿನಿಧಿಯನ್ನು ನೇಮಕ ಮಾಡುವುದಕ್ಕೆ ಅಧಿಕಾರವಿತ್ತು. ಆ ರೀತಿಯಾಗಿ ಪ್ರತಿನಿಧಿಸಿದ ಅಧಿಕಾರಿ ರಾಜನ ಎಲ್ಲ ಅಧಿಕಾರಗಳನ್ನು ಚಲಾಯಿಸಬಹುದಾಗಿತ್ತು.

## ಜನಾನುರಾಗಿ ನ್ಯಾಯಾಲಯಗಳು ಮತ್ತು ಅವುಗಳ ಉಪಯುಕ್ತತೆ

ಸಭೆ (ಗ್ರಾಮಸಭೆ) ಎಂಬ ನ್ಯಾಯಾಲಯದಿಂದ ಪ್ರಾರಂಭಿಸಿ ರಾಜನ ನ್ಯಾಯಾಲಯದಲ್ಲಿ (ರಾಜ್ಯಸಭೆ) ಕೊನೆಮುಟ್ಟುತ್ತಿದ್ದ ಅನುಕ್ರಮವಾಗಿ ವರ್ಗೀಕರಿಸಲ್ಪಟ್ಟ ಸರಣಿ ನ್ಯಾಯಾಲಯಗಳು ಹಾಗೂ ಅನೇಕ ಸ್ಥಳೀಯ ಜನಪ್ರಿಯ ನ್ಯಾಯಾಲಯಗಳು ಜನರಿಗೆ ನ್ಯಾಯವನ್ನು ದೊರಕಿಸಿಕೊಡುತ್ತಿದ್ದವು. ನ್ಯಾಯಾಲಯಗಳ ವರ್ಗೀಕರಣಕ್ಕೆ ಕೌಟಿಲ್ಯ ಮತ್ತು ಮನು ಎರಡು ಬೇರೆ ಪದ್ಧತಿಯನ್ನು ಮಂಡಿಸಿದ್ದಾರೆ. ಜನಪ್ರಿಯ ನ್ಯಾಯಾಲಯಗಳಿಗೆ ಮನು ಕೊಡುವ ಪ್ರಾಮುಖ್ಯತೆಯನ್ನು ಕೌಟಿಲ್ಯನು ಕೊಡುವುದಿಲ್ಲ. ಕೌಟಿಲ್ಯನ ಯೋಜನೆಯ ಪ್ರಕಾರ ನ್ಯಾಯಾಲಯಗಳು ಸಂಗ್ರಹಣ, ದ್ರೋಣಮುಖ, ಸ್ಥಾನೀಯಗಳಲ್ಲಿ ಹಾಗೂ ಜಿಲ್ಲೆಗಳು ಸೇರುವಲ್ಲಿ ಸ್ಥಾಪಿಸಲಾಗುತ್ತಿತ್ತು. ಮನುವಿನ ಯೋಜನೆಯಲ್ಲಿ (ಈ ಯೋಜನೆಯನ್ನು ಯಾಜ್ಞವಲ್ಕ್ಯ, ನಾರದ, ಬೃಹಸ್ಪತಿ ಮತ್ತು ಕಾತ್ಯಾಯನರು ಅಳವಡಿಸಿಕೊಂಡಿದ್ದಾರೆ) ನ್ಯಾಯಾಲಯಗಳನ್ನು ರೂಪಿಸುವುದಕ್ಕೆ ಮತ್ತು ವರ್ಗೀಕರಿಸುವುದಕ್ಕೆ ಸಭಾಪದ್ಧತಿಯು ಮೂಲವಾಗಿದೆ. ಕೌಟಿಲ್ಯನಿಗೆ ಅಧಿಕವಾಗಿ ಕೇಂದ್ರೀಕರಣ ಮಾಡಿದ ಸರ್ಕಾರದ ಬಗ್ಗೆ ಒಲವಿದ್ದುದರಿಂದ, ನ್ಯಾಯ ಪರಿಪಾಲನೆಗಾಗಿ ವಿಕೇಂದ್ರೀಕರಣಕ್ಕೆ ಒಲವು ತೋರಿಸಿದ್ದು ಕಂಡುಬರುತ್ತದೆ. ಈ ಉದ್ದೇಶದಿಂದಲೇ ಅವನು ಅನೇಕ ಪ್ರಕರಣಗಳನ್ನು ಅನಧಿಕೃತ ನ್ಯಾಯಾಲಯಗಳ ವ್ಯಾಪ್ತಿಗೆ ಬಿಟ್ಟುಬಿಟ್ಟನು. ಉದಾಹರಣೆಗೆ, ಸರಹದ್ದು, ಎಲ್ಲೆಗಳಿಗೆ ಸಂಬಂಧಿಸಿದ ಪ್ರಕರಣಗಳ ಇತ್ಯರ್ಥವನ್ನು ಗ್ರಾಮದ ಹಿರಿಯರು ಮಾಡಬೇಕಿತ್ತು.

ಒಟ್ಟಿನಲ್ಲಿ ಹೇಳುವುದಾದರೆ ಪ್ರಾಚೀನ ಭಾರತದಲ್ಲಿ ಶಾಸನಗಳು ಮತ್ತು ಕಾನೂನು ಪ್ರಕ್ರಿಯೆಗಳು ವೇದಗಳ ಕಾಲದಿಂದ ಹಿಡಿದು ಮದ್ಯಯುಗದವರೆಗೂ ತಕ್ಕಮಟ್ಟಿಗೆ ಅಭಿವೃದ್ಧಿಯಾಗಿತ್ತು. ಕೌಟಿಲ್ಯನ ಕಾನೂನು ಪ್ರಕ್ರಿಯೆಯ ನಿಯಮಗಳು ಒಳಗೊಂಡಿದ್ದ ವಿವರಗಳು ಹೀಗಿವೆ: ವಾದಿಯ, ಪ್ರತಿವಾದಿಯ ಹಾಗೂ ಅವರ ಸಾಕ್ಷಿಗಳ ವಿಚಾರಣೆ. ಇದಲ್ಲದೆ ತಾಂತ್ರಿಕ ವಿಷಯಗಳು ಅಂದರೆ ವಾದಪತ್ರವನ್ನು ರೂಪಿಸುವುದು, ತಮ್ಮ ತಮ್ಮ ದೃಷ್ಟಿಯಿಂದ ವ್ಯಾಜ್ಯ ಸಂಗತಿಗಳನ್ನು ಹೇಳುವುದಕ್ಕೆ, ವಿಚಾರಣೆಯನ್ನು ಮುಂದೂಡಲು ಅನುಮತಿಕೊಡುವುದು, ಕಾನೂನು ಸಮ್ಮತ ವ್ಯವಹಾರಗಳನ್ನು ಮಾಡಲು ಇದ್ದ ಅನರ್ಹತೆಗಳು, ಅಂತಿಮ ತೀರ್ಮಾನ ಕೊಡುವುದಕ್ಕೆ ಆಧಾರಗಳು, ಎಲ್ಲಕ್ಕೂ ಮುಖ್ಯವಾಗಿ ವಾದ ಪತ್ರದಲ್ಲಿ ಈ ಕೆಳಕಂಡ ವಿವರಗಳು ಇರಬೇಕಾಗಿದ್ದವು: ವ್ಯಾಜ್ಯ ಕಾರಣದ ವರ್ಷ, ಋತು ತಿಂಗಳು, ಪಕ್ಷ ಮತ್ತು ದಿವಸ, ಸಂಬಂಧಪಟ್ಟ ದಸ್ತಾವೇಜುಗಳು, ಪ್ರಕರಣವನ್ನು ವಿಚಾರಣೆಗೆ ತೆಗೆದುಕೊಳ್ಳಬೇಕಾದ ನ್ಯಾಯಾಲಯ, ಋಣದ ಮೊಬಲಗು ಅಥವಾ ಇತರ ಬಾಕಿ ಹಣ, ದೇಶ, ಗ್ರಾಮ, ಜಾತಿ, ಕುಟುಂಬ ವಾದಿ ಪ್ರತಿವಾದಿಗಳ ಹೆಸರುಗಳು ಮತ್ತು ಉದ್ಯೋಗ ಹಾಗೂ ಪಕ್ಷಗಾರರ ನಡುವಿನ ಪರಸ್ಪರ ಸಂಬಂಧ. ಕೆಲವು

ಪ್ರಕರಣಗಳಲ್ಲಿ ಪಕ್ಷಗಾರನು ರಾಜನಿಗೆ ಅಲ್ಪ ನ್ಯಾಯಾಲಯ ಶುಲ್ಕವನ್ನು ಕೊಡಬೇಕಾಗಿತ್ತೆಂದು ನಾವು ತಿಳಿಯುತ್ತೇವೆ. ಪಕ್ಷಗಾರರ ಕೇಳಿಕೆಯ ಮೇರೆಗೆ ಪ್ರಕರಣವನ್ನು ಎಷ್ಟು ಅವಧಿಯವರೆಗೆ ಮುಂದೂಡಬಹುದಾಗಿತ್ತೆಂಬುದರ ಬಗ್ಗೆ ಕೌಟಿಲ್ಯನು ಅಳವಡಿಸಿದ ಖಂಡವನ್ನು ಹೋಲುವ ಖಂಡವನ್ನು ಗೌತಮನು ಸೇರಿಸಿದ್ದನೆಂದು ನಾವು ತಿಳಿಯುತ್ತೇವೆ.

ಮುಂದಿನ ಅಧ್ಯಾಯಗಳಲ್ಲಿ ಈಗ ಇರುವ ನ್ಯಾಯಾಲಯಗಳು, ಅವುಗಳ ಮಟ್ಟ, ರಚನೆ, ಪ್ರಕ್ರಿಯೆಗಳ ಬಗ್ಗೆ ನಾವು ತಿಳಿಯುತ್ತಾ, ಹೆಚ್ಚುಕಡಿಮೆ ಚೆನ್ನಾಗಿಯೇ ವಿಸ್ತಾರವಾಗಿದ್ದ ಪುರಾತನ ನ್ಯಾಯಿಕ ಪರಿಪಾಲನೆಯ ವ್ಯವಸ್ಥೆಗೂ ಈಗಿನ ವ್ಯವಸ್ಥೆಗೂ ಅತಿ ಹೆಚ್ಚಿನ ಬದಲಾವಣೆಯೇನೂ ಆಗಿಲ್ಲವೆಂದು ಕಂಡುಕೊಳ್ಳುತ್ತೇವೆ.

# 2

# ಮೊಘಲರ ಕಾಲ

ಮೊಘಲರ ಆಳ್ವಿಕೆಯಲ್ಲಿ ನ್ಯಾಯಿಕ ವ್ಯವಸ್ಥೆಯ ಬೆಳವಣಿಗೆಯನ್ನು ಮೂರು ಕಾಲಗಳಾಗಿ ವಿಂಗಡಿಸಬಹುದು:

i. ಅಕ್ಬರನ ಆಳ್ವಿಕೆಯ ಮುಂಚಿನ ಕಾಲ,

ii. ಅಕ್ಬರನ ಆಳ್ವಿಕೆಯ ಕಾಲ (ಕ್ರಿ.ಶ. 1556ರಿಂದ ಕ್ರಿ.ಶ. 1606ರವರೆಗೆ), ಮತ್ತು

iii. ಅಲ್ಲಿಂದ ಮುಂದಕ್ಕೆ ಬ್ರಿಟಿಷರ ಆಳ್ವಿಕೆಯ ಪ್ರಾರಂಭದವರೆಗಿನ ಕಾಲ

ಶರಿಯತ್‌ನಲ್ಲಿ ಹೇಳಿರುವ ಮುಸ್ಲಿಂ ಕಾನೂನು ಎಲ್ಲ ವ್ಯಕ್ತಿಗಳನ್ನೂ ಎಲ್ಲ ಕಾರಣಗಳನ್ನೂ ಮೀರಿ ನಿಂತದ್ದು ಎಂದು ಭಾವಿಸಲಾಗಿತ್ತು. ಇಸ್ಲಾಮೀ ನ್ಯಾಯಶಾಸ್ತ್ರ ಮೂಡಿಬಂದಿರುವುದು ಬಹುತೇಕವಾಗಿ ಖುರಾನ್‌ನಿಂದ. ಜೊತೆಗೆ ಸುನ್ನಾದಿಂದ ಅಂದರೆ ಪ್ರವಾದಿ ಮಹಮದ್‌ರು ಅನುಸರಿಸುತ್ತಿದ್ದ ರೂಢಿಗಳು ಮತ್ತು ಸಂಪ್ರದಾಯಗಳಿಂದ. ಆದರೆ, ಭಾರತದ ಸಮಾಜ ವಿಸ್ತಾರಗೊಳ್ಳುತ್ತಿದ್ದುದೇ ಅಲ್ಲದೆ ಸಮ್ಮಿಶ್ರ ಸಮಾಜವೂ ಆಗುತ್ತಿತ್ತು. ಕಟ್ಟುನಿಟ್ಟಿನ ಈ ಇಸ್ಲಾಮೀ ಕಾನೂನು ಇಂಥ ಸಮಾಜದ ಅವಶ್ಯಕತೆಗೆ ಏನೇನೂ ಸಾಕಾಗುವುದಿಲ್ಲ ಎಂದು ಗೊತ್ತಾಯಿತು. ಹೀಗಾಗಿ, ಸಮಾಜದ ಒಟ್ಟಾರೆ ಅಭಿಪ್ರಾಯ ಅಥವಾ ಸಾರ್ವತ್ರಿಕ ಸಮ್ಮತಿಯನ್ನು ಕಾನೂನಿನ ಹೆಚ್ಚುವರಿ ಆಕರಗಳನ್ನಾಗಿ ಸೇರಿಸಿಕೊಳ್ಳಲಾಯಿತು. ಅಕ್ಬರನ ಆಳ್ವಿಕೆಗೆ ಮೊದಲು ಸಾಂಪ್ರದಾಯಿಕ ಮುಸ್ಲಿಂ ಕಾನೂನನ್ನು ನ್ಯಾಯಿಕ ಪ್ರಕ್ರಿಯೆಗಳಿಗೂ ಅನ್ವಯಿಸಲಾಗುತ್ತಿತ್ತು. ಈ ಕಾರ್ಯ ವಿಧಾನವನ್ನು ಜಾರಿಗೊಳಿಸುವಲ್ಲಿ ಬಹುತೇಕ ಸಮಸ್ಯೆಗಳು ಎದುರಾದವು; ಕಾಲಕ್ರಮೇಣ ಈ ವಿಧಾನದ ಅಸಮರ್ಪಕತೆಯನ್ನು ಮನಗಂಡು ರಾಜೀ ಮನೋಭಾವದಿಂದ ಪರಿಪಾಲನೆಯ ಕಟ್ಟುನಿಟ್ಟಿನ ಆಚರಣೆಯನ್ನು ಸಡಿಲಗೊಳಿಸಲಾಯಿತು. ಆದರೆ, ನಿಜವಾದ ಬದಲಾವಣೆ ಬಂದದ್ದು ಅಕ್ಬರನ ಆಳ್ವಿಕೆಯಲ್ಲಿ. ಅಕ್ಬರನು ಮುಸ್ಲಿಮರಲ್ಲದವರಿಗೆ ಮಾತ್ರ ಅನ್ವಯಿಸಲಾಗುತ್ತಿದ್ದ ತಾರತಮ್ಯದ ಬಹುತೇಕ ಕಾನೂನುಗಳನ್ನು ತೊಡೆದುಹಾಕಿ ಎಲ್ಲರಿಗೂ ಸಾರ್ವತ್ರಿಕವಾಗಿ ಅನ್ವಯವಾಗುವ ನ್ಯಾಯ ಪರಿಪಾಲನೆ ಪದ್ಧತಿಯನ್ನು ಜಾರಿಗೆ ತಂದ. ಆದರೆ, ಅವನ ನಂತರ ಬಂದ ದೊರೆಗಳು ಇಷ್ಟೇ ರಿಯಾಯತಿಯನ್ನು ತೋರಿಸಲಿಲ್ಲ. ಇಷ್ಟಾಗಿಯೂ ಹದಿನೆಂಟನೆಯ ಶತಮಾನದಲ್ಲಿ ಬ್ರಿಟಿಷರು ಭಾರತಕ್ಕೆ ಬಂದಮೇಲೆ ಕಟ್ಟುನಿಟ್ಟಿನ ಇಸ್ಲಾಮೀ ಕಾಯಿದೆಗಳು ಕೊನೆಗೊಂಡವು.

ಮೊಘಲರ ಕಾಲದಲ್ಲಿ ನ್ಯಾಯಿಕ ಪದ್ಧತಿಗೆ ಬಾಗದಾದ್ ಮತ್ತು ಈಜಿಪ್ಟಿನ ಖಲೀಫರುಗಳು ಜಾರಿಗೆ ತಂದಿದ್ದ ನ್ಯಾಯಿಕ ಪದ್ಧತಿಯೇ ಮಾದರಿಯಾಗಿತ್ತು. ಇದು ಮುಸ್ಲಿಂ ನ್ಯಾಯ ಶಾಸ್ತ್ರಜ್ಞರುಗಳಿಂದ ವಿಧಾಯಕಗೊಂಡಿದ್ದ ಹಾಗೂ ದೆಹಲಿಯ ಸುಲ್ತಾನರುಗಳು ಉತ್ತರ ಭಾರತದಲ್ಲಿ ಜಾರಿಗೆ ತಂದಿದ್ದ ನ್ಯಾಯಿಕ ಪದ್ಧತಿಯನ್ನು ಬಹುತೇಕ ಹೋಲುತ್ತಿತ್ತು. ಆ ಪದ್ಧತಿಯಲ್ಲಿ, ರಾಜನೇ ಕೇಂದ್ರ ಬಿಂದುವಾಗುತ್ತಿದ್ದ. ಅವನು ರಾಜಧಾನಿಯಲ್ಲಿರಲಿ, ರಾಜಧಾನಿಯಿಂದ ದೂರವಿರಲಿ, ಎಲ್ಲೇ ಮೊಕ್ಕಾಂ ಮಾಡಿರಲಿ, ಅವನ ಸನ್ನಿಧಿಯೇ ಸರ್ವೋಚ್ಚ ನ್ಯಾಯಾಲಯ. ಅವನೇ ತಿರುಗಾಣೆಯಾಗಿದ್ದು ಎಲ್ಲವೂ ಅವನ ಸುತ್ತ ಸುತ್ತಬೇಕಾಗಿತ್ತು. ಎಲ್ಲ ವಿಷಯಗಳಿಗೂ ಮೂಲ ಅಧಿಕಾರವ್ಯಾಪ್ತಿ ಅವನದೇ ಆಗುತ್ತಿತ್ತು. ಮೇಲ್ಮನವಿಗಳನ್ನೂ ಅವನಿಗೆ ಸಲ್ಲಿಸಬಹುದಾಗಿತ್ತು. ಜಹಾಂಗೀರ್‌ನ ಕತೆಯಲ್ಲಿ ಕೇಳಿರುವಂತೆ, ಯಾರು ಬೇಕಾದರೂ ಬಂದು ನ್ಯಾಯಕ್ಕಾಗಿ ಗಂಟೆಯನ್ನು ಬಾರಿಸಬಹುದಾಗಿತ್ತು. ಯೋಗ್ಯವಾದದ್ದು ಎಂದು ತೋರಿದರೆ, ರಾಜನು ಅಲ್ಲೇ, ಆಗಲೇ, ನ್ಯಾಯ ದೊರಕಿಸುತ್ತಿದ್ದ. ಅವನದೇ ಕಡೆಯ ತೀರ್ಮಾನ. ಅದರ ಮೇಲೆ ಮೇಲ್ಮನವಿಗೆ ಅವಕಾಶ ಇರುತ್ತಿರಲಿಲ್ಲ. ರಾಜಧಾನಿಯಲ್ಲಿ ರಾಜನ ಕೆಳಗೆ ದಿವಾನ್ ಆಲ ಮತ್ತು ಪ್ರಧಾನ ಖಾಜಿ (ಖಾಜಿ-ಉಲ್-ಖುಜತ್) ಇರುತ್ತಿದ್ದರು. ಪ್ರಾಂತಗಳಲ್ಲಿ ಸುಬೇದಾರ್, ದಿವಾನ್, ಪ್ರಾಂತೀಯ ಖಾಜಿ ಮತ್ತು ಸೇಕ್‌ದಾರ ಇವರುಗಳು ಇರುತ್ತಿದ್ದರು. ಪರಗಣದಲ್ಲಾದರೋ ಅಮೀನ್ ಮತ್ತು ಖಾಜಿ ನ್ಯಾಯ ವಿತರಣೆ ಮಾಡುತ್ತಿದ್ದರು.

ತುರ್ಕಿ ಮತ್ತು ಪರ್ಶಿಯಾ ದೇಶಗಳಲ್ಲಿದ್ದಂತೆಯೇ, ಮೊಘಲ್ ಚಕ್ರವರ್ತಿ ನ್ಯಾಯದ ಮೂಲ ಉಗಮಸ್ಥಾನವಾಗಿರುತ್ತಿದ್ದ. ರಾಜನೇ ಸ್ವತಃ ನ್ಯಾಯಾಲಯದಲ್ಲಿ ಬಹಿರಂಗವಾಗಿ ಪ್ರಕರಣಗಳ ವಿಚಾರಣೆಯನ್ನು ಮಾಡಬೇಕೆಂಬ ಸಾರ್ವಭೌಮ ಪರಂಪರೆಯನ್ನು ಅವನು ಅನುಸರಿಸುತ್ತಿದ್ದನು. ಪ್ರಕರಣಗಳ ವಿಚಾರಣೆಯನ್ನು ಮಾಡುವುದಕ್ಕೆ ಚಕ್ರವರ್ತಿ ದಿವಾನ್-ಇ-ಖಾಸ್‌ನಲ್ಲಿ ಕೂರುತ್ತಿದ್ದನು. ರಾಜನ ದರ್ಬಾರೇ ಮೇಲ್ಮನವಿಯ ಸರ್ವೋಚ್ಚ ನ್ಯಾಯಾಲಯವಾಗಿರುತ್ತಿತ್ತು. ಅದೇ ದೇಶದ ಪರಮ ನ್ಯಾಯಾಧೀಕರಣ. ಸಾರ್ವಭೌಮ ನ್ಯಾಯಾಲಯದಲ್ಲಿ ಉಪಸ್ಥಿತರಾಗಿರುತ್ತಿದ್ದವರೆಂದರೆ, ಚಕ್ರವರ್ತಿ, ಖಾಜಿಗಳು, ಮುಫ್ತಿಗಳು ಮತ್ತು ಅದೀಲರುಗಳು. ಚಕ್ರವರ್ತಿಯು ಕೊಟ್ಟ ತೀರ್ಮಾನಗಳನ್ನು ಜಾರಿಮಾಡುವುದಕ್ಕಾಗಿ ದರೋಗ-ಇ-ಅದಾಲತ್ ಎಂದು ಕರೆಯಲ್ಪಡುತ್ತಿದ್ದ ನ್ಯಾಯಾಲಯ ಅಧಿಕಾರಿಯು ಮತ್ತು ಕೊತ್ವಾಲನು ಇರುತ್ತಿದ್ದರು.

ವಿವಿಧ ರೀತಿಯ ಪ್ರಕರಣಗಳ ವಿಚಾರಣೆಗೆ ವಿವಿಧ ನ್ಯಾಯಾಲಯಗಳಿದ್ದವು. ರಾಜಸ್ವ (ರೆವಿನ್ಯೂ) ನ್ಯಾಯಾಲಯಗಳು ಭೂಮಿ ಹಕ್ಕುಗಳಿಗೆ ಸಂಬಂಧಿಸಿದ ಪ್ರಕರಣಗಳನ್ನು ವಿಚಾರಣೆಮಾಡುತ್ತಿದ್ದವು. ವಿವಾಹ, ವಿಚ್ಛೇದನ, ವಾರಸ ಪ್ರಕರಣಗಳನ್ನು ಖಾಜಿಯ ನ್ಯಾಯಾಲಯಗಳು ವಿಚಾರಣೆ ಮಾಡುತ್ತಿದ್ದವು. ಆಡಳಿತಾಧಿಕಾರಿಗಳು ಕೂರುತ್ತಿದ್ದ ಧಾರ್ಮಿಕೇತರ ನ್ಯಾಯಾಲಯಗಳು, ಮತೀಯವಲ್ಲದ ಮತ್ತು ಇತರ ಸ್ಪಷ್ಟ ವಿವರಣೆ ಇಲ್ಲದಿರುವಂತಹ ಪ್ರಕರಣಗಳನ್ನು

ವಿಚಾರಣೆ ಮಾಡುತ್ತಿದ್ದವು. ಇವುಗಳೇ ಅಲ್ಲದೆ ವ್ಯವಸ್ಥಿತ ನ್ಯಾಯಿಕ ಸಂಸ್ಥೆಗಳಿಂದ ಹೊರಗುಳಿದ ಜಾತಿನ್ಯಾಯಾಲಯಗಳು ಮತ್ತು ಗ್ರಾಮ ಪಂಚಾಯಿತಿಗಳು ಇದ್ದವು.

ಆಗಿನ ನ್ಯಾಯಾಲಯಗಳನ್ನು ಈ ರೀತಿ ವರ್ಗೀಕರಣ ಮಾಡಬಹುದಾಗಿದೆ:

i. ಧಾರ್ಮಿಕ ಕಾಯಿದೆಗಳಿಗೆ ಸಂಬಂಧಿಸಿದ ಪ್ರಕರಣಗಳನ್ನು ವಿಚಾರಣೆ ಮಾಡುತ್ತಿದ್ದ ಖಾಜಿಯು ಅಧ್ಯಕ್ಷತೆವಹಿಸುತ್ತಿದ್ದ ನ್ಯಾಯಾಲಯ.

ii. ಧಾರ್ಮಿಕೇತರ ಪ್ರಕರಣಗಳನ್ನು ವಿಚಾರಣೆ ಮಾಡುತ್ತಿದ್ದ ಪ್ರಾಂತೀಯ ಸುಬೇದಾರರು ಮತ್ತು ಇತರ ಅಧಿಕಾರಿಗಳು ಉಪಸ್ಥಿತರಿರುತ್ತಿದ್ದ ನ್ಯಾಯಾಲಯಗಳು.

iii. ರಾಜಕೀಯ ಪ್ರಕರಣಗಳನ್ನು ವಿಚಾರಣೆಮಾಡುತ್ತಿದ್ದ ಚಕ್ರವರ್ತಿಯಾಗಲಿ ಅಥವಾ ಅವನ ಪ್ರತಿನಿಧಿಗಳಾಗಲಿ ಕೂರುತ್ತಿದ್ದ ನ್ಯಾಯಾಲಯಗಳು.

## ಧಾರ್ಮಿಕ ಕಾಯಿದೆಗಳ ನ್ಯಾಯಾಲಯಗಳು

ಈ ನ್ಯಾಯಾಲಯಗಳಲ್ಲಿ ಖಾಜಿಗಳು ಉಪಸ್ಥಿತರಿರುತ್ತಿದ್ದರು. ಇವುಗಳು ಧಾರ್ಮಿಕ ವ್ಯಾಜ್ಯಗಳನ್ನು ವಿಚಾರಣೆಮಾಡುತ್ತಿದ್ದವು. ಧಾರ್ಮಿಕ ವ್ಯಾಜ್ಯಗಳು ಎಂದರೆ, ಕುಟುಂಬ ಕಾನೂನು, ವಾರಸ ಕಾನೂನು, ಹಾಗೂ ವಕ್ಫ್‌ಗಳಿಗೆ (ಧಾರ್ಮಿಕ ದತ್ತಿಗಳಿಗೆ) ಸಂಬಂಧಿಸಿದ ಕಾನೂನಿನ ಪ್ರಶ್ನೆಗಳನ್ನು ಕುರಿತ ವ್ಯಾಜ್ಯಗಳು.

ಮುಖ್ಯ ಖಾಜಿಯನ್ನು ಖಾಜಿ-ಉಲ್-ಖುಜತ್ ಎಂದು ಕರೆಯಲಾಗುತ್ತಿತ್ತು. ಮುಖ್ಯ ಖಾಜಿಯು ಎಲ್ಲ ಪ್ರಾಂತಗಳಲ್ಲಿ ಪ್ರಾಂತೀಯ ಮಟ್ಟದಲ್ಲಿ ಖಾಜಿಗಳನ್ನು ನೇಮಕಮಾಡುತ್ತಿದ್ದ. ಈ ಖಾಜಿಗಳು ವಾರಕ್ಕೆ ಐದುದಿನ ಅಂದರೆ ಶನಿವಾರ, ಭಾನುವಾರ, ಸೋಮ, ಮಂಗಳ, ಹಾಗೂ ಗುರುವಾರ ಕೆಲಸ ಮಾಡಬೇಕಾಗಿತ್ತು. ಬುಧವಾರದಂದು ಅವರು ಪ್ರಾಂತದ ಸುಬೇದಾರನ (ಗವರ್ನರ್‌ನ) ದರ್ಬಾರಿನಲ್ಲಿ ಹಾಜರಿರಬೇಕಾಗಿತ್ತು. ಶುಕ್ರವಾರ ರಜಾದಿನ. ಚಕ್ರಾಧಿಪತ್ಯದ ವ್ಯವಹಾರ ನ್ಯಾಯಾಧೀಶರುಗಳೆಂದರೆ, ಸದರ್‌ಗಳು. ಮುಖ್ಯ ಸದರ್‌ನನ್ನು ಸದರ್-ಉಲ್-ಸದೂರ್ ಅಥವಾ ಸಾದರ್-ಇ-ಜಹಾನ್ ಅಥವಾ ಸದರ್-ಇ-ಕುಲ್ ಎಂದೂ ಕರೆಯಲಾಗುತ್ತಿತ್ತು. ಮುಖ್ಯ ಸದರ್‌ನು ಎಲ್ಲ ಪ್ರಾಂತಗಳಿಗೆ ಒಬ್ಬೊಬ್ಬ ಸದರ್‌ನನ್ನು ನೇಮಕ ಮಾಡಬೇಕಾಗುತ್ತಿತ್ತು. ಕಂದಾಯ ವಿನಾಯಿತಿ ಕೊಟ್ಟ ಭೂಮಿಗಳನ್ನು ಪಡೆದುಕೊಂಡವರ ಹಾಗೂ ದಿನಭತ್ಯೆಗಳನ್ನು ಪಡೆದುಕೊಂಡವರ ಯಾದಿಗಳನ್ನು ಸದರ್‌ಗಳು ಮುಖ್ಯ ಸದರ್‌ನ ತಿಳುವಳಿಕೆ ಮೇರೆಗೆ ಬರೆದಿಡಬೇಕಾಗಿದ್ದಿತು. ನಿಗದಿತ ಭತ್ಯೆಗಳನ್ನು ಪಡೆಯುತ್ತಿದ್ದವರು ಚಕ್ರವರ್ತಿಯ ಆದೇಶಗಳನ್ನು ಸರಿಯಾಗಿ ಪಾಲಿಸುತ್ತಿದ್ದಾರೆಯೇ ಎಂಬುದರ ಬಗ್ಗೆಯೂ ಸಹ ಸದರ್‌ಗಳು ನಿಗಾ ಇಡಬೇಕಾಗಿದ್ದಿತು. ಭತ್ಯೆ ಪಡೆಯುತ್ತಿದ್ದವರು ನಿಧನ ಹೊಂದಿದರೆ ಸದರ್‌ನು ಅದನ್ನು ದಾಖಲಿಸುತ್ತಿದ್ದ. ಚಕ್ರವರ್ತಿಯ ದಾನಧರ್ಮಗಳು ಮುಖ್ಯ ಸದರ್‌ನ ಮೂಲಕ ವಿತರಣೆಯಾಗುತ್ತಿದ್ದವು.

### ಧಾರ್ಮಿಕೇತರ ಪ್ರಕರಣಗಳ ನ್ಯಾಯಾಲಯಗಳು

ಈ ನ್ಯಾಯಾಲಯಗಳು ಖಾಜಿಗೆ ಅಧೀನ ನ್ಯಾಯಾಲಯಗಳಾಗಿರುತ್ತಿರಲಿಲ್ಲ. ಇವುಗಳಿಗೂ ಧಾರ್ಮಿಕ ಕಾಯಿದೆಗಳಿಗೂ ಸಂಬಂಧವಿರಲಿಲ್ಲ. ಸಂಪ್ರದಾಯ ನ್ಯಾಯ, ಅಲಿಖಿತ ರೂಢಿಗಳು ಹಾಗೂ ಬುಡಕಟ್ಟು ಜನಾಂಗದ ನ್ಯಾಯಗಳು, ಇವುಗಳಿಗೆ ಸಂಬಂಧಿಸಿದ ಪ್ರಕರಣಗಳನ್ನು ಈ ನ್ಯಾಯಾಲಯಗಳು ವಿಚಾರಣೆ ಮಾಡುತ್ತಿದ್ದವು. ಜಿಮ್ಮಿಗಳು ಅಂದರೆ ನಾಸ್ತಿಕರುಗಳು ಕೂಡ ಈ ನ್ಯಾಯಾಲಯದ ನ್ಯಾಯಾಧೀಶರಾಗಿ ನೇಮಕಗೊಳ್ಳಬಹುದಾಗಿತ್ತು. ಚಕ್ರವರ್ತಿಯಾಗಲಿ ಅಥವಾ ಅವನ ಪ್ರತಿನಿಧಿಯಾಗಲಿ ಕೆಲವು ಪ್ರಕರಣಗಳಲ್ಲಿ ಕೊಟ್ಟ ತೀರ್ಮಾನವನ್ನು ಉರ್ಫ್ ಎಂದು ಕರೆಯುತ್ತಿದ್ದರು. ಆ ಪ್ರಕರಣಗಳೆಂದರೆ ರಾಜ್ಯದ ವಿರುದ್ಧ ಮಾಡಿದ ಅಪರಾಧಗಳು, ಮತ್ತು ಕಾನೂನು ಮತ್ತು ಸುವ್ಯವಸ್ಥೆಯನ್ನು ಮುರಿದ ಅಪರಾಧಗಳು. ಉದಾಹರಣೆಗೆ ದಂಗೆ, ದೊಂಬಿ, ಕಳ್ಳತನ, ಹೆದ್ದಾರಿ ದರೋಡೆ, ಕೊಲೆ, ಖೋಟಾನಾಣ್ಯ, ರಾಜದ್ರೋಹ ಮುಂತಾದವುಗಳು. ಈ ಅಪರಾಧಗಳಲ್ಲದೆ ರಾಜಕೀಯ ಅಪರಾಧಗಳೂ ಸಹ ಈ ನ್ಯಾಯಾಲಯದಲ್ಲಿ ವಿಚಾರಣೆಗೊಳಗಾಗುತ್ತಿದ್ದವು.

ವಿವಿಧ ನ್ಯಾಯಾಲಯಗಳು ತೀರ್ಮಾನಿಸಬೇಕಾಗಿದ್ದ ವಿಷಯಗಳನ್ನು ವರ್ಗೀಕರಿಸಿದ್ದರೂ, ಈ ವರ್ಗೀಕರಣವನ್ನು ಅಷ್ಟು ಕಟ್ಟುನಿಟ್ಟಾಗಿ ಅನುಸರಿಸುತ್ತಿರಲಿಲ್ಲ. ಹದಿನೇಳನೆಯ ಶತಮಾನದಲ್ಲಿ ಖಾಜಿಯು ಎಲ್ಲ ಬಗೆಯ ಪ್ರಕರಣಗಳನ್ನು ಅಂದರೆ ವ್ಯಾವಹಾರಿಕ, ಅಪರಾಧಿಕ, ಧಾರ್ಮಿಕ ಮತ್ತು ಧಾರ್ಮಿಕೇತರ ಪ್ರಕರಣಗಳನ್ನು ವಿಚಾರಣೆ ಮಾಡುತ್ತಿದ್ದ. ಔರಂಗಜೇಬನ ಆಳ್ವಿಕೆಯ ನಲವತ್ತಾರನೆಯ ವರ್ಷದಲ್ಲಿ ಬರೆದ ಅಜ್ಮೀರ ಪ್ರಾಂತದ ಅಖ್ಬರ್‌ರಾತ್‌ನಲ್ಲಿ ಉಲ್ಲೇಖಿಸಿರುವ ಪ್ರಕರಣಗಳಿಂದ ಈ ವಿಷಯ ಬೆಳಕಿಗೆ ಬಂದಿತು. ಈ ಅಖ್ಬರಾರ್ರತ್ ಅನ್ನು ದಕ್ಕನ್‌ನಲ್ಲಿ ಪತ್ತೆ ಹಚ್ಚಲಾಯಿತು. ನ್ಯಾಯಾಲಯಗಳ ಅಧಿಕಾರವ್ಯಾಪ್ತಿ ಸೀಮಿತವಾಗಿರಲಿಲ್ಲ. ಅಪರಾಧದ ಗಂಭೀರತೆಯ ಮೇಲಾಗಲಿ ಅಥವಾ ವ್ಯಾಜ್ಯದ ಆಸ್ತಿಯ ಬೆಲೆಯ ಮೇಲಾಗಲಿ ನ್ಯಾಯಾಲಯಗಳ ಅಧಿಕಾರವ್ಯಾಪ್ತಿಯನ್ನು ನಿರ್ಧರಿಸಲು ಪ್ರಕರಣಗಳನ್ನು ವರ್ಗೀಕರಿಸುತ್ತಿರಲಿಲ್ಲ. ಅಲ್ಲದೇ ಈಗಿನ ಪದ್ಧತಿಯಂತೆ ನ್ಯಾಯಾಲಯಗಳನ್ನು ಅವುಗಳ ಅಧಿಕಾರ ವ್ಯಾಪ್ತಿಯ ಮೇಲಿಂದ ಉನ್ನತ ನ್ಯಾಯಾಲಯ ಅಥವಾ ಕೆಳಗಿನ ನ್ಯಾಯಾಲಯವೆಂದು ವರ್ಗೀಕರಿಸಿರಲಿಲ್ಲ. ಬದಲಾಗಿ ಆ ನ್ಯಾಯಾಲಯಗಳ ನ್ಯಾಯಾಧೀಶರುಗಳ ದರ್ಜೆಯ ಮೇಲಿನಿಂದ ಉನ್ನತ ನ್ಯಾಯಾಲಯ ಅಥವಾ ಕೆಳಗಿನ ನ್ಯಾಯಾಲಯ ಎಂದು ಪರಿಗಣಿಸುತ್ತಿದ್ದರು. ಯಾವುದೇ ಎರಡು ನ್ಯಾಯಾಲಯಗಳು ವ್ಯಾಜ್ಯದ ಮೊಬಲಗಿನ ಆಧಾರದ ಮೇಲಾಗಲಿ ಅಥವಾ ಪ್ರಾದೇಶಿಕತೆಯ ಆಧಾರದ ಮೇಲಾಗಲೀ ಪರಸ್ಪರ ಒಂದಕ್ಕೊಂದು ಹೊರತಾಗಿರಲಿಲ್ಲ. ಆದರೆ, ಮೇಲಿನ ನ್ಯಾಯಾಲಯದಿಂದ (ಉನ್ನತ ದರ್ಜೆಯ ನ್ಯಾಯಾಧೀಶರ ನ್ಯಾಯಾಲಯ) ಕೆಳಗಿನ ನ್ಯಾಯಾಲಯಕ್ಕೆ (ಕಡಿಮೆ ದರ್ಜೆಯ ನ್ಯಾಯಾಧೀಶರ ನ್ಯಾಯಾಲಯ) ಪ್ರಕರಣಗಳನ್ನು ವರ್ಗಾಯಿಸಬಹುದಾಗಿತ್ತು.

ಇದೇ ರೀತಿ ವರ್ಗೀಕೃತ ಮೇಲ್ಮನವಿ ನ್ಯಾಯಾಲಯಗಳು ಇರಲಿಲ್ಲ. ಯಾವನೇ ಪಕ್ಷಗಾರ ಕೆಳಗಿನ ನ್ಯಾಯಾಲಯದ ಕಾರ್ಯಕ್ಷಮತೆ ತನಗೆ ತೃಪ್ತಿಕರವಾಗಿಲ್ಲದಿದ್ದರೆ, ತನ್ನ ಶಕ್ತ್ಯಾನುಸಾರ ಬೇರೆ ಯಾವುದೇ ನ್ಯಾಯಾಲಯಕ್ಕೆ ಹೋಗಬಹುದಾಗಿತ್ತು. ಇದರಿಂದಾಗಿ ಇಂತಹ ವರ್ಗೀಕರಣದ ಅವಶ್ಯಕತೆಯು ಇರಲಿಲ್ಲ. ಅಲ್ಲದೇ, ಮೇಲ್ಮನವಿ ನ್ಯಾಯಾಲಯವು ಕೆಳಗಿನ ನ್ಯಾಯಾಲಯದ ದಾಖಲೆಗಳನ್ನು ಎಂದೂ ನೋಡುತ್ತಲೇ ಇರಲಿಲ್ಲ. ಬದಲಾಗಿ ಪ್ರಕರಣವನ್ನು ತನ್ನದೇ ಮೂಲಗಳಿಂದ ತನಿಖೆಮಾಡುತ್ತಿತ್ತು.

ಯಾವುದಾದರೊಂದು ಪ್ರಕರಣದಲ್ಲಿ ಮೇಲಿನ ನ್ಯಾಯಾಲಯಕೊಟ್ಟ ತೀರ್ಪಿನ ನಿರ್ವಚನಕ್ಕೆ ಕೆಳಗಿನ ನ್ಯಾಯಾಲಯ ಈಗ ಇರುವಂತೆ ಬದ್ಧವಾಗಿರಬೇಕಾಗಿರಲಿಲ್ಲ. ಆಗಲೇ ನೋಡಿದಂತೆ ನ್ಯಾಯಾಧೀಶನ ದರ್ಜೆಯಮೇಲೆ ನ್ಯಾಯಾಲಯದ ದರ್ಜೆಯನ್ನು ನಿರ್ಧರಿಸಲಾಗುತ್ತಿತ್ತು. ನ್ಯಾಯಾಧೀಶರುಗಳು ಪಾಂಡಿತ್ಯವಿದ್ದವರಾಗಿರುತ್ತಿದ್ದು ತಮ್ಮದೇ ಆದ ವ್ಯಕ್ತಿತ್ವವನ್ನು ಹೊಂದಿರುತ್ತಿದ್ದರು. (ವಾಸ್ತವವಾಗಿ ಗ್ರಾಮ ಪಂಚಾಯತಿಯ ಮತ್ತು ಜಾತಿ ನ್ಯಾಯಾಲಯದಲ್ಲಿ ಉಪಸ್ಥಿತರಿರುತ್ತಿದ್ದ ಗ್ರಾಮದ ಹಿರಿಯರಿಗೂ ಸಾಕಷ್ಟು ವಿವೇಚನೆ ಇರುತ್ತಿದ್ದು ಬಹುಪಾಲು ಪ್ರಕರಣಗಳನ್ನು ಈ ನ್ಯಾಯಾಲಯಗಳೇ ಇತ್ಯರ್ಥ ಮಾಡುತ್ತಿದ್ದವು). ಪೋಲೀಸರ ಕರ್ತವ್ಯವಾದ ತನಿಖೆಯನ್ನು ಆಗಾಗ್ಗೆ ಮೊಘಲ್ ನ್ಯಾಯಾಧೀಶರುಗಳು ಮಾಡಬೇಕಾಗಿದ್ದಿತು. ನ್ಯಾಯಾಲಯದ ಎಂದಿನ ನಡವಳಿಕೆಗಳಿಂದ ತೃಪ್ತಿಕರವಾದ ಫಲಿತಾಂಶಗಳು ಸಿಗದೇಹೋದಾಗ, ವ್ಯಾಜ್ಯ ವಿಷಯದ ಬಗ್ಗೆ ತನಿಖೆಯನ್ನು ಪ್ರಾರಂಭಿಸಿ ನಿಜವೇನೆಂದು ತಿಳಿದುಕೊಳ್ಳಬಹುದಾಗಿತ್ತು. ಈಗಿನ ಆಧುನಿಕ ನ್ಯಾಯಾಲಯಗಳು ವಾದಿ ತನ್ನ ವಾದ ಪತ್ರದಲ್ಲಿ ಹೇಳಿರುವ ಸಂಗತಿಗಳನ್ನು ಸಾಧಿಸಿದ್ದಾನೆಯೇ ಎಂದು ಮಾತ್ರ ನೋಡುತ್ತವೆ. ಸ್ವಯಂ ವೇದ್ಯವಾಗುವ ಸಂಗತಿಗಳನ್ನು (ಅವು ಊಹಾ ಪೋಹಗಳಾಗಿದ್ದರೂ) ನ್ಯಾಯಾಧೀಶರುಗಳು ಗಣನೆಗೆ ತೆಗೆದುಕೊಳ್ಳಬಹುದಾಗಿತ್ತು. ಹಾಗೆ ಗಣನೆಗೆ ತೆಗೆದುಕೊಂಡು ಅದರ ಸತ್ಯಾಸತ್ಯತೆಯನ್ನು ತನಿಖೆ ಮಾಡಿ ತಿಳಿಯುತ್ತಿದ್ದರು. ಇಲ್ಲದಿದ್ದರೆ ಪಕ್ಷಗಾರರೇ ಸತ್ಯವೇನೆಂದು ಬಾಯಿಬಿಡುವಂತೆ ಉಪಾಯಮಾಡುತ್ತಿದ್ದರು.

### ರಾಜಧಾನಿಯಲ್ಲಿದ್ದ ನ್ಯಾಯಾಲಯಗಳು

ಸಾಮ್ರಾಟನ ನ್ಯಾಯಾಲಯವೇ ಅವನ ಸಾಮ್ರಾಜ್ಯದೊಳಗೆ ಪರಮೋಚ್ಚ ನ್ಯಾಯಾಲಯವಾಗಿರುತ್ತಿತ್ತು. ಇತರ ನ್ಯಾಯಾಲಯಗಳೆಂದರೆ 1) ದಿವಾನ್-ಆಲಿ 2) ಸದರ್-ಉಲ್-ಸದರ್, 3) ಮುಖ್ಯ ಖಾಜಿ, ಇವರುಗಳ ನ್ಯಾಯಾಲಯಗಳು. ಸದರ್-ಉಲ್ಲ-ಸದರನು ಮುಖ್ಯ ಖಾಜಿಯ ಕೆಲಸವನ್ನು ಮಾಡಬಹುದಾಗಿದ್ದು ಪ್ರಾಂತಗಳಲ್ಲಿ ಖಾಜಿಗಳನ್ನು ಮೀರ್ ಅದಿಲರುಗಳನ್ನು ನೇಮಕ ಮಾಡಲು ಅಧಿಕಾರ ಹೊಂದಿರುತ್ತಿದ್ದನು. ಹೀಗೆ ನೇಮಕಹೊಂದಿದ ಅಧಿಕಾರಿಗಳು ಸದರ್-ಉಲ್-ಸದರ್‌ನ ಅಧೀನ ಅಧಿಕಾರಿಗಳಾಗಿದ್ದರು.

ಮೇಲೆ ನೋಡಿದ ಮೂವರು ಅಧಿಕಾರಿಗಳನ್ನು ಅಂದರೆ, ದಿವಾನ್-ಆಲಿ,

ಸದರ್-ಉಲ್-ಸದರ್ ಮತ್ತು ಮುಫ್ತಿ ಖಾಜಿ ಇವರುಗಳನ್ನು ಚಕ್ರವರ್ತಿಯೇ ನೇಮಕ ಮಾಡುತ್ತಿದ್ದನು. ಹೆಚ್ಚಾಗಿ ವ್ಯಾಜ್ಯಗಳು ಇಲ್ಲದಿರುತ್ತಿದ್ದ ಕಾರಣದಿಂದ ಕಸಬಾಗಳಲ್ಲಾಗಲಿ, ಪರಗಣಾಗಳಲ್ಲಾಗಲಿ ಸರ್ಕಾರ್‌ಗಳಲ್ಲಾಗಲೀ (ಆಡಳಿತಾತ್ಮಕ ಘಟಕಗಳು) ಮೀರ್ ಅದಿಲರುಗಳು ಕಾಣದೊರೆಯುತ್ತಿರಲಿಲ್ಲ. ದಿವಾನನ ನ್ಯಾಯಾಲಯ ಕೇವಲ ಮೇಲ್ಮನವಿ ನ್ಯಾಯಾಲಯವಾಗಿತ್ತು.

ರಾಜನು ಗಂಭೀರವಲ್ಲದ ಪ್ರಕರಣಗಳನ್ನು ಸಾಮಾನ್ಯವಾಗಿ ಪ್ರತಿದಿನ ತನ್ನ ದರ್ಬಾರಿನಲ್ಲಿ ಕುಳಿತು ನಡೆಸುತ್ತಿದ್ದನು. ಗಂಭೀರ ಪ್ರಕರಣಗಳನ್ನು - ಅಂದರೆ ಸಾಕ್ಷಿಗಳ ಸಾಕ್ಷ್ಯವನ್ನು ಪಡೆದು ಪಾಟಿಸವಾಲು ಮಾಡಲು ಅವಕಾಶಕೊಟ್ಟು, ಮುಂದುವರೆದ ತನಿಖೆನಡೆಸಿ, ಸಾವಧಾನವಾಗಿ ಆಲೋಚಿಸಬೇಕಾದ ಪ್ರಕರಣಗಳನ್ನು - ವಾರದಲ್ಲಿ ನಿಗದಿಮಾಡಿದ ಒಂದುದಿನ ತೆಗೆದುಕೊಳ್ಳುತ್ತಿದ್ದನು. ಅಕ್ಬರ್ ಚಕ್ರವರ್ತಿಯು ಗುರುವಾರವನ್ನೂ, ಜಹಾಂಗೀರನು ಮಂಗಳವಾರವನ್ನೂ, ಶಹಜಹಾನನು ಬುಧವಾರವನ್ನೂ, ಈ ಉದ್ದೇಶಕ್ಕಾಗಿ ಮೀಸಲಿಟ್ಟಿದ್ದರು. ಚಕ್ರವರ್ತಿಯು ದಂಡಯಾತ್ರೆ ಹೋಗಿರಲಿ, ಸುಖ ಪ್ರವಾಸದಲ್ಲಿರಲಿ ಅಥವಾ ಪ್ರಾಂತಗಳಿಗೆ ಪ್ರಯಾಣ ಬೆಳೆಸಿರಲಿ, ಈ ನಿಯತ ಕ್ರಮದಲ್ಲಿ ಬದಲಾವಣೆಯಾಗುತ್ತಿರಲಿಲ್ಲ.

ಯಾವನೇ ಪೌರನು ನ್ಯಾಯ ದೊರಕಿಸಿಕೊಳ್ಳಲು ದೊರೆಯನ್ನು ಸುಲಭವಾಗಿ ಕಾಣಬಹುದಾಗಿತ್ತು. ಉದಾಹರಣೆಯಾಗಿ, ತೋಟಗಾರನೊಬ್ಬನ ಸಂಗತಿಯನ್ನು ಇಲ್ಲಿ ಉಲ್ಲೇಖಿಸಬಹುದು. ಖಾನ್-ಇ-ಖಾನ್ ಎಂಬುವನು ಸಬರಮತಿ ನದಿಯತೀರದಲ್ಲಿ ಬೆಳೆಸಿದ್ದ ಪ್ರಸಿದ್ಧ ತೋಟದ ತೋಟಗಾರನು ಜಹಾಂಗೀರ್ ಚಕ್ರವರ್ತಿಯಲ್ಲಿಗೆ ಒಂದು ದೂರನ್ನು ತೆಗೆದುಕೊಂಡು ಹೋದ. ಮುಖರಬ್ ಖಾನ್ ಎಂಬ ಸುಬೇದಾರನ (ಗೌರ್ನರ್‌ನ) ಸೇವಕನೊಬ್ಬ ತೋಟದಲ್ಲಿದ್ದ ಕೆಲವು ಚಂಪಕವೃಕ್ಷಗಳನ್ನು ಕಡಿದುಹಾಕಿದ್ದಾನೆ ಎಂಬುದು ಅವನ ದೂರು. ವಿಚಾರಣೆಮಾಡಿದ ಮೇಲೆ ದೂರು ಸತ್ಯವಾದದ್ದು ಎಂದು ಚಕ್ರವರ್ತಿಗೆ ಗೊತ್ತಾಯಿತು. ಅಪರಾಧಿಯ ಕೈಗಳ ಎರಡು ಹೆಬ್ಬೆಟ್ಟುಗಳನ್ನೂ ತುಂಡರಿಸಲಾಯಿತು. ಸುಬೇದಾರ್ ಮುಖರಬ್ ಖಾನನಿಗೆ ಈ ವಿಷಯ ತಿಳಿದೇ ಇರಲಿಲ್ಲ. ಹೀಗೆ ರಾಜನ ಅಧಿಕಾರ ಸರ್ವವ್ಯಾಪಿಯಾಗಿತ್ತು. ಮೂಲದಾವೆಗಳಾಗಲೀ, ಮೇಲ್ಮನವಿಗಳಾಗಲೀ, ವ್ಯವಹಾರ ಪ್ರಕರಣಗಳಾಗಲಿ, ಅಪರಾಧ ಪ್ರಕರಣಗಳಾಗಲೀ, ವಿಚಾರಣೆ ಮಾಡುವುದಕ್ಕೆ ಅವನಿಗೆ ಅಧಿಕಾರ ವ್ಯಾಪ್ತಿಯಿತ್ತು.

**ಖಾಜಿ-ಇ-ಅಷ್ಕರ್:** ಮೇಲೆ ನೋಡಿದ ನ್ಯಾಯಾಂಗ ಅಧಿಕಾರಿಗಳಲ್ಲದೆ ಸೈನ್ಯಕ್ಕಾಗಿಯೇ ಒಬ್ಬ ಪ್ರತ್ಯೇಕ ಖಾಜಿ ಇದ್ದ. ಅವನನ್ನು ಖಾಜಿ-ಇ-ಅಷ್ಕರ್ ಎಂದು ಕರೆಯಲಾಗುತ್ತಿತ್ತು. ಇವನಿಗೆ ಸೀಮಿತವಾದ ಪ್ರಾದೇಶಿಕ ಅಧಿಕಾರ ವ್ಯಾಪ್ತಿಯಿದ್ದಿತು. ಪ್ರಕರಣವೊಂದು ಖಾಜಿ-ಇ-ಅಷ್ಕರ್ ಮತ್ತು ನಗರದ ಖಾಜಿ ಇವರಿಬ್ಬರ ಅಧಿಕಾರ ವ್ಯಾಪ್ತಿಯೊಳಗೆ ಬರುತ್ತಿದ್ದರೆ, ಸಾಮಾನ್ಯವಾಗಿ ನಗರದ ಖಾಜಿಯೇ ಇಂಥ ಪ್ರಕರಣದ ವಿಚಾರಣೆಯನ್ನು ಮಾಡುತ್ತಿದ್ದ. ವಿಶೇಷ ಆದೇಶವಿದ್ದರೆ ಮಾತ್ರ ಖಾಜಿ-ಇ-ಅಷ್ಕರ್ ಪ್ರಕರಣದ ವಿಚಾರಣೆ ಮಾಡುತ್ತಿದ್ದ.

ಪಕ್ಷಗಾರರಿಬ್ಬರೂ ಸೇನೆಗೆ ಸೇರಿದವರಾಗಿದ್ದರೂ, ಅವರು ತಮ್ಮಲ್ಲಿನ ವ್ಯಾಜ್ಯಗಳನ್ನು ವ್ಯವಹಾರ ನ್ಯಾಯಾಲಯಕ್ಕೆ ಕೊಂಡೊಯ್ಯಬಹುದಾಗಿತ್ತು. ವ್ಯವಹಾರ ನ್ಯಾಯಾಲಯ ಲಷ್ಕರೀ ನ್ಯಾಯಾಲಯಕ್ಕಿಂತ ಮೇಲಿನ ನ್ಯಾಯಾಲಯವಾಗಿತ್ತು. ಆದರೆ, ಈಗಿನ ಪರಿಸ್ಥಿತಿ ಬಹಳ ಭಿನ್ನವಾಗಿದೆ.

## ಗ್ರಾಮ ಮತ್ತು ಕಸಬಾಗಳು (ಜಾತಿ ನ್ಯಾಯಾಲಯಗಳು ಮತ್ತು ಪಂಚಾಯಿತಿಗಳು)

ಇವುಗಳೆಲ್ಲದರ ಜೊತೆಗೆ ಗ್ರಾಮದಲ್ಲಿ ಅತಿ ಮುಖ್ಯವಾದ ನ್ಯಾಯ ತೀರ್ಮಾನಮಾಡುವ ಸಂಸ್ಥೆಯೊಂದಿತ್ತು. ಇದೇ ಪಂಚಾಯಿತಿ. ಈ ಪಂಚಾಯಿತಿ ಗ್ರಾಮಸ್ಥರು ತಂದ ಎಲ್ಲ ತೆರನಾದ ಪ್ರಕರಣಗಳ ವಿಚಾರಣೆ ಮಾಡುತ್ತಿತ್ತು. ಧಾರ್ಮಿಕ, ವ್ಯವಹಾರಿಕ ಮತ್ತು ಅಪರಾಧಿಕ. ಯಾವನೇ ಖಾಜಿಯಾಗಲಿ, ಸುಬೇದಾರನಾಗಲಿ ಅಥವಾ ಜಿಲ್ಲಾಧಿಕಾರಿಯಾಗಲಿ, ಇವರುಗಳಿಗೆ ಪಂಚಾಯಿತಿ ನ್ಯಾಯಾಲಯಗಳ ಮೇಲೆ ಯಾವುದೇ ನಿಯಂತ್ರಣ ಇರಲಿಲ್ಲ. ಪಂಚಾಯಿತಿಯ ಸದಸ್ಯರುಗಳನ್ನು ಗ್ರಾಮಸ್ಥರು ಚುನಾಯಿಸುತ್ತಿದ್ದರು. ಗ್ರಾಮ ಸಮುದಾಯಕ್ಕೆ ಗಣನೀಯವಾದ ಸೇವೆಯನ್ನು ಮಾಡಿದವರು ಪಂಚರು ಅಥವಾ ನ್ಯಾಯಾಧೀಶರುಗಳಾಗುತ್ತಿದ್ದರು. ಪಂಚ ಎಂದರೆ ಐದು. ಸಾಧಾರಣವಾಗಿ ಪಂಚಾಯಿತಿಯಲ್ಲಿ ಬೆಸ ಸಂಖ್ಯೆಯ (ಬಹುತೇಕ ಐದು) ಸದಸ್ಯರುಗಳಿರುತ್ತಿದ್ದು ಬಹುಮತ ತೀರ್ಮಾನವನ್ನು ಕೊಡಲು ಸಾಧ್ಯವಾಗುತ್ತಿತ್ತು. ಈ ಪಂಚರುಗಳಿಗೆ ದಂಡ ವಿಧಿಸುವುದಕ್ಕೂ, ಸಾರ್ವಜನಿಕವಾಗಿ ಹೀನಾಯಿಸುವುದಕ್ಕೂ, ಛೀಮಾರಿ ಮಾಡುವುದಕ್ಕೂ ಅಥವಾ ಬಹಿಷ್ಕಾರ ಹಾಕುವುದಕ್ಕೂ ಅಧಿಕಾರವಿದ್ದಿತು. ಆದರೆ ಕಾರಾಗೃಹ ಶಿಕ್ಷೆಯನ್ನಾಗಲೀ, ಮರಣದಂಡನೆಯ ಶಿಕ್ಷೆಯನ್ನಾಗಲೀ ವಿಧಿಸುವುದಕ್ಕೆ ಅವರಿಗೆ ಅಧಿಕಾರವಿರಲಿಲ್ಲ. ನೈಜ ನ್ಯಾಯವನ್ನು ಪ್ರದಾನಮಾಡುವ ದೈವಿಕಗುಣ ಅವರುಗಳಲ್ಲಿ ಇರುತ್ತದೆಂದು ಭಾವಿಸಲಾಗಿತ್ತು. ಅವರ ಅಧಿಕಾರವು ನ್ಯಾಯಿಕ ಅಥವಾ ಆಡಳಿತಾತ್ಮಕವಾಗಿದ್ದುದಕ್ಕಿಂತ ಹೆಚ್ಚಾಗಿ ನೈತಿಕವಾಗಿರುತ್ತಿತ್ತು. ಪಂಚಾಯಿತಿಗಳು ಮಾಡುತ್ತಿದ್ದ ನ್ಯಾಯಪರಿಪಾಲನೆ ಭಾರತದಲ್ಲಿದ್ದ ಮುಂಚಿನ ಬ್ರಿಟಿಷ್ ಆಡಳಿತಗಾರರ ಮೆಚ್ಚುಗೆಯನ್ನು ಪಡೆದುಕೊಂಡಿತ್ತು. ಭಾರತದ ದಂಡ ಸಂಹಿತೆ - 1860ರಲ್ಲಿ ಶಾಸನವಾಗುವ ಮೊದಲು ಸರ್ ಹೆನ್ರಿ ಎಲಿಯಟ್ ಎಂಬಾತ ಪಂಚಾಯಿತಿ ನ್ಯಾಯದ ಬಗ್ಗೆ ಹೀಗೆ ಹೇಳಿದ್ದ:

> "ಸ್ಥಳೀಯ ರೂಢಿ/ವಾಡಿಕೆಗಳಲ್ಲಿನ ಜಟಿಲವಾದ ಅಂಶಗಳನ್ನು - ಅನೇಕಸಲ ಇವು ಭಾವಾವೇಶವನ್ನು ಅವಲಂಬಿಸಿರುತ್ತಿದ್ದ ವಿಷಯಗಳು - ಪಂಚರುಗಳು ಆಮೂಲಾಗ್ರವಾಗಿ ತಿಳಿದುಕೊಂಡಿದ್ದರು. ಇದನ್ನು ತಿಳಿದುಕೊಳ್ಳುವುದು ಪರಕೀಯನಾದ ಬ್ರಿಟಿಷ್ ಅಧಿಕಾರಿಗೆ ಕಷ್ಟಸಾಧ್ಯವಾಗಿತ್ತು. ಇಂಥ ತಿಳುವಳಿಕೆ ಇದ್ದುದರಿಂದ, ಅನೇಕ ಬಗೆಯ ಸಣ್ಣಸಣ್ಣ ವಿಚಾರಗಳಿಗೂ ಅವುಗಳಿಗೆ ಕೊಡಬೇಕಾದ ಪ್ರಾಮುಖ್ಯತೆಯನ್ನು ಪಂಚರು ಕೊಡಬಲ್ಲವರಾಗಿದ್ದರು. ಸ್ಥಳೀಯರಾದುದರಿಂದ ಪಂಚರಿಗೆ ಮಾತ್ರ ಇದು ಅರ್ಥವಾಗುವ

ವಿಷಯವಾಗಿದ್ದು ಈ ತೆರನಾದ ನ್ಯಾಯ ವಿಚಾರಣೆಗೆ ತನ್ನದೇ ಆದ ಗಣನೀಯ ಮೌಲ್ಯವನ್ನು ತಂದುಕೊಟ್ಟಿತ್ತು. ಈ ನಿಬಂಧನೆಗಳು ಜಾರಿಯಲ್ಲಿರುವ ಹಿರಿಯ ಪ್ರಾಂತಗಳಲ್ಲೂ ಸಹ ಕಾಲಾನುಕಾಲದಿಂದ ನಡೆದು ಬಂದ ಈ ತೆರನಾದ ನ್ಯಾಯತೀರ್ಮಾನದ ವಿಧಿಗಳು ಎಷ್ಟೋ ಬಾರಿ ಅನುಕೂಲಕರವಾಗಿಯೇ ಕಂಡುಬರುತ್ತಿದ್ದವು. ಇದರ ಫಲಿತಾಂಶ ಎಷ್ಟು ಸಮರ್ಪಕವಾಗಿತ್ತೆಂದರೆ ಇನ್ನೂ ಹೆಚ್ಚಾಗಿ ಈ ವಿಧಾನವನ್ನೇ ಅನುಸರಿಸಿದ್ದರೆ ಚೆನ್ನಾಗಿ ಇರುತ್ತಿತ್ತೆಂದು ಆಸೆಪಡುವಂತಾಗುತ್ತದೆ."

ಅಕ್ಬರನ ರಾಜ್ಯಭಾರದಲ್ಲಿ ನ್ಯಾಯಾಧೀಶರುಗಳೇ ಪ್ರಕರಣದ ಸಂಗತಿಯನ್ನು ಹೇಗಾದರೂ ಪ್ರಯತ್ನಪಟ್ಟು ತಿಳಿದುಕೊಳ್ಳಲೇಬೇಕೆಂಬ ನಿಯಮವಿತ್ತು. ಸಾಕ್ಷಿಗಳ ಹೇಳಿಕೆಗಳು ಮಾತ್ರವೇ ಸಾಕು ಎಂಬುದಾಗಿ ಅವರು ತಿಳಿದಿರಲಿಲ್ಲ. ನ್ಯಾಯಾಧೀಶರುಗಳು ಪಕ್ಷಗಾರರನ್ನು ಆಮೂಲಾಗ್ರವಾಗಿ ಪ್ರಶ್ನಿಸಿ ತಿಳಿದುಕೊಳ್ಳಬೇಕಿದ್ದು ಅಂತಿಮ ತೀರ್ಮಾನ ಕೊಡುವ ಮುಂಚೆ ಪ್ರಕರಣದ ಬಗ್ಗೆ ದೀರ್ಘಾಲೋಚನೆಮಾಡಬೇಕಾಗಿತ್ತು. ನಿಷ್ಪಕ್ಷಪಾತವಾದ ನ್ಯಾಯತೀರ್ಮಾನದ ಗುರಿಯನ್ನು ಸಾಧಿಸಲು ಕಾನೂನಿನ ಹಿಂದಿರುವ ತತ್ವವನ್ನು ಗಮನಿಸಬೇಕೆಂದೂ ಶೀಘ್ರನ್ಯಾಯವನ್ನು ದೊರಕಿಸಿಕೊಡಬೇಕೆಂದು, ಪ್ರತೀಕಾರದ ಮನೋಭಾವವನ್ನು ಬಿಟ್ಟು, ಸುಧಾರಣಾ ಮನೋಭಾವವನ್ನು ಅನುಸರಿಸಬೇಕೆಂದು ನ್ಯಾಯಾಧೀಶರುಗಳಿಗೆ ನಿರ್ದೇಶಿಸಲಾಗಿತ್ತು. ಅಕ್ಬರನ ಮಗ ಜಹಾಂಗೀರನು ನ್ಯಾಯ ಪ್ರದಾನ ಮಾಡುವುದಕ್ಕೆ ಪ್ರಸಿದ್ಧಿಯಾಗಿದ್ದನು.

ಗ್ರಾಮಗಳಲ್ಲಿನ ಪ್ರಕರಣಗಳನ್ನು ಗ್ರಾಮದ ಹಿರಿಯರು ಪಕ್ಷಗಾರರ ಧಾರ್ಮಿಕ ನಂಬಿಕೆ, ಪದ್ಧತಿ ಮತ್ತು ವಾಡಿಕೆಗಳ ಆಧಾರದ ಮೇಲೆ ತೀರ್ಮಾನಮಾಡುತ್ತಿದ್ದರು. ಸತ್ಯ ಯಾವುದು ಎಂದು ಕಂಡುಹಿಡಿಯುವುದು ಕಷ್ಟಸಾಧ್ಯವೇನೂ ಆಗಿರಲಿಲ್ಲ. ಏಕೆಂದರೆ, ಗ್ರಾಮದಲ್ಲಿನ ಜನರಿಗೆ ವಸ್ತುಸ್ಥಿತಿ ಏನು ಎಂಬುದು ಗೊತ್ತಿರುತ್ತಿದ್ದು ಸತ್ಯದ ಆಧಾರದ ಮೇಲೆ ಪ್ರಕರಣಗಳು ಇತ್ಯರ್ಥವಾಗುತ್ತಿದ್ದವು. ಜಾತ್ಯಾಧಾರಿತ ನ್ಯಾಯಾಲಯಗಳು ಒಂದೇ ಜಾತಿಗೆ ಸೇರಿದ ಪಕ್ಷಗಾರರ ಪ್ರಕರಣಗಳನ್ನು ತೀರ್ಮಾನ ಮಾಡುತ್ತಿದ್ದವು. ಇಂಥ ತೀರ್ಮಾನಕ್ಕೆ ಸಾಮಾಜಿಕ ಅಂಗೀಕಾರಮುದ್ರೆ ಇರುತ್ತಿತ್ತು. ಕಸಬಾಗಳೆಂದು ವರ್ಗೀಕರಿಸಲ್ಪಟ್ಟ ದೊಡ್ಡ ಹಳ್ಳಿಗಳಲ್ಲಿ ಖಾಜಿಯೊಬ್ಬನನ್ನು ನೇಮಕ ಮಾಡಲಾಗುತ್ತಿದ್ದು, ಆ ಖಾಜಿಯು ನ್ಯಾಯ ತೀರ್ಮಾನವನ್ನು ಕೊಡುತ್ತಿದ್ದ. ಗ್ರಾಮಗಳಲ್ಲಿನ ಪಕ್ಷಗಾರರು ತಮ್ಮ ವ್ಯಾಜ್ಯವನ್ನು ತಮ್ಮ ಗ್ರಾಮಗಳ ಮೇಲೆ ಅಧಿಕಾರ ವ್ಯಾಪ್ತಿಯಿದ್ದ ನೆರೆಯ ಊರಿನ ಖಾಜಿಯ ತೀರ್ಮಾನಕ್ಕೆ ಒಪ್ಪಿಸುತ್ತಿದ್ದರು. ಇದಲ್ಲದೆ ಖಾಜಿಗಳನ್ನು ಬಿಟ್ಟು ತಮ್ಮ ವ್ಯಾಜ್ಯಗಳನ್ನು ಗ್ರಾಮಸ್ಥರು ವಾಣಿಜ್ಯ ಸಂಘಗಳಿಗೂ ಅಥವಾ ಜಾತಿ ನ್ಯಾಯಾಲಯಗಳಿಗೂ ತೆಗೆದುಕೊಂಡು ಹೋಗಬಹುದಾಗಿತ್ತು. ಈ ಅವಕಾಶವನ್ನು ಕಲ್ಪಿಸಿದ್ದ ರಾಜ್ಯನೀತಿಯ ಉದ್ದೇಶ, ಕಾಲಾನುಕಾಲದಿಂದ ನಡೆದುಬಂದ ಮತ್ತು ಅತಿಸಮರ್ಪಕವಾಗಿ ಕಾರ್ಯನಿರ್ವಹಿಸುತ್ತಿದ್ದ ಈ ಸಂಸ್ಥೆಗಳು ನ್ಯಾಯಪರಿಪಾಲನೆಯಲ್ಲಿ ಸರ್ಕಾರದೊಂದಿಗೆ . ಸಹಕಾರವನ್ನು ಮುಂದುವರೆಸಿಕೊಂಡು ಹೋಗಲಿ ಎಂದಾಗಿತ್ತು. ಇಲ್ಲದಿದ್ದರೆ, ಅವುಗಳು

ಗೊತ್ತುಗುರಿಯಿಲ್ಲದೆ ನಾಶವಾಗಿ ಹೋಗುತ್ತಿದ್ದವು. ದೆಹಲಿಯ ಸುಲ್ತಾನರುಗಳು ಹಾಗೂ ಮೊಘಲ್ ಚಕ್ರವರ್ತಿಗಳು, ನ್ಯಾಯ ಪರಿಪಾಲನೆಮಾಡುತ್ತಿದ್ದ ಮೇಲ್ಕಂಡ ವ್ಯವಸ್ಥೆಗಳಲ್ಲಿ ಮೂಗು ಹಾಕುವುದು ಕಾರ್ಯಸಾಧುವೂ ಮತ್ತು ಲಾಭದಾಯಕವೂ ಅಲ್ಲವೆಂದು ಮನಗಂಡು ಅವುಗಳ ಗೋಜಿಗೆ ಹೋಗುತ್ತಿರಲಿಲ್ಲ. ಅಕ್ಬರನು ಗ್ರಾಮ ಪಂಚಾಯಿತಿಯನ್ನು ಕಾನೂನು ಬದ್ಧವಾದ ನ್ಯಾಯಾಲಯವೆಂದು ಗುರುತಿಸಿ ಅವುಗಳು ಕೊಡುತ್ತಿದ್ದ ತೀರ್ಮಾನವನ್ನು ಎತ್ತಿಹಿಡಿಯುತ್ತಿದ್ದ ಈ ಪಂಚಾಯಿತಿಗಳ ಚಟುವಟಿಕೆಗಳಿಗೆ ಅಧಿಕೃತ ಮನ್ನಣೆಯನ್ನು ಕೊಟ್ಟಿದ್ದ.

## ಪರಗಣ ನ್ಯಾಯಾಲಯಗಳು

ಸೇಕ್‌ದಾರ್, ಖಾಜಿ ಮತ್ತು ಅಮೀನ್ ಇವುಗಳು ಮೂರು ಬಗೆಯ ಪರಗಣ ನ್ಯಾಯಾಲಯಗಳಾಗಿದ್ದವು. ಶುದ್ಧಾಂಗವಾಗಿ ಧರ್ಮಾತೀತವಾದ ಅಪರಾಧಿಕ ಪ್ರಕರಣಗಳನ್ನು ಸೇಕ್‌ದಾರ್ ನ್ಯಾಯಾಲಯ ವಿಚಾರಣೆ ಮಾಡುತ್ತಿತ್ತು. ವ್ಯಾವಹಾರಿಕ, ಅಪರಾಧಿಕ ಹಾಗೂ ಧಾರ್ಮಿಕ ಪ್ರಕರಣಗಳ ವಿಚಾರಣೆಯನ್ನು ಖಾಜಿ ನ್ಯಾಯಾಲಯ ಮಾಡುತ್ತಿತ್ತು. ರಾಜಸ್ವ (ರೆವೆನ್ಯೂ) ಪ್ರಕರಣಗಳ ವಿಚಾರಣೆಯನ್ನು ಅಮೀನ್ ನ್ಯಾಯಾಲಯಗಳು ಇತ್ಯರ್ಥ ಮಾಡುತ್ತಿದ್ದವು. ಫೌಜ್‌ದಾರನು ಸರ್ಕಾರ್ ಎಂಬ ಆಡಳಿತಾತ್ಮಕ ಘಟಕದ ಮುಖ್ಯಸ್ತ. ಅವನ ಆಡಳಿತ ವ್ಯಾಪ್ತಿಯೊಳಗೆ ಬರುತ್ತಿದ್ದ ಪರಗಣಗಳೆಂಬ ಉಪಘಟಕಗಳಿಗೆ ಸೇಕ್‌ದಾರನು ಮುಖ್ಯಸ್ತನಾಗಿರುತ್ತಿದ್ದ. ಈ ಸೇಕ್‌ದಾರನು ತನ್ನ ಪರಗಣದಲ್ಲಿ ಫೌಜ್‌ದಾರನನ್ನು ಪ್ರತಿನಿಧಿಸುತ್ತಿದ್ದ. ಈ ಸ್ಥಾನಬಲದಿಂದ ಸೇಕ್‌ದಾರನು ಪರಗಣದಲ್ಲಿನ ರಾಜ್ಯದ ಅಧಿಕಾರಿಗಳ ಮೇಲೆ ಪ್ರಭಾವ ಬೀರುತ್ತಿದ್ದ, ಒಂದು ನಿರ್ದಿಷ್ಟನೆಲೆಯ ಅವಶ್ಯಕತೆಗನುಗುಣವಾಗಿ, ವಿವಿಧ ಕ್ಷೇತ್ರಗಳಲ್ಲಿ ಸಹಾಯಕರುಗಳನ್ನು ನೇಮಿಸಿಕೊಳ್ಳಲು ಪರಗಣದ ಖಾಜಿಗೆ ಅಧಿಕಾರವಿತ್ತು. ಈ ಸಹಾಯಕರುಗಳು ನಾಯಿಬ್ ಖಾಜಿಗಳೆಂದು ಕರೆಯಲ್ಪಡುತ್ತಿದ್ದರು. ನಾಯಿಬ್-ಖಾಜಿಗಳು ಉಪಖಾಜಿಗಳೆಂಬ ತಮ್ಮ ಸಹಾಯಕರುಗಳನ್ನು ನೇಮಕಮಾಡಿಕೊಳ್ಳುತ್ತಿದ್ದರು.

ಹದಿನೇಳನೆಯ ಶತಮಾನದಲ್ಲಿ ನ್ಯಾಯಪರಿಪಾಲನೆಯ ಯಂತ್ರ ವಿಕೇಂದ್ರೀಕೃತವಾಗಿತ್ತು. ಈ ವಿಕೇಂದ್ರೀಕರಣದಿಂದ ಪಕ್ಷಗಾರರುಗಳಿಗೆ ಅನುಕೂಲವಾಗುತ್ತಿದ್ದುದಲ್ಲದೆ, ಶೀಘ್ರವಾಗಿ ನ್ಯಾಯ ದೊರಕುತ್ತಿತ್ತು. ಕೆಲಸದ ಹೊರೆಗನುಗುಣವಾಗಿ ಖಾಜಿಗಳನ್ನು ಅಥವಾ ಉಪಖಾಜಿಗಳನ್ನು ಪ್ರಕರಣಗಳ ವಿಚಾರಣೆಮಾಡಲು ನೇಮಕ ಮಾಡಲಾಗುತ್ತಿತ್ತು. ಈಗ ನಮ್ಮ ಕಾಲದಲ್ಲಿ ಕಂಡುಬರುವ ವ್ಯವಸ್ಥೆಗೆ (ಅಂದರೆ ಉಪವಿಭಾಗ ದಂಡಾಧಿಕಾರಿಗಳು, ತಹಸೀಲ್ದಾರರುಗಳು ಮತ್ತು ನಾಯಿಬ್ ತಹಸೀಲ್ದಾರರುಗಳು) ಮೇಲ್ಕಂಡ ವ್ಯವಸ್ಥೆ ಪೂರ್ವಭಾವಿಯಾಗಿತ್ತು.

## ಸರ್ಕಾರ್‌ದಲ್ಲಿನ ನ್ಯಾಯಾಲಯಗಳು (ಅಪರಾಧಿಕ)

ಸರ್ಕಾರ್ ಎಂಬುದು ಒಂದು ಆಡಳಿತಾತ್ಮಕ ಘಟಕ. ಇದರ ಮುಖ್ಯಸ್ಥನೆಂದರೆ

ಫೌಜ್‌ದಾರ. ರಾಜ್ಯದ ಇತರ ಮುಖ್ಯ ಅಧಿಕಾರಿಗಳೆಂದರೆ ಕೊತ್‌ವಾಲ, ಅಮೀನ್ ಮತ್ತು ಖಾಜಿ. ಧಾರ್ಮಿಕ ಅಪರಾಧಗಳನ್ನು ಖಾಜಿಯೂ, ಧಾರ್ಮಿಕೇತರ ಅಪರಾಧಗಳನ್ನು ಹೆಚ್ಚಾಗಿ ಕೊತ್‌ವಾಲನು ವಿಚಾರಣೆ ಮಾಡುತ್ತಿದ್ದರು. ಅದಾಗ್ಯೂ ಅಂಥ ಕಟ್ಟುನಿಟ್ಟಾದ ನಿಯಮಗಳೇನು ಇರಲಿಲ್ಲ. ಫೌಜ್‌ದಾರನು ಮುಖ್ಯ ಕಾರ್ಯನಿರ್ವಾಹಕನಾಗಿದ್ದು ಅವನು ರಾಜಕೀಯ ಅಪರಾಧಗಳನ್ನೂ ಸಹ ವಿಚಾರಣೆ ಮಾಡುತ್ತಿದ್ದ. ಅಲ್ಲದೆ, ದೂರುಗಳನ್ನು ವಿಚಾರಣೆ ಮಾಡುವಂತೆ ನ್ಯಾಯಾಲಯಗಳನ್ನು ನಿರ್ದೇಶಿಸುವ ಅಧಿಕಾರವನ್ನು ಹೊಂದಿರುತ್ತಿದ್ದ.

ಕೊತ್‌ವಾಲನಿಗೆ ತನ್ನ ಪೊಲೀಸ್ ಕರ್ತವ್ಯದ ಜೊತೆಗೆ ಕೆಲವಷ್ಟು ನ್ಯಾಯಿಕ ಅಧಿಕಾರಗಳೂ ಇದ್ದವು. ಟ್ಯಾವರ್‌ನಿಯರ್ ಎಂಬ ಫ್ರೆಂಚ್ ಪ್ರವಾಸಿಯು ತಿಳಿಸಿರುವ ಪ್ರಕಾರ ಕೊತವಾಲಿ ಎಂಬುದು ಒಂದು ರೀತಿಯ ಪೊಲೀಸ್ ಚೌಕಿಯಾಗಿತ್ತೆಂದು, ಅಲ್ಲಿ ಮುಖ್ಯ ಪೊಲೀಸ್ ವರಿಷ್ಠನೊಬ್ಬ ನ್ಯಾಯ ತೀರ್ಮಾನ ಮಾಡುತ್ತಿದ್ದನೆಂದು ಗೊತ್ತಾಗಿದೆ. ಸುಭೇದಾರ (ಗೌರ್ನರ್) ಮತ್ತು ಊರಿನ ನ್ಯಾಯಾಧೀಶರುಗಳು ವ್ಯವಹಾರ ಪ್ರಕರಣಗಳನ್ನು ನೋಡಿಕೊಳ್ಳುತ್ತಿದ್ದರು. ಕೊತ್‌ವಾಲನು ಅಪರಾಧ ಪ್ರಕರಣಗಳ ಸಂಜ್ಞಾನವನ್ನು ತೆಗೆದುಕೊಳ್ಳುತ್ತಿದ್ದನು. (ಗಮನ ತೆಗೆದುಕೊಳ್ಳುತ್ತಿದ್ದ). ತನ್ನ ಆಳ್ವಿಕೆಯ ಇಪ್ಪತ್ತೆಂಟನೆಯ ವರ್ಷದಲ್ಲಿ, ಅಕ್ಬರನು ಉನ್ನತ ದರ್ಜೆಯ ನಾಲ್ಕುಮಂದಿ ಆಸ್ಥಾನಿಕರ ಒಂದು ಸ್ಥಾಯೀ ಸಮಿತಿಯನ್ನು ನೇಮಕ ಮಾಡಿದ್ದ. ಚಕ್ರಾಧಿಪತ್ಯದಲ್ಲಿ ದೀನದಲಿತರ ಕುಂದುಕೊರತೆಗಳನ್ನು, ದೂರುಗಳನ್ನು ಈ ಸ್ಥಾಯಿ ಸಮಿತಿ ವಿಚಾರಿಸುತ್ತಿತ್ತು. ಖಾಜಿಯ ಕರ್ತವ್ಯಗಳು ಈಗಾಗಲೇ ಮೇಲೆ ತಿಳಿಸಿದ ಕರ್ತವ್ಯಗಳನ್ನೇ ಹೋಲುತ್ತಿದ್ದವು. ಕೊತ್‌ವಾಲನ ಪೊಲೀಸ್ ಮತ್ತು ನ್ಯಾಯಿಕ ಕರ್ತವ್ಯಗಳ ನಿರ್ವಹಣೆಯಲ್ಲಿ ಅಮೀನನು ಸಹಾಯ ಮಾಡಬೇಕಾಗಿತ್ತು. ಫೌಜ್‌ದಾರನು ಸಹ ಕೊತ್‌ವಾಲನ ಜೊತೆ ಅಪರಾಧಿಕ ಪ್ರಕರಣಗಳನ್ನು ವ್ಯವಹರಿಸುತ್ತಿದ್ದ. ಒಂದು ಪ್ರಾಂತದಲ್ಲಿನ ಸರ್ಕಾರ್ ಎಂಬ ಆಡಳಿತ ಘಟಕದಲ್ಲಿನ ಖಾಜಿಯನ್ನು ಪ್ರಾಂತದ ಮುಖ್ಯ ಖಾಜಿಯ ಶಿಪಾರಸ್ ಮೇರೆಗೆ ನೇಮಕಗೊಳಿಸಲಾಗುತ್ತಿತ್ತು. ಒಂದು ಪಟ್ಟಣದ ಮತ್ತು ಅದರ ಉಪನಗರಗಳ ಪೊಲೀಸ್ ಇಲಾಖೆಯು ಕೊತ್‌ವಾಲನ ಹತೋಟಿಗೆ ಒಳಪಟ್ಟಿತ್ತು. ಹಾಗೆಯೇ ಫೌಜ್‌ದಾರನ ಅಧಿಕಾರ ವ್ಯಾಪ್ತಿ ಗ್ರಾಮೀಣ ಕ್ಷೇತ್ರಗಳನ್ನು ಒಳಗೊಂಡಿತ್ತು. ನ್ಯಾಯಿಕ ಅಧಿಕಾರವಲ್ಲದೆ ಕೊತ್‌ವಾಲನು ಮುಹತಾಸಿಬ್‌ನ* ಎಲ್ಲ ಕರ್ತವ್ಯಗಳನ್ನು ನಿರ್ವಹಿಸುತ್ತಿದ್ದ. ಪೊಲೀಸ್ ಅಧಿಕಾರಿಗಳಿಗೂ ಶಿಕ್ಷೆ ವಿಧಿಸುವ ಅಧಿಕಾರವಿತ್ತು. ಕಳ್ಳತನ ಮತ್ತಿತರ ಅಪರಾಧಗಳ ಕುರಿತು ವಿಚಾರಣೆ ಮಾಡುವುದು ಕೊತ್‌ವಾಲನ ನ್ಯಾಯಿಕ ಅಧಿಕಾರಕ್ಕೊಳಪಟ್ಟಿತ್ತು.

## ಪ್ರಾಂತದಲ್ಲಿನ ನ್ಯಾಯಾಲಯಗಳು

ಪ್ರಾಂತದಲ್ಲಿನ ಪ್ರಾಂತೀಯ ಸುಬೇದಾರ (ಗೌರ್ನರ್), ದಿವಾನ್, ಸದರ್ ಮತ್ತು

---

*ಮುಹತಾಸಿಬ್ ಯಾರು ಎಂಬುದನ್ನು ಮುಂದೆ ನೋಡುತ್ತೇವೆ.

ಮೀರ್-ಅದಿಲರುಗಳ ನ್ಯಾಯಾಸ್ಥಾನಗಳಿದ್ದವು. ಅವರ ಅಧಿಕಾರವ್ಯಾಪ್ತಿ ಇಡೀ ಪ್ರಾಂತಕ್ಕೆ ವಿಸ್ತರಿಸಿತ್ತು. ಪ್ರಾಂತೀಯ ದಿವಾನನು ಒಬ್ಬ ಪ್ರಮುಖ ನ್ಯಾಯಿಕ ಅಧಿಕಾರಿಯಾಗಿರುತ್ತಿದ್ದ. ಅವನು ಮೇಲ್ಮನವಿ ನ್ಯಾಯಾಲಯವಾಗಿದ್ದುದು ಅಲ್ಲದೆ ನ್ಯಾಯಿಕ ಆಡಳಿತ ಮೇಲೆ ನಿಗಾ ಇಡುವವನೂ ಆಗಿದ್ದ; ಅಲ್ಲದೇ ಅಭಿರಕ್ಷಾಬಂಧನದಲ್ಲಿದ್ದವರ ಪ್ರಕರಣಗಳ (ಕಸ್ಟಡಿ ಪ್ರಕರಣಗಳ) ತನಿಖೆಯನ್ನು ಮಾಡುತ್ತಿದ್ದ.

## ಮುಹತಾಸಿಬ್ (ದೋಷಾನ್ವೇಷಕ)

ಮುಸಲ್ಮಾನರ ಪವಿತ್ರಗ್ರಂಥ ಖುರಾನ್, ಮುಸಲ್ಮಾನರನ್ನು ಸತ್ಕಾರ್ಯಗಳಲ್ಲಿ ತೊಡಗಿ ದುಶ್ಚಟಗಳಿಂದ ದೂರವಿರುವಂತೆ ಕಟ್ಟು ಮಾಡಿದೆ. ಈ ಕಟ್ಟುಪಾಡಿನಂತೆ ಜನ ನಡೆಯುವುದನ್ನು ಅನ್ವೇಷಿಸುವವನೇ ಮುಹತಾಸಿಬ್ ಎಂಬ ಅಧಿಕಾರಿ. ಇಸ್ಲಾಮೀ ರಾಜ್ಯಗಳಲ್ಲಿ ಈ ಅಧಿಕಾರಿಯನ್ನು ನಿಯುಕ್ತಗೊಳಿಸಲಾಗಿತ್ತು. ಕಡಿಮೆ ಅಳತೆ ಮತ್ತು ತೂಕದ ಪ್ರಕರಣಗಳು, ಕಲಬೆರಕೆ ಪ್ರಕರಣಗಳು, ಹಣಕೊಡಬಲ್ಲ ಶಕ್ತಿಯಿದ್ದರೂ, ಕೊಡಬೇಕಾದ ಹಣ ಕೊಡದೇ ಇದ್ದ ಪ್ರಕರಣಗಳು, ಇವುಗಳನ್ನೂ ಸಹ ಮುಹತಾಸಿಬ್ ವಿಚಾರಣೆ ಮಾಡಬಹುದಾಗಿತ್ತು. ವಿಚಾರಣೆ ಮುಗಿದನಂತರ ತೀರ್ಪುಕೊಟ್ಟು, ತೀರ್ಪನ್ನು ಜಾರಿಗೊಳಿಸಬಹುದಾಗಿತ್ತು. ಆದರೆ, ಇಂತಹ ಪ್ರಕರಣಗಳಲ್ಲಿ ಪ್ರತಿವಾದಿಯು ತನ್ನ ತಪ್ಪನ್ನು ಒಪ್ಪಿಕೊಂಡರೆ ಮಾತ್ರ ವಿಚಾರಣೆ ಮಾಡಬಹುದಾಗಿತ್ತೇ ವಿನಾ, ತಕರಾರಿದ್ದ ಪ್ರಕರಣಗಳನ್ನು ಅವನು ವಿಚಾರಣೆ ಮಾಡುವ ಹಾಗಿರಲಿಲ್ಲ. ಅಲ್ಲದೇ ಬೇರೆ ಯಾವುದೇ ಪ್ರಕರಣಗಳನ್ನೂ ಅವನು ವಿಚಾರಣೆಮಾಡುವ ಹಾಗಿರಲಿಲ್ಲ. ಇತರ ಪ್ರಕರಣಗಳ ವಿಚಾರಣೆಮಾಡಲು ಮುಹತಾಸಿಬ್‌ನ ಅಧಿಕಾರ ವ್ಯಾಪ್ತಿ (ಕೆಲವು ಸಂದರ್ಭಗಳನ್ನು ವಿನಾಯಿಸಿ) ಖಾಜಿಯ ಅಧಿಕಾರ ವ್ಯಾಪ್ತಿಗೆ ಸರಿಸಮವಾಗಿತ್ತು. ಇದಲ್ಲದೆ, ಮೊಕದ್ದಮೆ ದಾಖಲಾಗದೆ ಇದ್ದ ಪ್ರಕರಣಗಳನ್ನು ಅವನು ತಾನೇ ತನಿಖೆ ಮಾಡಬಹುದಾಗಿತ್ತು. ಆದರೆ, ಖಾಜಿಗೆ ಈ ಅಧಿಕಾರವಿರಲಿಲ್ಲ. ಮೇಲಾಗಿ ಒತ್ತಡವನ್ನು ಹೇರಿ ಪ್ರಭಾವವನ್ನು ಬೀರಿ, ನಿಷ್ಠೂರವಾಗಿ ವರ್ತಿಸಿ ಮುಹತಾಸಿಬ್ ತನ್ನ ಕರ್ತವ್ಯಗಳನ್ನು ನಿರ್ವಹಿಸಬಹುದಾಗಿತ್ತು. ಖಾಜಿಯು ಮುಹತಾಸಿಬ್‌ನಿಗೆ ಆದೇಶ ಕೊಡಬಹುದಾಗಿತ್ತೇ ವಿನಾ ಮುಹತಾಸಿಬ್‌ನು ಖಾಜಿಗೆ ಆದೇಶಕೊಡುವ ಹಾಗಿರಲಿಲ್ಲ. ಮುಹಾತಾಸಿಬ್‌ನು ಯಾರಿಗಾದರೂ ಎಚ್ಚರಿಕೆ ಕೊಟ್ಟು ಅಂತಹ ಪ್ರಕರಣಗಳನ್ನು ರಾಜನಿಗೆ ವರದಿ ಮಾಡಬಹುದಿತ್ತು. ಆದರೆ ಅವನಿಗೆ ಯಾರನ್ನೂ ಸೆರಮನೆಗೆ ಕಳುಹಿಸುವ ಅಧಿಕಾರವಿರಲಿಲ್ಲ; ಈ ಅಧಿಕಾರ ಖಾಜಿಗೆ ಮಾತ್ರ ಇತ್ತು. ನಂಬಿಕೆದ್ರೋಹ ಮಾಡಿದ ಅಪ್ರಮಾಣಿಕ ವ್ಯಕ್ತಿಗಳಿಗೆ ವಾಗ್ದಂಡನೆ ನೀಡುವ ಅಧಿಕಾರ ಮುಹತಾಸಿಬ್‌ನಿಗೆ ಇತ್ತು. ಸಾರ್ವಜನಿಕ ರಸ್ತೆಗಳಲ್ಲಿ, ಅವು ಎಷ್ಟೇ ವಿಶಾಲವಾಗಿದ್ದರೂ, ಯಾರೂ ಕಟ್ಟಡಗಳನ್ನು ಕಟ್ಟದಂತೆ ನೋಡಿಕೊಳ್ಳಬೇಕಾಗಿತ್ತು. ಒಂದುವೇಳೆ ಸಾರ್ವಜನಿಕ ರಸ್ತೆಯ ಮೇಲೆ ಯಾವುದೇ ಕಟ್ಟಡಗಳನ್ನು ಕಟ್ಟಿದ್ದೇ ಆದರೆ, ಅಂಥ ಕಟ್ಟಡ ಮಸೀದಿಯೇ ಆದರೂ, ಅವುಗಳನ್ನು ಕೆಡವಿ ಹಾಕುವಂತೆ

ಅವನು ಆಜ್ಞೆ ಮಾಡಬಹುದಾಗಿತ್ತು, ಅಬುಹನೀಫ ಇದನ್ನೇ ಹೇಳುತ್ತಾನೆ. ಮುಹತಾಸಿಬ್ ನೈತಿಕ ನಡವಳಿಕೆಗಳ ವೀಕ್ಷಕ, ಪೌರ ಕಾರ್ಯಕರ್ತ ಹಾಗೂ ಕೆಲವು ಬಗೆಯ ಪ್ರಕರಣಗಳಲ್ಲಿ ನ್ಯಾಯಾಧೀಶನೂ ಆಗಿದ್ದ. ಮೇಲಿನ ಕರ್ತವ್ಯಗಳಲ್ಲದೆ ಅಲ್‌ಮವಾರ್ದಿ ತಿಳಿಸುವ ಇನ್ನೂ ಹಲವು ಕರ್ತವ್ಯಗಳು ಹೀಗಿವೆ. ಈ ಕರ್ತವ್ಯಗಳು ಮುಹತಾಸಿಬ್‌ನ ಜವಾಬ್ದಾರಿಗಳು ಎಷ್ಟು ಇತ್ತೆಂಬ ಒಂದು ಕಲ್ಪನೆಯನ್ನು ನಮಗೆ ಕೊಡುತ್ತದೆ:

i. ಮುಸ್ಲಿಮರು ತಮ್ಮ ಧಾರ್ಮಿಕ ಕರ್ತವ್ಯಗಳನ್ನು ಅಂದರೆ, ದೈನಂದಿನ ಪ್ರಾರ್ಥನೆಗಳನ್ನು ಹೇಳುವುದು, ರಮ್‌ಜಾನ್ ಮಾಸದಲ್ಲಿ ಉಪವಾಸವ್ರತ ಮಾಡುವುದು ಮತ್ತು ಮದ್ಯಪಾನ ಮಾಡದೇ ಇರುವುದು ಇವುಗಳ ಮೇಲೆ ನಿಗಾ ಇಡಬೇಕಾಗಿತ್ತು.

ii. ಕೈಕಾಲು ಗಟ್ಟಿಮುಟ್ಟಾಗಿದ್ದವನು ಭಿಕ್ಷೆಬೇಡದಂತೆ ತಡೆಯುವುದೂ ಅಲ್ಲದೇ ಬೀದಿಗಳಲ್ಲೆಲ್ಲೂ ಭಿಕ್ಷೆ ಬೇಡದಂತೆ ನೋಡಿಕೊಳ್ಳುವುದು, ಹಾಗೇನಾದರೂ ಭಿಕ್ಷುಕನೊಬ್ಬ ಅವನ ಮಾತನ್ನು ಕೇಳದೇ ಹೋದರೆ ಅವನನ್ನು 'ತಾಜೀರ್' ಮಾಡುವುದು.

iii. ವೈದ್ಯರುಗಳು ಮತ್ತು ಉಪಾಧ್ಯಾಯರುಗಳು ನಿರ್ವಹಿಸುವ ಕೆಲಸವನ್ನು ಅವಲೋಕಿಸುವುದು. ಏಕೆಂದರೆ ಅವರ ಕಾರ್ಯಕ್ಷಮತೆ ಮತ್ತು ಕಾರ್ಯ ತತ್ಪರತೆಯ ಮೇಲೆ ಪ್ರಜೆಗಳ ಆರೋಗ್ಯ ಮತ್ತು ಮಕ್ಕಳ ತರಬೇತಿ ಅವಲಂಬಿತವಾಗಿತ್ತು.

iv. ಯಜಮಾನರುಗಳು ತಮ್ಮ ಗುಲಾಮರ ಬಗ್ಗೆ ಕ್ರೌರ್ಯದಿಂದ ವರ್ತಿಸದೆ ಯುಕ್ತವಾಗಿ ನೋಡಿಕೊಳ್ಳುವಂತೆ ಮಾಡುವುದು.

v. ಬಿರುಗಾಳಿ ಎದ್ದಿರುವಾಗ ಇಲ್ಲವೇ ಮಿತಿಮೀರಿ ಜನರನ್ನು ತುಂಬಿಸಿಕೊಂಡು, ದೋಣಿಗಳು ತೀರವನ್ನು ಬಿಡದ ಹಾಗೆ ನೋಡಿಕೊಳ್ಳುವುದು.

ಒಬ್ಬ ಹೊಸದಾಗಿ ನಿಯುಕ್ತಗೊಳಿಸಲ್ಪಟ್ಟ ಮುಹತಾಸಿಬ್‌ನಿಗೆ ತನ್ನ ನ್ಯಾಯಿಕ ಸ್ವರೂಪದ ಕರ್ತವ್ಯಗಳನ್ನು ನಿರ್ವಹಿಸಲು ಈ ಕೆಳಗೆ ಕಂಡ ಮುಖ್ಯವಾದ ತಿಳುವಳಿಕೆಗಳನ್ನು ಕೊಡಲಾಗುತ್ತಿತ್ತು:

i. ಮಾದಕ ಪಾನೀಯಗಳ ಮಾರಾಟಕ್ಕೆ ಹಾಗೂ ವೇಶ್ಯೆಯರ ಗೃಹಗಳಿಗೆ ಪಟ್ಟಣಗಳಲ್ಲಿ ಅನುಮತಿ ನೀಡಕೂಡದು. ಇವುಗಳು ಪವಿತ್ರವಾದ ಕಾನೂನಿಗೆ (ಅಂದರೆ ಖುರಾನಿಗೆ) ವಿರೋಧವಾಗಿವೆ.

ii. ಖುರಾನಿನ ತತ್ವಗಳನ್ನು ಉಲ್ಲಂಘಿಸುವವರಿಗೆ ಬುದ್ಧಿವಾದವನ್ನೂ, ಎಚ್ಚರಿಕೆಯನ್ನೂ ಕೊಡುವುದು.

iii. ಮಾರುಕಟ್ಟೆಯಲ್ಲಿ ವಸ್ತುಗಳ ಮಾರಾಟದ ಬೆಲೆಯನ್ನು ನಿಗದಿಮಾಡುವುದು ಅಲ್ಲದೆ ಸರಿಯಾದ ತೂಕ ಮತ್ತು ಅಳತೆಗಳನ್ನು ಉಪಯೋಗಿಸುವುದನ್ನು ಕಡ್ಡಾಯ ಮಾಡುವುದು.

iv. ನಿಬಂಧನೆಗಳಿಗೆ ಹಾಗೂ ರೂಢಿ/ವಾಡಿಕೆಗಳಿಗೆ ವ್ಯತಿರಿಕ್ತವಾಗಿ ಯಾರಾದರೂ ಬಜಾರಿನಲ್ಲೇ ಆಗಲಿ, ಓಣಿಗಳಲ್ಲೇ ಆಗಲೀ, ರಸ್ತೆಯ ಒಂದು ಭಾಗಕ್ಕೆ ತೆರೆಹಾಕಿದ್ದರೆ ಇಲ್ಲವೆ ಮುಚ್ಚಿದರೆ, ಇಲ್ಲವೇ ಕಸಕಡ್ಡಿಗಳನ್ನು ರಸ್ತೆಯಲ್ಲಿ ಚೆಲ್ಲಾಡಿದರೆ, ಹಾಗೆ ಮಾಡಿದವರನ್ನು ಇಂತಹ ಉಲ್ಲಂಘನೆಯನ್ನು ನಿಲ್ಲಿಸಬೇಕೆಂದು ಒತ್ತಾಯಪೂರ್ವಕವಾಗಿ ಹೇಳಬೇಕು.

ಪ್ರವಾದಿಯವರ ಕಾನೂನನ್ನು ಕಡ್ಡಾಯವಾಗಿ ಜಾರಿಗೆ ತರುವ ಅಧಿಕಾರಿಯಾಗಿ ಮುಹತಾಸಿಬ್‌ನಿಗೆ (ದೋಷಾನ್ವೇಷಕ) ಪರಮಾಧಿಕಾರವಿತ್ತು. ಕ್ರಿ.ಶ. 1672ರಲ್ಲಿ ಹುಸೇನ್ ಆಲಿಖಾನ್‌ನ ದಿವಾನನಾದ ಮೊಹಮ್ಮದ್ ತಾಹೀರ್ ಎಂಬುವನ ತಲೆಯನ್ನು ಮೊಹತಾಸಿಬ್ ಒಬ್ಬ ಕೊಟ್ಟ ದೂರಿನ ಮೇಲೆ ಕಡಿದು ಹಾಕಲಾಯಿತು. ಅವನ ಅಪರಾಧವೆಂದರೆ, ಇಸ್ಲಾಂ ಧರ್ಮದ ಮೊದಲ ಮೂರು ಖಲೀಫಾಗಳ ನಿಂದನೆಯನ್ನು ಮಾಡಿದುದು. ನೀತಿಗಳನ್ನು ಕಡ್ಡಾಯವಾಗಿ ಜಾರಿಮಾಡಿದ ಒಂದು ಸ್ವಾರಸ್ಯವಾದ ಪ್ರಕರಣವಿದೆ. ಕ್ರಿ.ಶ. 1667ರಲ್ಲಿ ಒಬ್ಬ ಪೋರ್ಚುಗೀಸ್ ಕ್ರೈಸ್ತ ಭಿಕ್ಷುವೊಬ್ಬ ಇಸ್ಲಾಂ ಧರ್ಮಕ್ಕೆ ಮತಾಂತರಗೊಂಡ. ಆದರೆ ಅನಂತರ ತನ್ನ ಮೊದಲ ಧರ್ಮಕ್ಕೆ ಮರಳಿದ. ಇಸ್ಲಾಂ ಧರ್ಮವನ್ನು ತ್ಯಜಿಸಿದುದಕ್ಕಾಗಿ ಶರಿಯತ್ ನಿಯಮಗಳ ಪ್ರಕಾರ ಅವನಿಗೆ ಮರಣದಂಡನೆ ವಿಧಿಸಲಾಯಿತು. ದೆಹಲಿಯ ಗಣ್ಯ ಸೂಫಿಯಾದ ಸರ್ಮದ್ ಎಂಬುವವನ ವಿಚಾರಣೆ ಅತ್ಯಂತ ಗಮನಾರ್ಹವಾದುದು. ಬೆತ್ತಲಾಗಿದ್ದುದೇ ಅವನ ಏಕೈಕ ತಪ್ಪು; ಇದು ಇಸ್ಲಾಮಿಗೆ ವಿರೋಧವಾದುದು. ಅನೇಕ ಐರೋಪ್ಯ ಪ್ರವಾಸಿಗಳು ಮೊಘಲ್ ಚಕ್ರವರ್ತಿಗಳು ನಡೆಸಿದ ವಿಚಾರಣೆಗಳ ಬಗ್ಗೆ ಸ್ವಾರಸ್ಯಕರ ಸಂಗತಿಗಳನ್ನು ದಾಖಲಿಸಿದ್ದಾರೆ. ಕ್ರಿ.ಶ. 1511ರಲ್ಲಿ ವಿಲಿಯಂ ಫಿಂಚ್ ಎಂಬ ಪ್ರವಾಸಿ ಹೀಗೆ ಬರೆಯುತ್ತಾನೆ:

> “ಆಗ್ರಾದ ಕೋಟೆಗೆ ನಾಲ್ಕು ದಿಡ್ಡಿ ಬಾಗಿಲುಗಳು ಇವೆ. ಪಶ್ಚಿಮದ ಬಾಗಿಲನ್ನು ಕಛೇರಿ ಬಾಗಿಲು ಎಂದು ಕರೆಯುತ್ತಾರೆ. ಈ ಬಾಗಿಲ ಒಳಗೆ ಮಹಾದ್ವಾರದ ಮೇಲೆ ಖಾಜಿಯ ಮುಖ್ಯ ನ್ಯಾಯಾಧೀಶ ಪೀಠವಿದೆ. ಈ ಪೀಠದ ಮೇಲುಗಡೆ ಕಛೇರಿ ಅಥವಾ ಹಾಜರಿ ನ್ಯಾಯಾಲಯಗಳು ಇವೆ. ರಾಜನ ವಜೀರನು ಪ್ರತಿದಿನ ಬೆಳಿಗ್ಗೆ ಇಲ್ಲಿ ಕೂರುತ್ತಾನೆ. ಮಂಗಳವಾರದ ದಿನ ನೆತ್ತರಿನ ದಿನ; ಕಾದಾಡುವ ಮೃಗಗಳ ಹಾಗೂ ರಾಜನಿಂದ ವಿಚಾರಣೆಗೆ ಒಳಪಟ್ಟು, ನ್ಯಾಯ ದೊರಕಿ ಮರಣದಂಡನೆಗೆ ಗುರಿಯಾದವರ ರಕ್ತ...” (ಪುರ್ಚಸ್ iv, 72, 73)

ಔರಂಗಜೇಬನು ಹೇಗೆ ನ್ಯಾಯಪ್ರದಾನ ಮಾಡುತ್ತಿದ್ದನೆಂದು ಬರ್ನಿಯರ್ ಎಂಬ ಪ್ರತ್ಯಕ್ಷದರ್ಶಿ ಹೀಗೆ ವಿವರಿಸುತ್ತಾನೆ:

> “ಸಾರ್ವಜನಿಕರಿಗೆ ದರ್ಶನಕೊಡುವ ಸಭಾಂಗಣದಲ್ಲಿ ನೆರೆದಿದ್ದ ಗುಂಪಿನಲ್ಲಿ ಮೇಲಕ್ಕೆ ಚಾಚಿದ ಕೈಗಳಲ್ಲಿ ಹಿಡಿದ ಅರ್ಜಿಗಳನ್ನು ದೊರೆಯ ಬಳಿಗೆ ತಂದು ಅವನಿಗೆ ಕೇಳುವ ಹಾಗೆ ಓದಲಾಗುತ್ತಿತ್ತು. ಹಾಗೆ ಅರ್ಜಿ ಕೊಟ್ಟವರನ್ನು ತನ್ನ ಬಳಿಗೆ ಕರೆದು, ಚಕ್ರವರ್ತಿ ಸ್ವತಃ ತಾನೇ ಪರೀಕ್ಷೆಮಾಡುತ್ತಿದ್ದ. ಅಲ್ಲಿಯೇ ನೊಂದವರಿಗಾದ ಅನ್ಯಾಯಗಳನ್ನು ಅನೇಕ ಬಾರಿ ಸರಿಪಡಿಸುತ್ತಿದ್ದ.”

ಮಾನುಕ್ಕಿ ಎಂಬುವನು ಕೂಡ ಚಕ್ರವರ್ತಿಯ ನ್ಯಾಯ ವಿತರಣೆಯ ವೈಖರಿ ಬಗ್ಗೆ ಹೀಗೆ ಹೇಳುತ್ತಾನೆ:

> "ದೊರೆಯು ಅವ್ವಗಳಲ್ಲಿ ಸಾರ್ವಜನಿಕ ಸಭೆಯನ್ನು ನಡೆಸುತ್ತಾನೆ. ನೊಂದವರು ಆ ಸಭೆಗೆ ಬಂದು ದೊರೆಗೆ ದೂರನ್ನು ಕೊಡುವುದು ಸರ್ವೇ ಸಾಮಾನ್ಯ. ಕೆಲವರು ಕೊಲೆಗಾರರಿಗೆ ತಕ್ಕ ಶಿಕ್ಷೆಯಾಗಬೇಕೆಂದು ಕೇಳಿದರೆ ಮತ್ತೆ ಕೆಲವರು ತಮಗಾದ ಅನ್ಯಾಯ ಮತ್ತು ತಾವು ಒಳಗಾದ ಕ್ರೌರ್ಯದ ಬಗ್ಗೆ ದೂರುತ್ತಾರೆ."
>
> "ಚೋರರ ತಲೆ ತೆಗೆಯಬೇಕೆಂದು ರಾಜನು ಆದೇಶಿಸುತ್ತಾನೆ. ಅಲ್ಲದೇ ಲೂಟಿಗೆ ಗುರಿಯಾದ ಪ್ರವಾಸಿಗಳಿಗೆ ಪರಿಹಾರವನ್ನು ಕೊಡಬೇಕೆಂದು ಸುಬೇದಾರರುಗಳಿಗೆ ಮತ್ತು ಪೌಜ್‌ದಾರರುಗಳಿಗೆ ತಾಕೀತು ಮಾಡುತ್ತಾನೆ. ಕೆಲವು ಪ್ರಕರಣಗಳಲ್ಲಿ ಕಾನೂನು ಉಲ್ಲಂಘಿಸಿದವರಿಗೆ ಕ್ಷಮೆ ಇಲ್ಲವೆಂದು ಪ್ರಕಟಿಸುತ್ತಾನೆ. ಇನ್ನೂ ಕೆಲವು ಪ್ರಕರಣಗಳಲ್ಲಿ ವಸ್ತುಸ್ಥಿತಿಯನ್ನು ಕುರಿತು ತನಿಖೆ ಮಾಡಿ ತನಗೆ ವರದಿ ಮಾಡಬೇಕೆಂದು ಆಜ್ಞಾಪಿಸುತ್ತಾನೆ..."

## ನ್ಯಾಯಾಧೀಶರುಗಳಿಗೆ ತಿಳುವಳಿಕೆಗಳು

ಹೊಸದಾಗಿ ನೇಮಕಹೊಂದಿದ ನ್ಯಾಯಾಧೀಶನಿಗೆ ಖಾಜಿ-ಉಲ್-ಖುಜತ್ ಹೀಗೆ ಆದೇಶಿಸುತ್ತಾನೆ:

> "ನ್ಯಾಯವಾಗಿ ವರ್ತಿಸು. ಪ್ರಾಮಾಣಿಕನಾಗಿರು; ನಿಷ್ಪಕ್ಷಪಾತಿಯಾಗಿರು. ಪಕ್ಷಗಾರರ ಎದುರಿನಲ್ಲೇ ವಿಚಾರಣೆ ನಡೆಸು. ವಿಚಾರಣೆಯನ್ನು ನ್ಯಾಯಾಸ್ಥಾನದಲ್ಲಿ ಮತ್ತು ಸರ್ಕಾರೀ ಮುಕಾಕುಮದ ಪೀಠದಲ್ಲಿ ನಡೆಸು.'
>
> "ಉಡುಗೊರೆಗಳನ್ನು ತೆಗೆದುಕೊಳ್ಳಬೇಡ... ನೀನು ಬರೆಯುವ ತೀರ್ಪುಗಳನ್ನು, ಕ್ರಯ ಪತ್ರಗಳನ್ನೂ, ಆಧಾರ ಪತ್ರಗಳನ್ನು ಮತ್ತಿತರ ವಿಧಿ ಸಮ್ಮತ ದಸ್ತಾವೇಜುಗಳನ್ನು ಎಚ್ಚರಿಕೆಯಿಂದ ಬರೆ; ಇಲ್ಲದೇ ಹೋದರೆ, ಪಂಡಿತರುಗಳು, ಅದರಲ್ಲಿನ ದೋಷಗಳನ್ನು ಬಯಲುಮಾಡಿ ನಿನ್ನ ಮಾನವನ್ನು ತೆಗೆಯುತ್ತಾರೆ."

## ಮೊಘಲರ ನ್ಯಾಯ ಪ್ರದಾನದ ಲಕ್ಷಣಗಳು

ಮೊಘಲರ ನ್ಯಾಯ ವಿತರಣೆ, ಅದರಲ್ಲೂ 16 ಮತ್ತು 17ನೆಯ ಶತಮಾನಗಳಲ್ಲಿ, ಶೀಘ್ರವಾದುದು, ದುಬಾರಿಯಲ್ಲದ್ದು ಮತ್ತು ಬಹುತೇಕ ನಿಜಸಂಗತಿಗಳ ಮೇಲೆ ಅವಲಂಬಿತವಾದುದು ಆಗಿತ್ತು. ಚಕ್ರವರ್ತಿಗಳು ಸುಲಭವಾಗಿ ಬಡವರಿಗೆ ದರ್ಶನ ಕೊಡುತ್ತಿದ್ದರು, ಮತ್ತು ಭ್ರಷ್ಟನ್ಯಾಯಾಧೀಶರುಗಳನ್ನು ತೀವ್ರವಾಗಿ ತರಾಟೆಗೆ ತೆಗೆದುಕೊಳ್ಳುತ್ತಿದ್ದರು. ನಮ್ಮಲ್ಲಿ ಈಗ ಇರುವ ಪರಿಸ್ಥಿತಿ ಎಂದರೆ "ನಿಧಾನಿಸಿದ ನ್ಯಾಯ ನಿರಾಕರಿಸಿದ ನ್ಯಾಯ" ಎನ್ನುವುದು ಮೊಘಲರ ಕಾಲದ ನ್ಯಾಯ ಪರಿಪಾಲನೆಗೆ ಅನ್ವಯಿಸುವುದಿಲ್ಲ. ಏಕೆಂದರೆ ಆಗ ಪ್ರಕರಣಗಳನ್ನು ಶೀಘ್ರವಾಗಿ ಇತ್ಯರ್ಥಗೊಳಿಸಿ ತೀರ್ಪನ್ನು ವಿಳಂಬವಿಲ್ಲದೆ, ಸಾಧ್ಯವಾದರೆ ಸ್ಥಳದಲ್ಲೆ

ಜಾರಿಮಾಡುತ್ತಿದ್ದರು. ಈ ವಿಷಯವನ್ನು ನಾವು ವಿದೇಶಿ ಪ್ರವಾಸಿಗರ ಹಾಗೂ ಸಮಕಾಲೀನ ಭಾರತೀಯ ಚರಿತ್ರಕಾರರ ಪುರಾವೆಗಳಿಂದ ಸಿದ್ಧಪಡಿಸಬಹುದು. ಈಗಲಾದರೋ, ಶಿಕ್ಷೆಯನ್ನಾಗಲೀ ಅಥವಾ ಡಿಕ್ರಿಯನ್ನಾಗಲೀ ಜಾರಿಗೊಳಿಸುವುದರಲ್ಲಿ ಆಗುವ ವಿಳಂಬ ಒಂದು ದೀರ್ಘಕಾಲದ ವ್ಯಾಧಿಯೇ ಆಗಿದೆ.

ಆತುರ ಪಟ್ಟಲ್ಲಿ ಅನ್ಯಾಯವಾಗುವ ಸಂಭವವು ಇತ್ತೆಂದು ಹೇಳಬಹುದಾಗಿದ್ದರೂ, ಇಂತಹ ಪ್ರಕರಣಗಳು ವಿರಳವಾಗಿದ್ದವು. ಕಾರಣ, ನ್ಯಾಯಾಧೀಶರುಗಳು ನಿಷ್ಪಕ್ಷಪಾತಿಗಳು ಮತ್ತು ತಿಳುವಳಿಕಸ್ಥರೂ ಆಗಿದ್ದರು. ಬಹುಶಃ ಮೊಘಲರ ನ್ಯಾಯ ಪ್ರದಾನ ವಿಧಾನವು ಈಗಿನಷ್ಟು ಸುಗಮವಾಗಿಯೂ, ಕ್ರಮಬದ್ಧವಾಗಿಯೂ, ಶ್ರೇಣೀಕೃತವಾಗಿಯೂ ಮತ್ತು ಪರಿಪೂರ್ಣವಾಗಿಯೂ ಇರಲಿಲ್ಲವೆಂದು ಹೇಳಬಹುದು. ಆದರೆ, ಆಗಿನ ಕಾಲದ ರಾಜರುಗಳಿಗೆ ನ್ಯಾಯಪರಿಪಾಲನೆಯಲ್ಲಿ ತೀವ್ರ ಆಸಕ್ತಿ ಇತ್ತೆಂದು ಧಾರಾಳವಾಗಿ ಹೇಳಬಹುದು. ಅವರ ವಯಸ್ಸು, ಅವರಿಗೆ ದೇವರಲ್ಲಿದ್ದ ಭಯಭಕ್ತಿ, ಪ್ರಜೆಗಳ ಅತೃಪ್ತಿ ಮತ್ತು ವಿಪ್ಲವವಾಗುವ ಸಂಭವಗಳಿಂದ ಅವರ ನಿರಂಕುಶ ಸ್ವಭಾವವು ಹದಗೊಳಿಸಲ್ಪಟ್ಟಿತ್ತು. ಆಗಿನ ವ್ಯವಸ್ಥೆಯು ಸ್ವಲ್ಪಮಟ್ಟಿಗೆ ಒರಟಾಗಿಯೂ, ಅವ್ಯವಸ್ಥಿತವೂ ಮತ್ತು ಸಿದ್ಧಪಡಿಸಲ್ಪಟ್ಟಿದ್ದಾಗಿ ತೋರಿದರೂ ನಿಷ್ಪಕ್ಷಪಾತವಾದದ್ದು, ಚುರುಕಾದುದೂ ಮತ್ತು ದುಬಾರಿಯಲ್ಲದ್ದೂ ಆಗಿದ್ದು, ಅನೇಕ ರೀತಿಯಲ್ಲಿ, ವಿಳಂಬಗಳು ಅನಿಶ್ಚಿತತೆಗಳು ಮತ್ತು ಭ್ರಷ್ಟಾಚಾರಗಳಿಂದ ತುಂಬಿ ತುಳುಕುತ್ತಿರುವ ಈಗಿನ ನ್ಯಾಯಪರಿಪಾಲನೆಯ ವ್ಯವಸ್ಥೆಗಿಂತ ಉತ್ಕೃಷ್ಟವಾಗಿತ್ತು.

# 3

# ಬ್ರಿಟಿಷರ ಕಾಲ

ಹದಿನೇಳನೆಯ ಶತಮಾನದಲ್ಲಿ ಈಸ್ಟ್ ಇಂಡಿಯಾ ಕಂಪನಿಯವರು ಬೊಂಬಾಯಿ (ಈಗಿನ ಮುಂಬಯಿ), ಮದರಾಸು ಮತ್ತು ಕಲ್ಕತ್ತೆಯಲ್ಲಿ ಮುಖ್ಯವಾದ ವಾಣಿಜ್ಯ ವಸಾಹತುಗಳನ್ನು ಸ್ಥಾಪಿಸಿದ್ದರು. ಆದಾಗ್ಯೂ ಅವರು ಹೆಚ್ಚಾಗಿ ವರ್ತಕರಾಗಿ ಮತ್ತು ಕಾರ್ಖಾನೆಗಳ ಒಡೆಯರಾಗಿ ಉಳಿದರು. ಈ ಮೂರು ಪಟ್ಟಣಗಳಲ್ಲಿ, ಬೊಂಬಾಯಿ ಪರ್ಯಾಯ ದ್ವೀಪವು ಇಂಗ್ಲೆಂಡ್ ದೇಶದ ದೊರೆಗೆ ಮದುವೆಯ ಕಾಲದಲ್ಲಿ ಕೊಟ್ಟ ಬಳುವಳಿಯಾಗಿತ್ತು. ಆದುದರಿಂದ ಅಲ್ಲಿ ಅವರದೇ ಸಾರ್ವಭೌಮತ್ವ. ಇನ್ನೆರಡು ಪಟ್ಟಣಗಳಲ್ಲಿ ಅಂದರೆ ಕಲ್ಕತ್ತ ಮತ್ತು ಮದರಾಸುಗಳಲ್ಲಿ ಇಂಗ್ಲೀಷರು ತಮ್ಮ ಯಾವತ್ತು ಆಸ್ತಿಪಾಸ್ತಿಗಳನ್ನು ಮೊಘಲ್ ದೊರೆಯ ಅನುಮತಿಯಿಂದ ಅವನಿಗೆ ವಿಧೇಯರಾಗಿ ಸ್ವಾಧೀನಹೊಂದಿ ಅನುಭವಿಸುತ್ತಿದ್ದರು. ಹೇಗಾದರೂ, ಈ ಎಲ್ಲ ವಸಾಹತುಗಳಲ್ಲಿನ ಇಂಗ್ಲೀಷ್ ನಿವಾಸಿಗಳು ತಮ್ಮದೇ ಕಾನೂನನ್ನು ಅನುಸರಿಸುತ್ತಿದ್ದರು; ತಮ್ಮವರೇ ಆದ ಅವರ ಅಧಿಕಾರಿಗಳು ಆ ಕಾನೂನಿನ ಪರಿಪಾಲನೆ ಮಾಡುತ್ತಿದ್ದರು. ಎಲಿಜಬೆತ್ ರಾಣಿಯು ದಯಪಾಲಿಸಿದ ಕ್ರಿ.ಶ. 1601ರ ಮೊದಲನೆಯ ಹಕ್ಕು ಬಾಧ್ಯತೆಯ ಸನ್ನದು, ಕಂಪನಿಗೆ ಕೆಲವು ಅಧಿಕಾರಗಳನ್ನು ಕೊಡಮಾಡಿತು. ಇದರ ಬಲದಿಂದ ಕಂಪನಿಯು ಒಂದು ಇತಿಮಿತಿಯೊಳಗೆ ಶಾಸನಗಳನ್ನು ಮಾಡುವುದೂ ಅಲ್ಲದೇ, ಆ ಶಾಸನಗಳನ್ನು ಪರಿಪಾಲಿಸುವುದಕ್ಕೂ, ಜಾರಿ ಮಾಡುವುದಕ್ಕೂ ಅವುಗಳ ಉಲ್ಲಂಘನೆ ಮಾಡಿದವರಿಗೆ ದಂಡವನ್ನೂ, ದಂಡನೆಯನ್ನೂ, ವಿಧಿಸುವುದಕ್ಕೆ ಅಧಿಕಾರ ಹೊಂದಿತ್ತು. ಕ್ರಿ.ಶ. 1618ರಲ್ಲಿ ಸರ್ ಥಾಮಸ್ ಮನ್ರೋ ಎಂಬುವನು ಮೊಘಲ್ ಚಕ್ರವರ್ತಿಯ ಆಸ್ಥಾನದಲ್ಲಿ ಇಂಗ್ಲೆಂಡಿನ ರಾಜ ಮೊದಲನೇಯ ಜೇಮ್ಸ್‌ನ ರಾಯಭಾರಿಯಾಗಿದ್ದನು. ಇವನು ಸೂರತ್‌ನ ವಸಾಹತಿನಲ್ಲಿದ್ದ ಇಂಗ್ಲಿಷರಿಗಾಗಿ ಮೊಘಲ್ ಚಕ್ರವರ್ತಿಯಿಂದ ಒಂದು ವಿಶೇಷ ಸವಲತ್ತನ್ನು ಪಡೆದುಕೊಂಡ. ಅದೇನೆಂದರೆ ಅವರೊಳಗಿನ ವ್ಯಾಜ್ಯಗಳನ್ನು ಪರಿಹರಿಸುವುದಕ್ಕೆ ಅವರ ಅಧಿಕಾರಿಗಳಿಗೇ ಒಪ್ಪಿಸುವುದು. ಎರಡನೇ ಚಾರ್ಲ್ಸ್ ದೊರೆಯು ದಯಪಾಲಿಸಿದ ಕ್ರಿ.ಶ. 1661ರ ಸನ್ನದು ಪ್ರತಿ ವಸಾಹತಿನ ಗೌರ್ನರ್ ಮತ್ತು ಅವನ ನ್ಯಾಯಮಂಡಲಿ ಸದಸ್ಯರುಗಳಿಗೆ ನ್ಯಾಯಿಕ ಅಧಿಕಾರವನ್ನು ಕೊಟ್ಟಿತು. ಈ ಅಧಿಕಾರ ಬಲದಿಂದ ಗೌರ್ನರ್‌ನ ಮತ್ತು ಕಂಪನಿಯ ಆಳ್ವಿಕೆಗೆ ಒಳಪಟ್ಟ ಸಮಸ್ತ

ಜನಗಳ ಎಲ್ಲ ವ್ಯವಹಾರಿಕ ಮತ್ತು ಅಪರಾಧಿಕ ಪ್ರಕರಣಗಳನ್ನು ಚಕ್ರಾಧಿಪತ್ಯದ ಕಾನೂನಿಗನುಗುಣವಾಗಿ ತೀರ್ಮಾನ ಮಾಡಿ ಜಾರಿಮಾಡಬಹುದಾಗಿತ್ತು.

ಕ್ರಿಸ. 1683ರ ಸನ್ನದು ಕಂಪನಿಗೆ ಯುದ್ಧವನ್ನು ಮಾಡುವ ಮತ್ತು ಶಾಂತಿ ಒಪ್ಪಂದಕ್ಕೆ ಬರುವ ಪೂರ್ಣ ಅಧಿಕಾರವನ್ನು ಕೊಟ್ಟಿತ್ತು. ಅಲ್ಲದೇ ತನಗೆ ಸೂಕ್ತವೆಂದು ತೋರಿದ ಕಡೆಯಲ್ಲಿ ಅಥವಾ ಕಡೆಗಳಲ್ಲಿ ನ್ಯಾಯಾಲಯವನ್ನು ಸ್ಥಾಪಿಸಲು ಅವಕಾಶಕೊಟ್ಟಿತು. ಕ್ರಿ.ಶ. 1726ರಲ್ಲಿ ಚಕ್ರವರ್ತಿಯ ಸರ್ಕಾರ ಲೆಟರ್ಸ್ ಪೇಟೆಂಟ್* ದ್ವಾರ ಇಂಗ್ಲೆಂಡ್ ಮಾದರಿಯಲ್ಲಿ ಮದರಾಸು, ಬೊಂಬಾಯಿ ಮತ್ತು ಕಲ್ಕತ್ತಾದ ಫೋರ್ಟ್ ವಿಲಿಯಂನಲ್ಲಿ ಮೇಯರ್‌ನ ನ್ಯಾಯಾಲಯಗಳನ್ನು ಸ್ಥಾಪಿಸಿತು. ಈ ಮೇಯರ್‌ನ ನ್ಯಾಯಾಳಯದಲ್ಲಿ ಮೇಯರ್ ಅಲ್ಲದೆ, ಒಂಬತ್ತು ಮಂದಿ ಆಲ್ಡರ್‌ಮನ್‌ಗಳು ಇದ್ದರು. ಈ ನ್ಯಾಯಾಲಯಗಳಿಗೆ ಪಕ್ಷಗಾರರ ನಡುವಿನ ಎಲ್ಲ ತೆರನಾದ ಸಿವಿಲ್ ದಾವೆಗಳನ್ನು, ಅರ್ಜಿಗಳನ್ನು ಇತರ ಕಾರ್ಯಾಚರಣೆಗಳನ್ನು ತೀರ್ಮಾನ ಮಾಡುವ ಅಧಿಕಾರವಿತ್ತು. ಈ ನ್ಯಾಯಾಲಯಗಳನ್ನು ಅಭಿಲೇಖನ ನ್ಯಾಯಾಲಯಗಳೆಂದು ಘೋಷಿಸಲಾಯಿತು. ಇವುಗಳು ಕೊಟ್ಟ ತೀರ್ಮಾನದ ವಿರುದ್ಧ ಗೌರ್ನರ್ ಮತ್ತು ಅವನ ನ್ಯಾಯ ಮಂಡಳಿಗೆ ಮೇಲ್ಮನವಿ ಮಾಡಬಹುದಿತ್ತು. ಕೆಲವು ಗಂಭೀರವಾದ ಪ್ರಕರಣದಲ್ಲಿ ಎರಡನೇ ಮೇಲ್ಮನವಿಯನ್ನು ಸಂಯುಕ್ತ ರಾಜ್ಯದ (ಯುನೈಟೆಡ್ ಕಿಂಗ್‌ಡಮ್) ಪ್ರೀವಿಕೌನ್ಸಿಲ್‌ಗೂ ಕೊಂಡು ಹೋಗಬಹುದಾಗಿತ್ತು. ಗೌರ್ನರ್ ಮತ್ತು ಅವನ ಐವರು ಹಿರಿಯ ಕೌನ್ಸಿಲರುಗಳು ತ್ರೈಮಾಸಿಕ ಸತ್ರ ನ್ಯಾಯಾಲಯದಲ್ಲಿ ಕುಳಿತು ದೇಶದ್ರೋಹದ ಅಪರಾಧವನ್ನು ಬಿಟ್ಟು ಮಿಕ್ಕ ಎಲ್ಲ ಬಗೆಯ ಅಪರಾಧ ಪ್ರಕರಣಗಳನ್ನು ವಿಚಾರಣೆ ಮಾಡುತ್ತಿದ್ದರು. ಕ್ರಿ.ಶ. 1753ರಲ್ಲಿ ಲೆಟರ್ಸ್ ಪೇಟೆಂಟ್ ದ್ವಾರ 'ಬೇಡಿಕೆ ನ್ಯಾಯಾಲಯ'ಗಳನ್ನು ಮೂರು ಪ್ರೆಸಿಡೆನ್ಸಿ ಪಟ್ಟಣಗಳಲ್ಲೂ (ಕಲ್ಕತ್ತಾ, ಮದರಾಸು ಮತ್ತು ಬೊಂಬಾಯಿ) ಸ್ಥಾಪನೆ ಮಾಡಲಾಯಿತು. (ಈಗಿನ ಲಘು ವ್ಯವಹಾರ ನ್ಯಾಯಾಲಯಗಳಿಗೆ ಪೂರ್ವಭಾವಿ ನ್ಯಾಯಾಲಯಗಳು) ಈ ನ್ಯಾಯಾಲಯಗಳು ಇಪ್ಪತ್ತು ರೂಪಾಯಿಗೆ ಹೆಚ್ಚಿಲ್ಲದ ಮೌಲ್ಯದ ದಾವೆಗಳನ್ನು ತೀರ್ಮಾನ ಮಾಡುತ್ತಿದ್ದವು. ಇವುಗಳ ವ್ಯಾಪ್ತಿಯನ್ನು ಐರೋಪ್ಯರ ನಡುವಣ ವ್ಯಾಜ್ಯಕ್ಕೆ ಮಾತ್ರ ಮಿತಿಗೊಳಿಸಲಾಗಿತ್ತು. ಪಕ್ಷಗಾರರ ಒಪ್ಪಿಗೆಯಿಲ್ಲದೆ ಮೇಯರ್‌ನ ನ್ಯಾಯಾಲಯಗಳು ಭಾರತೀಯರಿಬ್ಬರ ನಡುವಣ ದಾವೆಗಳನ್ನು ತೀರ್ಮಾನ ಮಾಡುತ್ತಿರಲಿಲ್ಲ. ಈ ನಿರ್ಬಂಧ ಸ್ವಯಂ ವಿಧಿಸಿಕೊಂಡ ನಿರ್ಬಂಧ. ಇದರಿಂದ ಬ್ರಿಟಿಷ್ ಚಕ್ರವರ್ತಿಗೆ ಭಾರತದ ಯಾವುದೇ ಭಾಗದ ಮೇಲೆ ಸಾರ್ವಭೌಮತ್ವವನ್ನು ಚಲಾಯಿಸುವ ಉದ್ದೇಶವಿರಲಿಲ್ಲ ಎಂಬುದು ಗೋಚರವಾಗುತ್ತದೆ. ಕ್ರಿ.ಶ. 1765ನೇ ಇಸವಿಯನ್ನು ಈಸ್ಟ್ ಇಂಡಿಯಾ ಕಂಪನಿಯು ಪ್ರಾದೇಶಿಕ ಸಾರ್ವವಭೌಮತ್ವ

---

*ಭಾಷಾಂತರಕಾರನ ಟಿಪ್ಪಣಿ: ಲೆಟರ್ಸ್ ಪೇಟೆಂಟ್-ಏಕಸ್ವ ಪತ್ರ - ಚಕ್ರವರ್ತಿಯು ತನ್ನ ಮೊಹರು ಹಾಕಿಕೊಟ್ಟ ಬರವಣಿಗೆ. ಈ ಪತ್ರದಿಂದ ದತ್ತವಾದ ಅಧಿಕಾರದಿಂದ ಯಾವನೇ ವ್ಯಕ್ತಿಯಾಗಲೀ ಅಥವಾ ಕಂಪನಿಯಾಗಲೀ ಕೆಲವು ಸವಲತ್ತುಗಳನ್ನು ಅನುಭವಿಸಬಹುದಾಗಿತ್ತು.

ಪ್ರಾರಂಭವಾದ ವರ್ಷ ಎಂದು ಗುರುತಿಸಬಹುದು. ಬಂಗಾಳ, ಬಿಹಾರ ಮತ್ತು ಒರಿಸ್ಸಾ ರಾಜ್ಯಗಳ ಆರ್ಥಿಕ ಆಡಳಿತದ ಹಕ್ಕನ್ನು ಚಕ್ರವರ್ತಿ ಷಾ ಆಲಂನಿಂದ ಪಡೆದುಕೊಳ್ಳುವಲ್ಲಿ ಕ್ಲೈವನು ಯಶಸ್ವಿಯಾದ. ಮುರ್ಷಿದಾಬಾದ್‌ನ ನವಾಬನು, ನಿಜಾಮತ್ ಅಥವಾ ಅಪರಾಧಿಕ ಅಧಿಕಾರ ವ್ಯಾಪ್ತಿಯನ್ನು ತನ್ನ ಬಳಿಯೇ ಉಳಿಸಿಕೊಂಡನಾದರೂ, ಕಂಪನಿ ಸರ್ಕಾರವು ರಾಜಸ್ವ ವಸೂಲಿ, ಸೇನಾ ನಿರ್ವಹಣೆ, ವ್ಯವಹಾರ ಪ್ರಕರಣಗಳ ನ್ಯಾಯಿಕ ತೀರ್ಮಾನ, ಈ ಅಧಿಕಾರಗಳನ್ನು ತನ್ನದಾಗಿಸಿಕೊಂಡಿತು. ದೇಶದ ಒಳಭಾಗದಲ್ಲಿನ ಸ್ಥಿತಿಯ ಬಗ್ಗೆ ಪರಿಚಯವಿಲ್ಲದ ಕಾರಣ ಕ್ರಿ.ಶ. 1772ರವರೆಗೆ ವ್ಯವಹಾರಿಕ ಸಂಸ್ಥೆಗಳ ಪಾರುಪತ್ಯೆಯಲ್ಲಿ ಕಂಪನಿ ತಲೆಹಾಕಲಿಲ್ಲ. ಆದರೆ, ರಾಜಸ್ವ ಮತ್ತು ನ್ಯಾಯಿಕ ಆಡಳಿತದ ಮೇಲ್ವಿಚಾರಣೆ ನೋಡುವುದಕ್ಕೆ ಹೆಚ್ಚಿನ ಅಧಿಕಾರವನ್ನು ಕೊಟ್ಟು ಕೆಲವು ಐರೋಪ್ಯ ಅಧಿಕಾರಿಗಳನ್ನು ನೇಮಕ ಮಾಡಿದರು. ಈ ಕಾಲದಲ್ಲೇ ಇಸ್ಲಾಮಿ ಅಪರಾಧಿಕ ಕಾನೂನು ಎಲ್ಲಾ ನ್ಯಾಯಾಲಯಗಳಲ್ಲೂ ಜಾರಿಯಲ್ಲಿತ್ತು. ಅಪರಾಧಿಕ ನ್ಯಾಯಾಲಯಗಳಲ್ಲಿ ನವಾಬನ, ಅವನ ಸಹಾಯಕನ ಹಾಗೂ ಫೌಜ್‌ದಾರನ ನ್ಯಾಯಾಲಯಗಳು ಉನ್ನತ ನ್ಯಾಯಾಲಯಗಳಾಗಿದ್ದವು. ಪ್ರಾಂತಗಳಲ್ಲಿ ಜಮೀನ್‌ದಾರರು ಮತ್ತು ರೈತರುಗಳು ಸಾರ್ವಜನಿಕ ಸುರಕ್ಷತೆಯ ಜವಾಬ್ದಾರಿ ಹೊತ್ತಿದ್ದರು. ತಮ್ಮ ತಮ್ಮ ಜಿಲ್ಲೆಗಳಲ್ಲಿ ಅವರಿಗೆ ವ್ಯವಹಾರಿಕ ಹಾಗೂ ಅಪರಾಧಿಕ ಅಧಿಕಾರ ವ್ಯಾಪ್ತಿ ಇದ್ದಿತು. ಅವರದೇ ಪರಮಾಧಿಕಾರ. ಆದರೆ, ಗಂಭೀರ ಪ್ರಕರಣಗಳನ್ನು ಅವರು ನಾಜಿಂನಿಗೆ ವರದಿಮಾಡಬೇಕಾಗಿದ್ದಿತು.

## ವಾರನ್ ಹೇಸ್ಟಿಂಗ್ಸ್ ಪುನರ್ ವ್ಯವಸ್ಥೆಗೊಳಿಸಿದ ಬಂಗಾಳದ ನ್ಯಾಯಿಕ ಸಂಸ್ಥೆ

ಕ್ರಿ.ಶ. 1771ರಲ್ಲಿ ಕಂಪನಿಯ ನಿರ್ದೇಶಕ ಮಂಡಳಿಯು ದಿವಾನನ ಅಧಿಕಾರವನ್ನು ವಹಿಸಿಕೊಂಡು ರಾಜಸ್ವ ಆಡಳಿತ ಮತ್ತು ನ್ಯಾಯ ಪರಿಪಾಲನೆಯನ್ನು ಕಂಪನಿಯ ಅಧಿಕಾರಿಗಳ ಹತೋಟಿಗೆ ಕೂಡಲೇ ತರತಕ್ಕದ್ದೆಂದು ಠರಾವು ಮಾಡಿತು. ಮುಂದಿನ ವರ್ಷದಲ್ಲಿ, ಬಂಗಾಳದ ಗವರ್ನರ್ ಆಗಿ ನೇಮಕಗೊಂಡ ವಾರನ್ ಹೇಸ್ಟಿಂಗ್ಸನು, ನ್ಯಾಯಿಕ ಮತ್ತು ರಾಜಸ್ವ ಸಂಸ್ಥೆಗಳನ್ನು ಪುನರ್ ವ್ಯವಸ್ಥೆಗೊಳಿಸಲು ಒಂದು ವರದಿಯನ್ನು ಸಿದ್ಧಪಡಿಸಿದ. ಸರ್ಕಾರ ಈ ವರದಿಯನ್ನು ಕೂಡಲೇ ಅಳವಡಿಸಿಕೊಂಡಿತು. ಈ ಯೋಜನೆಯನ್ವಯ ಪ್ರತಿ ಗ್ರಾಮಾಂತರ ಜಿಲ್ಲೆಯಲ್ಲಿ ದಿವಾನಿ ಅದಾಲತ್‌ಗಳನ್ನು ಸ್ಥಾಪಿಸಲಾಯಿತು. ಈ ಅದಾಲತ್‌ಗಳು ಐರೋಪ್ಯ ರೆವೆನ್ಯೂ ಕಲೆಕ್ಟರುಗಳ ಉಸ್ತುವಾರಿಯಲ್ಲಿದ್ದವು. ಇದಲ್ಲದೆ ಕಲ್ಕತ್ತದಲ್ಲಿ ಒಂದು ವ್ಯವಹಾರ ಮೇಲ್ಮನವಿ ನ್ಯಾಯಾಲಯವನ್ನು ಸ್ಥಾಪಿಸಲಾಯಿತು. ಈ ಮೇಲ್ಮನವಿ ನ್ಯಾಯಾಲಯವನ್ನು ಸದ್ದರ್ ದಿವಾನಿ ಅದಾಲತ್ ಎಂದು ಕರೆಯಲಾಗಿದ್ದು, ಅಧ್ಯಕ್ಷ ಸ್ಥಾನದಲ್ಲಿ ಗವರ್ನರನು ಮತ್ತು ಅವನ ಸಂಗಡ ಅವನ ನ್ಯಾಯ ಮಂಡಲಿಯ ಸದಸ್ಯರುಗಳು ಕೂರುತ್ತಿದ್ದರು.

ಹಳೆಯ ವ್ಯವಸ್ಥೆಯಲ್ಲಿ ನಾವು ಆಗಲೇ ನೋಡಿದಂತೆ, ಜಮೀನ್‌ದಾರರು ಮತ್ತು

ರೈತರುಗಳು ತಮ್ಮ ತಮ್ಮ ಎಸ್ಟೇಟುಗಳಲ್ಲಿ ಶಾಂತಿಯನ್ನು ಕಾಪಾಡಿಕೊಂಡು ಬರಲು ಜವಾಬ್ದಾರರಾಗಿದ್ದರು. ಇದಲ್ಲದೆ ದರೋಡೆ ಪ್ರಕರಣಗಳಲ್ಲಿ ತಪ್ಪಿತಸ್ಥರನ್ನು ಹಿಡಿದು ಅವರನ್ನೂ ಮತ್ತು ಅವರು ದರೋಡೆ ಮಾಡಿದ ಆಸ್ತಿಯನ್ನು ಗವರ್ನರನ ಮುಂದೆ ಹಾಜರು ಪಡಿಸಬೇಕಾಗಿತ್ತು. ಹೇಸ್ಟಿಂಗ್ಸನು ಜಮೀನ್‌ದಾರರ ಈ ಅಧಿಕಾರದ ಹೊಣೆಯನ್ನು ತಾನು ಸ್ಥಾಪಿಸಿದ ಫೌಜ್‌ದಾರಿ ನ್ಯಾಯಾಲಯಗಳಿಗೆ (ಅಪರಾಧಿಕ ನ್ಯಾಯಾಲಯಗಳು) ವರ್ಗಾಯಿಸಿದ ಒಬ್ಬ ಖಾಜಿ ಮತ್ತು ಒಬ್ಬ ಮಫ್ತಿ ಇವರಿಗೆ ಸಹಾಯಕರಾಗಿ ಇಬ್ಬರು ಮೌಲ್ವಿಗಳನ್ನು ಕಾನೂನನ್ನು ವ್ಯಾಖ್ಯಾನಿಸುವುದಕ್ಕೆ ನೇಮಕಗೊಳಿಸಲಾಯಿತು. ಎಲ್ಲ ಶಿಕ್ಷಾರ್ಹ ಅಪರಾಧಗಳನ್ನು ಇವರು ವಿಚಾರಣೆ ಮಾಡುತ್ತಿದ್ದರು. ಆದಾಗ್ಯೂ ಇಂಗ್ಲಿಷ್ ರೆವೆನ್ಯೂ ಕಲೆಕ್ಟರುಗಳನ್ನು ಈ ನ್ಯಾಯಾಲಯಗಳ ನಡವಳಿಕೆಗಳನ್ನು ಉಸ್ತುವಾರಿ ಮಾಡಲು ನಿರ್ದೇಶಿಸಲಾಗಿತ್ತು; ಬೇಕಾದ ಸಾಕ್ಷಿಗಳನ್ನು ಬರಮಾಡಿಕೊಂಡು ಅವರ ಸಾಕ್ಷ್ಯವನ್ನು ಪಡೆದುಕೊಳ್ಳುವುದು; ಅವರ ಸಾಕ್ಷ್ಯವನ್ನು ಸೂಕ್ತವಾಗಿ ತುಲನೆಮಾಡುವುದು ಮತ್ತು ತೀರ್ಪುಗಳು ನ್ಯಾಯಯುತವಾಗಿಯೂ ಮತ್ತು ನಿಷ್ಪಕ್ಷಪಾತವಾಗಿಯೂ ಇದೆಯೆ ಎಂಬುದನ್ನೂ ನೋಡುವುದು ಈ ಉಸ್ತುವಾರಿಯ ಉದ್ದೇಶ. ಪ್ರಾಂತೀಯ ಅಪರಾಧ ನ್ಯಾಯಾಲಯದ ತೀರ್ಪುಗಳಿಂದ ಮೇಲ್ಮನವಿ ಮಾಡುವುದಕ್ಕೆ ಅವಕಾಶವಿತ್ತು. ಈ ಮೇಲ್ಮನವಿಯನ್ನು ಮುರ್ಷಿದಾಬಾದ್‌ನಲ್ಲಿ ಸ್ಥಾಪಿಸಿದ್ದ ಸದ್ದರ್ ನಿಜಾಮತ್ ಅದಾಲತ್ ನ್ಯಾಯಾಲಯಕ್ಕೆ ಸಲ್ಲಿಸಬಹುದಾಗಿತ್ತು. ಈ ಮೇಲ್ಮನವಿ ನ್ಯಾಯಾಲಯದಲ್ಲಿ ನವಾಬನಿಂದ ನಿಯುಕ್ತಗೊಳಿಸಿದ್ದ ಅಧಿಕಾರಿಯೊಬ್ಬ ಅಧ್ಯಕ್ಷತೆ ವಹಿಸುತ್ತಿದ್ದ. ಈ ಪ್ರಾಂತೀಯ ನ್ಯಾಯಾಲಯಗಳ ಅಧಿಕಾರವನ್ನು ಮತ್ತು ಅಧಿಕಾರ ವ್ಯಾಪ್ತಿಯನ್ನು ಮೊಘಲ್ ಸರ್ಕಾರದಿಂದ ಪಡೆದುಕೊಳ್ಳಲಾಗಿತ್ತು. ಆದರೆ ಇಲ್ಲಿ ಮೊಘಲ್ ಸರ್ಕಾರವೆಂದರೆ, ಅದರ ಹೆಸರಿನಲ್ಲಿ ವ್ಯವಹರಿಸುತ್ತಿದ್ದ ಕಂಪನಿ. ಈ ಕಂಪನಿಯೇ ದಿವಾನನ ಪಾತ್ರವನ್ನು ಮಾಡುತ್ತಿತ್ತು. ಹೀಗಾಗಿ ಈ ನ್ಯಾಯಾಲಯಗಳನ್ನು ಕಂಪನಿ ನ್ಯಾಯಾಲಯಗಳೆಂದು ಕರೆಯಲಾಗುತ್ತಿತ್ತು. ಇವುಗಳು, ಇಂಗ್ಲೀಷ್ ರಾಜರುಗಳು ದಯಪಾಲಿಸಿದ ಸನ್ನದುಗಳ ಕೆಳಗೆ ಸ್ಥಾಪಿತವಾದ ಪ್ರಭುತ್ವ ನ್ಯಾಯಾಲಯಗಳಿಂದ ಭಿನ್ನವಾಗಿದ್ದವು.

## ಕಲ್ಕತ್ತಾದ ಫೋರ್ಟ್ ವಿಲಿಯಮ್‌ನಲ್ಲಿ ಸ್ಥಾಪಿತವಾದ ಸರ್ವೋನ್ನತ ನ್ಯಾಯಾಲಯ

ಮೇಯರನ ನ್ಯಾಯಾಲಯಗಳು ಹಾಗೂ ಕಲ್ಕತ್ತದಲ್ಲಿದ್ದ ಇನ್ನಿತರ ಪ್ರಭುತ್ವ ನ್ಯಾಯಾಲಯಗಳ ಅಧಿಕಾರವ್ಯಾಪ್ತಿ ದೇಶದ ಒಳಭಾಗದಲ್ಲಿ ವಾಸವಿದ್ದ ಐರೋಪ್ಯರುಗಳನ್ನು ಒಳಗೊಂಡಿರಲಿಲ್ಲ. ಅವುಗಳ ಅಧಿಕಾರ ಕಲ್ಕತ್ತ ಮತ್ತು ಅದನ್ನು ಅವಲಂಬಿಸಿದ್ದ ಕಾರ್ಖಾನೆಗಳಿಗೆ ಮಾತ್ರ ಸೀಮಿತವಾಗಿತ್ತು. ಬ್ರಿಟಿಷ್ ಪಾರ್ಲಿಮೆಂಟ್ ಕ್ರಿ.ಶ 1773ರಲ್ಲಿ ಜಾರಿಗೆ ತಂದ ರೆಗ್ಯುಲೇಟಿಂಗ್ ಆಕ್ಟ್‌ನ ಪ್ರಕಾರ ಕಲ್ಕತ್ತದ ಫೋರ್ಟ್ ವಿಲಿಯಮ್‌ನಲ್ಲಿ ಒಂದು ಸರ್ವೋನ್ನತ ನ್ಯಾಯಾಲಯವನ್ನು ಸ್ಥಾಪಿಸಲಾಯಿತು.

ಈ ನ್ಯಾಯಾಲಯದಲ್ಲಿ ಒಬ್ಬರು ಮುಖ್ಯ ನ್ಯಾಯಾಧೀಶರು ಹಾಗೂ ಮೂವರು

ಇತರ ನ್ಯಾಯಾಧೀಶರುಗಳು ಇದ್ದರು. ಇತರ ನ್ಯಾಯಾಧೀಶರುಗಳು ಬ್ಯಾರಿಸ್ಟರುಗಳಾಗಿದ್ದು ಕಡೆಯ ಪಕ್ಷ ಐದು ವರ್ಷಗಳ ಅನುಭವ ಇರಬೇಕಾಗಿತ್ತು. ಇವರುಗಳನ್ನು ಪ್ರಭುತ್ವ ನೇಮಕ ಮಾಡುತ್ತಿತ್ತು. ಅವರಿಗೆ, ವ್ಯವಹಾರಿಕ, ಅಪರಾಧಿಕ, ಮತ್ತು ಕ್ರೈಸ್ತ ಚರ್ಚಿನ ಪ್ರಕರಣಗಳಲ್ಲಿ ಸಂಪೂರ್ಣ ಅಧಿಕಾರವ್ಯಾಪ್ತಿ ಇತ್ತು. ಎಲ್ಲ ಬ್ರಿಟಿಷ್ ಪ್ರಜೆಗಳಿಗೆ ಹಾಗೂ ಎಲ್ಲೇ ಇದ್ದರೂ ಕಂಪನಿಯ ಎಲ್ಲ ನೌಕರರುಗಳಿಗೆ ಬ್ರಿಟಿಷ್ ಕಾನೂನಿನನ್ವಯ ನ್ಯಾಯ ತೀರ್ಮಾನ ಮಾಡಲು ಈ ನ್ಯಾಯಾಲಯಕ್ಕೆ ಅಧಿಕಾರವಿತ್ತು. ಈ ನ್ಯಾಯಾಲಯದ ತೀರ್ಮಾನದ ಮೇಲೆ, ಕೆಲವೊಂದು ನಿರ್ಬಂಧಗಳಿಗೊಳಪಟ್ಟು, ಪ್ರೀವಿ ಕೌನ್ಸಿಲ್‌ಗೆ ಮೇಲ್ಮನವಿ ಮಾಡಬಹುದಾಗಿತ್ತು. ಕಲ್ಕತ್ತದ ಮೇಯರ್‌ನ ನ್ಯಾಯಾಲಯವನ್ನು ರದ್ದುಪಡಿಸಲಾಯಿತು. ಆದರೆ 'ಬೇಡಿಕೆಯ ನ್ಯಾಯಾಲಯ' (ಕೋರ್ಟ್ ಆಫ್ ರಿಕ್ವೆಸ್ಟ್) ಅಸ್ತಿತ್ವದಲ್ಲಿ ಮುಂದುವರೆಯಿತು. ಈ ಸರ್ವೋನ್ನತ ನ್ಯಾಯಾಲಯ ಇಂಗ್ಲಿಷ್ ಕಾಯಿದೆಯನ್ನೂ ಮತ್ತು ಇಂಗ್ಲಿಷ್ ಪ್ರಕ್ರಿಯೆಗಳನ್ನೂ ಭಾರತದ ಸ್ಥಿತಿಗತಿಗಳನ್ನು ಗಣನೆಗೆ ತಂದುಕೊಳ್ಳದೆ, ಅನ್ವಯಿಸಲು ಆರಂಭಿಸಿತು. ಅದು ನವಾಬನ ಸರ್ಕಾರವನ್ನಾಗಲೀ, ಅಥವಾ ಅವನ ಅಧಿಕೃತ ಪ್ರತಿನಿಧಿಯ ಅಧಿಕಾರವನ್ನಾಗಲೀ ಅಥವಾ ಪ್ರಾಂತೀಯ ನ್ಯಾಯಾಲಯಗಳ ವಿಧಾಯಕ ಶಕ್ತಿಯನ್ನಾಗಲೀ ಮಾನ್ಯಮಾಡಲು ನಿರಾಕರಿಸಿತು. ಪ್ರಭುತ್ವದಿಂದ ಅಸ್ತಿತ್ವಪಡೆದ ಸರ್ವೋನ್ನತ ನ್ಯಾಯಾಲಯ ಮತ್ತು ಕಂಪನಿಯಿಂದ ಸ್ಥಾಪಿಸಲ್ಪಟ್ಟ ಕೌನ್ಸಿಲ್ ಇವುಗಳ ನಡುವಿನ ಸೀಮಾರೇಖೆಯು ಅಸ್ಪಷ್ಟವಾಗಿಯೇ ಉಳಿಯಿತು. ಈ ಅಸ್ಪಷ್ಟತೆಯನ್ನು ನಿವಾರಿಸಲು, ಕ್ರಿ.ಶ. 1781ರಲ್ಲಿ ಒಂದು ತಿದ್ದುಪಡಿ ಮಸೂದೆಯನ್ನು ಅಂಗೀಕಾರ ಮಾಡಲಾಯಿತು. ಈ ಮಸೂದೆ ಉನ್ನತ ನ್ಯಾಯಾಲಯದ ಅಧಿಕಾರವನ್ನು ಮತ್ತು ಅಧಿಕಾರ ವ್ಯಾಪ್ತಿಯನ್ನು ಕೆಳಗಿನಂತೆ ವಿಶದೀಕರಿಸಿತು:

i. ರಾಜಸ್ವಕ್ಕೆ ಸಂಬಂಧಿಸಿದ ಹಾಗೆ ಅಥವಾ ದೇಶರೂಢಿಗನುಗುಣವಾಗಿ, ಇಲ್ಲವೇ ಗವರ್ನರ್ ಜನರಲ್‌ನ ನ್ಯಾಯಮಂಡಲಿ ವಿಧಿಸಿದ ನಿಬಂಧನೆಗಳಿಗನುಸಾರವಾಗಿ ಮಾಡಿದ ರಾಜಸ್ವ ವಸೂಲಿ ಕಾರ್ಯಕ್ಕೆ ಸಂಬಂಧಿಸಿದ ವಿಚಾರಗಳಲ್ಲಿ ಸರ್ವೋನ್ನತ ನ್ಯಾಯಾಲಯಕ್ಕೆ ಅಧಿಕಾರವ್ಯಾಪ್ತಿಯಿಲ್ಲ.

ii. ಬಂಗಾಳದ ಗವರ್ನರ್ ಜನರಲ್ ಆಗಲೀ, ಅಥವಾ ಅವನ ನ್ಯಾಯಮಂಡಲಿಯ ಸದಸ್ಯರೇ ಆಗಲೀ ತಮ್ಮ ಸಾರ್ವಜನಿಕ ಸ್ಥಾನಬಲದಿಂದ ಯಾವುದೇ ತೀರ್ಮಾನಕೊಟ್ಟಿರಲಿ, ಆದೇಶ ಹೊರಡಿಸಿರಲಿ, ಅಥವಾ ಇನ್ನಾವುದನ್ನೇ ಮಾಡಿರಲಿ ಅವರು ವೈಯಕ್ತಿಕವಾಗಿಯೇ ಆಗಲೀ ಅಥವಾ ಸಾಮೂಹಿಕವಾಗಿಯೇ ಆಗಲೀ ಸರ್ವೋನ್ನತ ನ್ಯಾಯಾಲಯದ ಅಧಿಕಾರ ವ್ಯಾಪ್ತಿಗೆ ಒಳಪಟ್ಟವರಲ್ಲ.

iii. ಕಲ್ಕತ್ತೆಯ ನಿವಾಸಿಗಳ ವಿರುದ್ಧ ಜರುಗಿಸಲಾದ ಎಲ್ಲ ನ್ಯಾಯಿಕ ಕ್ರಮಗಳ ಹಾಗೂ ದಾವೆಗಳ ಮೇಲಿನ ಅಧಿಕಾರ ವ್ಯಾಪ್ತಿ ಸರ್ವೋನ್ನತ ನ್ಯಾಯಾಲಯಕ್ಕೆ

ಇತ್ತು. ಆದರೆ ವಂಶಾನುಕ್ರಮ ಉತ್ತರಾಧಿಕಾರ, ಉತ್ತರಾಧಿಕಾರ, ಕರಾರು ಇವುಗಳಿಗೆ ಸಂಬಂಧಿಸಿದ ವಿಷಯಗಳನ್ನು ಪಕ್ಷಗಾರರ ವೈಯಕ್ತಿಕ ಕಾನೂನಿನನ್ವಯ ತೀರ್ಮಾನ ಮಾಡಬೇಕು ಅಥವಾ ಪಕ್ಷಗಾರರಿಬ್ಬರಲ್ಲಿ ಒಬ್ಬ ಹಿಂದು ಮತ್ತು ಇನ್ನೊಬ್ಬ ಮಹಮ್ಮದೀಯನಾಗಿದ್ದರೆ ಪ್ರತಿವಾದಿಗೆ ಅನ್ವಯವಾಗುವ ಕಾನೂನಿನಂತೆ ತೀರ್ಮಾನ ಮಾಡಬೇಕು.

iv. ಯಾವುದೇ ನಿಯಮಗಳು ಅಥವಾ ಪ್ರೋಸೆಸ್ ಜಾರಿ ಮಾಡುವ ಕ್ರಮವು ಭಾರತೀಯರ ಮತಧರ್ಮ ಮತ್ತು ನಡವಳಿಕೆಗೆ ಸಾಧ್ಯವಾದಷ್ಟು ಹೊಂದಿಕೊಂಡು ಹೋಗಿರುವ ಹಾಗಿರಬೇಕು.

v. ಯಾವುದೇ ಗ್ರಾಮೀಣ ನ್ಯಾಯಾಲಯದ ಯಾವುದೇ ನ್ಯಾಯಿಕ ಅಧಿಕಾರಿಯ ವಿರುದ್ಧ, ಅವನು ಕೊಟ್ಟ ಯಾವುದೇ ತೀರ್ಮಾನದ ಅಥವಾ ಆದೇಶಗಳ ಸಂಬಂಧ, ಸರ್ವೋನ್ನತ ನ್ಯಾಯಾಲಯದಲ್ಲಿ ಯಾವ ಕ್ರಮವನ್ನೂ ಜರುಗಿಸಲು ಆಗದು.

vi. ಪ್ರಾಂತೀಯ ಮಟ್ಟದಲ್ಲಿ, ಸರ್ವೋನ್ನತ ನ್ಯಾಯಾಲಯದಿಂದ ಸ್ವತಂತ್ರವಾಗಿರುವ ವ್ಯಾವಹಾರಿಕ ಮತ್ತು ಅಪರಾಧಿಕ ನ್ಯಾಯಾಲಯಗಳ ಅಸ್ತಿತ್ವವನ್ನು ಮನ್ನಣೆ ಮಾಡಲಾಗಿದೆ; ಗವರ್ನರ್ ಜನರಲ್ ಮತ್ತು ಅವನ ನ್ಯಾಯಮಂಡಲಿಯ ಮೇಲ್ಮನವಿ ಅಧಿಕಾರವನ್ನು ಮನ್ನಣೆ ಮಾಡುವುದೂ ಅಲ್ಲದೆ ದೃಢಪಡಿಸಲಾಗಿದೆ. ಅಲ್ಲದೆ ಪ್ರಾಂತೀಯ ನ್ಯಾಯಾಲಯಗಳಿಗಾಗಿ ನಿಬಂಧನೆಗಳನ್ನು ರಚಿಸಲು ಸರ್ವೋನ್ನತ ನ್ಯಾಯಾಲಯದಿಂದ ಸ್ವತಂತ್ರವಾಗಿ, ಗವರ್ನರ್ ಜನರಲ್ಲನಿಗೆ ಅಧಿಕಾರ ಕೊಡಲಾಗಿದೆ.

## ಮುಂಬೈ ಮತ್ತು ಮದರಾಸುಗಳಲ್ಲಿನ ನ್ಯಾಯಾಲಯಗಳು

ಕ್ರಿ.ಶ. 1797ರ ವರೆಗೆ ಮದರಾಸ್ (ಈಗಿನ ಚೆನ್ನೈ) ಮತ್ತು ಮುಂಬೈಗಳಲ್ಲಿ ಇಂಗ್ಲೀಷ್ ಸ್ಥಳೀಯ ನ್ಯಾಯಾಲಯಗಳ ಮಾದರಿಯಲ್ಲಿ ಮೇಯರ್‌ನ ನ್ಯಾಯಾಲಯಗಳಿದ್ದವು. ಕ್ರಿ.ಶ. 1797ರಲ್ಲಿ ಇವುಗಳ ಬದಲಾಗಿ ಅಭಿಲೇಖನ ನ್ಯಾಯಾಲಯಗಳನ್ನು ಸ್ಥಾಪಿಸಲಾಯಿತು. ಈ ನ್ಯಾಯಾಲಯಗಳಿಗೂ ಸಹ, ಕ್ರಿ.ಶ. 1781ರ ಮಸೂದೆಯ ಅನುಸಾರವಾಗಿ ಕಲ್ಕತ್ತಾದ ಪೋರ್ಟ್ ವಿಲಿಯಮ್‌ನಲ್ಲಿ ಸ್ಥಾಪಿತವಾದ ಸರ್ವೋನ್ನತ ನ್ಯಾಯಾಲಯಕ್ಕೆ ವಿಧಿಸಿದ್ದ ಇತಿಮಿತಿಗಳೇ ಇದ್ದವು. ಇವುಗಳ ಅಧಿಕಾರವ್ಯಾಪ್ತಿ ಮದರಾಸ್ ಮತ್ತು ಮುಂಬೈ ಸರ್ಕಾರಗಳ ಆಡಳಿತ ಪ್ರದೇಶಗಳು ಹಾಗೂ ಅವುಗಳ ಮಿತ್ರರಾದ ದೇಶೀಯ ರಾಜ್ಯಗಳಲ್ಲಿ ವಾಸಿಸುತ್ತಿದ್ದ ಎಲ್ಲ ಬ್ರಿಟಿಷ್ ಪ್ರಜೆಗಳನ್ನು ಒಳಗೊಂಡಿತ್ತು. ಕ್ರಿ.ಶ. 1753ರ ಸನ್ನದಿನ ಪ್ರಕಾರ ಬೇಡಿಕೆ ನ್ಯಾಯಾಲಯಗಳನ್ನು ಸ್ಥಾಪಿಸಲಾಯಿತು. ಮದರಾಸಿನ ಅಭಿಲೇಖನ ನ್ಯಾಯಾಲಯವನ್ನು ಕ್ರಿ.ಶ. 1801ರಲ್ಲಿ ಮತ್ತು ಮುಂಬೈನ ಅಭಿಲೇಖನ ನ್ಯಾಯಾಲಯವನ್ನು ಕ್ರಿ.ಶ. 1823ರಲ್ಲಿ ಸರ್ವೋನ್ನತ ನ್ಯಾಯಾಲಯಗಳಿಗೆ ಬದಲಾಯಿಸಲಾಯಿತು. ಕ್ರಿ.ಶ. 1850ರಲ್ಲಿ ಬೇಡಿಕೆ

ನ್ಯಾಯಾಲಯಗಳನ್ನು ರದ್ದುಮಾಡಿ ಲಘುವ್ಯವಹಾರ ನ್ಯಾಯಾಲಯಗಳನ್ನು ಸ್ಥಾಪಿಸಲಾಯಿತು.

## ಪ್ರಾಂತೀಯ ವ್ಯವಹಾರ ನ್ಯಾಯಾಲಯ

ಪ್ರಾಂತೀಯ ವ್ಯವಹಾರ ನ್ಯಾಯಾಲಯಗಳಿಂದ ಬಂದ ಮೇಲ್ಮನವಿಗಳನ್ನು ವಿಚಾರಣೆ ಮಾಡುತ್ತಿದ್ದ ಕಲ್ಕತ್ತದಲ್ಲಿನ ಸದ್ದರ್ ದಿವಾನಿ ಅದಾಲತ್, ಮೊದಲಿಗೆ ಗವರ್ನರ್ ಜನರಲ್ ಮತ್ತು ಅವನ ನ್ಯಾಯ ಮಂಡಲಿಯನ್ನು ಒಳಗೊಂಡಿತ್ತು. ಕ್ರಿ.ಶ. 1801ರ ನಿಬಂಧನೆಯ ಪ್ರಕಾರ, ಒಡಂಬಡಿಕೆಯ ಅಧಿಕಾರ ವರ್ಗಕ್ಕೆ ಸೇರಿದ ಅಧಿಕಾರಿಗಳ ಗುಂಪಿನಿಂದ ಆಯ್ದ ಮೂವರು ನ್ಯಾಯಾಧೀಶರುಗಳನ್ನು ಒಳಗೊಂಡಿತ್ತು. ಕ್ರಿ.ಶ. 1811ರಲ್ಲಿ ಈ ಅದಾಲತ್ ಒಬ್ಬ ಮುಖ್ಯ ನ್ಯಾಯಾಧೀಶನನ್ನೂ ಮತ್ತು ಗವರ್ನರ್ ಜನರಲ್ಲನು ಅವಶ್ಯಕವೆಂದು ನಿರ್ಧರಿಸಿದಷ್ಟು ಸಂಖ್ಯೆಯ ಕಿರಿಯ ನ್ಯಾಯಾಧೀಶರುಗಳನ್ನು ಒಳಗೊಂಡಿತ್ತು. ಈ ನಿಬಂಧನೆಗಳು ರಾಜ್ಯದ ನ್ಯಾಯಾಂಗವನ್ನು ಕಾರ್ಯಾಂಗ ಮತ್ತು ಶಾಸಕಾಂಗದಿಂದ ಬೇರ್ಪಡಿಸಿತು. ಅದೇ ಕಾಲಕ್ಕೆ ಮೊದಲನೆಯದಾಗಿ ವ್ಯವಹಾರ ವ್ಯಾಜ್ಯಗಳ ವಿಚಾರಣೆಯನ್ನು ಮಾಡಲು ಜಿಲ್ಲಾ ಮತ್ತು ನಗರ ನ್ಯಾಯಾಲಯಗಳನ್ನು ಮತ್ತು ಈ ನ್ಯಾಯಾಲಯಗಳಿಂದ ಮೇಲ್ಮನವಿಗಳನ್ನು ವಿಚಾರಣೆ ಮಾಡಲು ಆರು ಪ್ರಾಂತೀಯ ನ್ಯಾಯಾಲಯಗಳನ್ನು ಸ್ಥಾಪಿಸಲಾಯಿತು; ಇವುಗಳ ಅಧಿಕಾರ ವ್ಯಾಪ್ತಿಯನ್ನು ಸ್ಫುಟಗೊಳಿಸಲಾಯಿತು; ನಿಯಮಗಳು ಇಲ್ಲದೇ ಇರುವ ಕಡೆ, ನ್ಯಾಯಾಧೀಶರುಗಳನ್ನು ನ್ಯಾಯ, ಧರ್ಮ ಮತ್ತು ಆತ್ಮ ಸಾಕ್ಷಿಗನುಸಾರವಾಗಿ ಕೆಲಸಮಾಡಲು ನಿರ್ದೇಶಿಸಲಾಯಿತು. ಈ ಕಾಲದಲ್ಲಿ ಪ್ರಾಂತಗಳಲ್ಲಿ ಐದು ವರ್ಗಗಳ ವ್ಯವಹಾರ ನ್ಯಾಯಾಲಯಗಳಿದ್ದವು:

i. ಕ್ರಿ.ಶ. 1793ರ ನಿಬಂಧನೆಯೊಂದರ ಪ್ರಕಾರ ಅಧಿಕಾರ ಹೊಂದಿದ್ದ ಸದ್ದರ್ ಅಮೀನರುಗಳು ಮತ್ತು ಮುನ್‌ಸೀಫರುಗಳೆಂದು ಕರೆಯಲ್ಪಡುತ್ತಿದ್ದ ಕಮಿಷನರುಗಳ ನ್ಯಾಯಾಲಯ. ಇದು ಅತ್ಯಂತ ಕೆಳ ದರ್ಜೆಯ ನ್ಯಾಯಾಲಯವಾಗಿದ್ದು ಐವತ್ತು ರೂಗಳ ಒಳಗಿನ ವ್ಯವಹಾರ ದಾವೆಗಳನ್ನು ತೀರ್ಮಾನ ಮಾಡುತ್ತಿತ್ತು.

ii. ರಿಜಿಸ್ಟರ್ ನ್ಯಾಯಾಲಯಗಳು: ಇವುಗಳು ಇನ್ನೂರು ರೂಗಳನ್ನು ಮೀರದ ವ್ಯಾಜ್ಯಗಳನ್ನು, ನ್ಯಾಯಾಧೀಶರು ಅಧಿಕಾರ ಪ್ರದಾನ ಮಾಡಿದ ಸಂದರ್ಭದಲ್ಲಿ ತೀರ್ಮಾನ ಮಾಡಬಹುದಾಗಿತ್ತು. ಆದರೆ ಈ ನ್ಯಾಯಾಲಯಗಳ ಡಿಕ್ರಿಗಳು ನ್ಯಾಯಾಧೀಶರಿಂದ ಪುನರ್‌ವಿಮರ್ಶೆಮಾಡಲ್ಪಟ್ಟು ಎದುರು ಸಹಿ ಹಾಕಿದ ನಂತರವೇ ಸಿಂಧುವಾಗುತ್ತಿತ್ತು.

iii. ದಿವಾನಿ ಅದಾಲತ್‌ಗಳು ಅಥವಾ ನಗರ ಮತ್ತು ಜಿಲ್ಲಾ ನ್ಯಾಯಾಲಯಗಳು.

iv. ಮೂರನೆಯ ವರ್ಗದ ನ್ಯಾಯಾಲಯಗಳಿಂದ ಬಂದ ಮೇಲ್ಮನವಿಗಳನ್ನು ವಿಚಾರಣೆ ಮಾಡುತ್ತಿದ್ದ ಪ್ರಾಂತೀಯ ನ್ಯಾಯಾಲಯಗಳು.

v. ಸದ್ದರ್ ದಿವಾನ್ ಅದಾಲತ್: ಒಂದು ನೂರು ರೂಪಾಯಿಗಳಿಗೆ ಮೇಲ್ಪಟ್ಟ

ಯಾವುದೇ ದಾವೆಯಲ್ಲಿ ಕೊಟ್ಟ ಕೆಳಗಿನ ನ್ಯಾಯಾಲಯದ ತೀರ್ಪಿನಿಂದ ಬಂದ ಮೇಲ್ಮನವಿಗಳನ್ನು ವಿಚಾರಣೆ ಮಾಡುವ ಅಧಿಕಾರ ವ್ಯಾಪ್ತಿ ಮತ್ತು ಆ ನ್ಯಾಯಾಲಯಗಳ ಮೇಲ್‌ವಿಚಾರಣೆ ಮಾಡುವ ಸರ್ವತ್ರ ಅಧಿಕಾರ.

ಕ್ರಿ.ಶ. 1831ರ ನಿಬಂಧನೆ 5ರ ಕೆಳಗೆ ಹಲವು ಮುಖ್ಯ ಬದಲಾವಣೆಗಳನ್ನು ಮಾಡಲಾಯಿತು. ರಿಜಿಸ್ಟರ್ ನ್ಯಾಯಾಲಯಗಳನ್ನು ಮತ್ತು ಪ್ರಾಂತೀಯ ಮೇಲ್ಮನವಿ ನ್ಯಾಯಾಲಯಗಳನ್ನು ರದ್ದುಪಡಿಸಲಾಯಿತು. ಮುನ್‌ಸೀಫ್ ನ್ಯಾಯಾಲಯಗಳು ವಿಚಾರಣೆ ಮಾಡಬಹುದಾದ ದಾವೆಯ ಮೌಲ್ಯವನ್ನು ಮುನ್ನೂರು ರೂಪಾಯಿಗಳಿಗೆ ಹೆಚ್ಚಿಸಲಾಯಿತು. ಐದು ಸಾವಿರ ರೂಪಾಯಿಗಳವರೆಗಿನ ಮೌಲ್ಯದ ದಾವೆಗಳನ್ನು ವಿಚಾರಣೆ ಮಾಡುವ ಅಧಿಕಾರವನ್ನು ಸದ್ದರ್ ಅಮೀನರುಗಳ ನ್ಯಾಯಾಲಯಕ್ಕೆ ನ್ಯಾಯಾಧೀಶರುಗಳು ಕೊಡಬಹುದಾಗಿತ್ತು. ಐದುಸಾವಿರ ರೂಪಾಯಿಗಳಿಗಿಂತ ಹೆಚ್ಚಿನ ಮೌಲ್ಯದ ಎಲ್ಲ ದಾವೆಗಳನ್ನು ತೀರ್ಮಾನ ಮಾಡುವ ಅಧಿಕಾರ ವ್ಯಾಪ್ತಿಯನ್ನು ನ್ಯಾಯಾದೀಶರುಗಳಿಗೆ ಕೊಡಲಾಯಿತು ಮತ್ತು ಈ ಪ್ರಕರಣಗಳಿಂದ ಉದ್ಭವಿಸಿದ ಮೇಲ್ಮನವಿಗಳನ್ನು ನೇರವಾಗಿ ಸದ್ದರ್ ದಿವಾನಿ ಅದಾಲತ್‌ಗೆ ಸಲ್ಲಿಸಬಹುದಾಗಿತ್ತು.

ಕ್ರಿ.ಶ. 1802ರಲ್ಲಿ ಮದರಾಸ್ ಪ್ರೆಸಿಡೆನ್ಸಿಯಲ್ಲಿ, ಕಾರ್ನ್‌ವಾಲೀಸನು ಬಂಗಾಳದಲ್ಲಿ ಸ್ಥಾಪಿಸಿದ ವ್ಯವಹಾರ ನ್ಯಾಯಾಲಯಗಳ ವ್ಯವಸ್ಥೆಯನ್ನೇ ಅಳವಡಿಸಿಕೊಳ್ಳಲಾಯಿತು. ರಾಜಸ್ವ ನ್ಯಾಯಾಲಯಗಳು ಮತ್ತು ವ್ಯವಹಾರ ನ್ಯಾಯಾಲಯಗಳನ್ನು ಪ್ರತ್ಯೇಕಿಸಿ ಇಡಲಾಗಿತ್ತು. ಬಂಗಾಲದಲ್ಲಿದ್ದ ಹಾಗೆಯೇ ಮದರಾಸಿನಲ್ಲೂ ಸಹ ನ್ಯಾಯಾಂಗ, ರಿಜಿಸ್ಟರ್ ನ್ಯಾಯಾಲಯಗಳು, ದಿವಾನಿ ಅದಾಲತ್‌ಗಳು ಪ್ರಾಂತೀಯ ಮೇಲ್ಮನವಿ ನ್ಯಾಯಾಲಯಗಳು, ಗೌರ್ನರನು ಮತ್ತು ಅವನ ನ್ಯಾಯಸಭೆಯನ್ನು ಒಳಗೊಂಡ ಸದ್ದರ್ ನ್ಯಾಯಾಲಯಗಳು ಇವುಗಳಿಂದ ಕೂಡಿತ್ತು. ರೂ. 45,000ಕ್ಕೂ ಹೆಚ್ಚಿನ ಮೌಲ್ಯದ ದಾವೆಯಾಗಿದರೆ, ಗವರ್ನರ್ ಜನರಲ್ ಮತ್ತು ಅವನ ನ್ಯಾಯಸಭೆಗೆ ಇನ್ನೂ ಒಂದು ಮೇಲ್ಮನವಿ ಇತ್ತು. ಕ್ರಿ.ಶ. 1807ರ ನಿಬಂಧನೆಯ ಪ್ರಕಾರ, ಗವರ್ನರನು ನ್ಯಾಯಾಧೀಶನಾಗಿ ಕೆಲಸ ಮಾಡುವುದು ನಿಂತು ಹೋಯಿತು. ಕ್ರಿ.ಶ. 1826ರಲ್ಲಿ ಗ್ರಾಮಗಳ ಮುಖ್ಯಸ್ಥರನ್ನು ಮುನ್‌ಸೀಫರುಗಳಾಗಿ ನೇಮಿಸಲಾಯಿತು. ಹತ್ತು ರೂಪಾಯಿಗಳನ್ನು ಮೀರದ ದಾವೆಯನ್ನು ಈ ಮುನ್‌ಸೀಫರುಗಳು ವಿಚಾರಣೆ ಮಾಡಬಹುದಾಗಿತ್ತು. ತಮ್ಮ ತಮ್ಮ ಗ್ರಾಮದ ಅಧಿಕಾರ ವ್ಯಾಪ್ತಿಯೊಳಗೆ ಗ್ರಾಮ ಪಂಚಾಯಿತಿಗಳು ಯಾವುದೇ ಮೌಲ್ಯದ ದಾವೆಯನ್ನು ವಿಚಾರಣೆ ಮಾಡಬಹುದಾಗಿತ್ತು. ಕ್ರಿ.ಶ. 1843ರಲ್ಲಿ ಪ್ರಾಂತೀಯ ಮೇಲ್ಮನವಿ ನ್ಯಾಯಾಲಯಗಳನ್ನು ರದ್ದುಪಡಿಸಿ, ಜಿಲ್ಲಾ ನ್ಯಾಯಾಲಯಗಳನ್ನು ಸ್ಥಾಪಿಸಲಾಯಿತು. ಕ್ರಿ.ಶ. 1793ರ ಬಂಗಾಳದ ನಿಬಂಧನೆಯ ಪ್ರಕಾರವೇ, ಬೊಂಬಾಯಿಯಲ್ಲೂ ಸಹ ವ್ಯವಹಾರ ನ್ಯಾಯಾಲಯಗಳನ್ನು ಸ್ಥಾಪಿಸಲಾಯಿತು. ಕ್ರಿ.ಶ. 1845ರಲ್ಲಿ ಜಂಟೀ ಜಿಲ್ಲಾ ನ್ಯಾಯಾಧೀಶರುಗಳ ನೇಮಕವನ್ನು ಅಧಿಕೃತ ಮಾಡಲಾಯಿತು.

## ಪ್ರಾಂತೀಯ ಅಪರಾಧಿಕ ನ್ಯಾಯಾಲಯಗಳು

ವಾರನ್ ಹೇಸ್ಟಿಂಗ್ಸನ ಯೋಜನೆಯಂತೆ, ಅಪರಾಧಿಕ ನ್ಯಾಯ ಪರಿಪಾಲನೆಗಾಗಿ ಮಹಮ್ಮದೀಯರ ಕಾನೂನನ್ನು ಮತ್ತು ನವಾಬನ ಸರ್ವತ್ರ ಹತೋಟಿಯಲ್ಲಿದ್ದ ನ್ಯಾಯಾಧಿಕರಣಗಳನ್ನು ಉಳಿಸಿಕೊಳ್ಳಲಾಯಿತು; ಆದರೆ ಇವುಗಳು ಕಂಪನಿ ಸರ್ಕಾರದ ಮೇಲ್ವಿಚಾರಣೆಗೆ ಒಳಪಟ್ಟಿದ್ದವು. ಈ ವ್ಯವಸ್ಥೆ ತೃಪ್ತಿಕರವಾಗಿ ಕೆಲಸ ಮಾಡಲಿಲ್ಲ. ಅಪರಾಧಿಗಳನ್ನು ವಿಚಾರಣೆಗೊಳಪಡಿಸುವುದರಲ್ಲಿ ಉಂಟಾದ ವಿಳಂಬದ ಕಾರಣ, ಅಪರಾಧಗಳು ಹೆಚ್ಚಾದವು. ಅಪರಾಧಿಕ ನ್ಯಾಯಾಲಯಗಳ ಅಂಗರಚನೆಯೂ ದೋಷಪೂರಿತವಾಗಿತ್ತು. ಕ್ರಿ.ಶ. 1790ಮತ್ತು 1793ರಲ್ಲಿ ಮಾಡಿದ ನಿಬಂಧನೆಗಳಿಗನುಸಾರವಾಗಿ, ಲಾರ್ಡ್ ಕಾರ್ನ್‌ವಾಲೀಸನು ನ್ಯಾಯಿಕ ವ್ಯವಸ್ಥೆಗೆ ಸಮಗ್ರವಾದ ಹೊಸ ಸ್ವರೂಪವನ್ನು ಕೊಟ್ಟನು. ಇಂಗ್ಲಿಷ್ ನ್ಯಾಯಾಧೀಶರುಗಳು, ಖಾಜಿಗಳು ಮತ್ತು ಮಫ್ತಿಗಳನ್ನು ಒಳಗೊಂಡ ಸಂಚಾರೀ ನ್ಯಾಯಾಲಯಗಳನ್ನು ಹುಟ್ಟುಹಾಕಿದನು. ನವಾಬ್ ನಜೀಮನ ಅಧಿಕಾರವನ್ನು ರದ್ದುಪಡಿಸಲಾಯಿತು. ಅವನ ಅಧಿಕಾರವನ್ನು ಗವರ್ನರ್ ಜನರಲ್‌ನ ನ್ಯಾಯಸಭೆಗೆ ವರ್ಗಾಯಿಸಲಾಯಿತು. ಗವರ್ನರ್ ಜನರಲ್ಲನು ಪ್ರಾಂತೀಯ ಅಪರಾಧಿಕ ನ್ಯಾಯಾಲಯಗಳಲ್ಲೇ ಉನ್ನತವಾದ ಸದ್ದರ್ ನಿಜಾಮತ್ ಅದಾಲತ್ತುಗಳನ್ನು ರಚಿಸಿದನು. ಕ್ರಿ.ಶ. 1801ರ 2ನೇ ನಿಬಂಧನೆಯ ಅನುಸಾರ, ಸದ್ದರ್ ನಿಜಾಮತ್ ಅದಾಲತ್ತಿನಲ್ಲಿ ಗವರ್ನರ್ ಜನರಲ್ ಮತ್ತು ಅವನ ನ್ಯಾಯಮಂಡಳಿಗೆ ಬದಲಾಗಿ ಒಬ್ಬ ಮುಖ್ಯ ನ್ಯಾಯಾಧೀಶನೂ ಮತ್ತು ಹಲವು ಕಿರಿಯ ನ್ಯಾಯಾಧೀಶರುಗಳನ್ನು ಒಳಗೊಂಡಿರುವಂತೆ ನಿರ್ದೇಶಿಸಲಾಯಿತು. ಕ್ರಿ.ಶ. 1811ರ xiiನೆ ನಿಬಂಧನೆಯಂತೆ ಈ ನ್ಯಾಯಾಧೀಶರುಗಳ ಸಂಖ್ಯೆಯನ್ನು ಹೆಚ್ಚಿಸಲಾಯಿತು. ಸಂಚಾರಿ ನ್ಯಾಯಾಲಯಗಳು ನ್ಯಾಯ ಪರಿಪಾಲನೆಯಲ್ಲಿ ಚುರುಕಾಗಿಲ್ಲದೆ ವಿಫಲವಾದುದರಿಂದ ಅವುಗಳನ್ನು ಕ್ರಿ.ಶ. 1829ರಲ್ಲಿ ರದ್ದು ಪಡಿಸಲಾಯಿತು. ಹೀಗಾಗಿ ಈ ನ್ಯಾಯಾಲಯಗಳ ಅಧಿಕಾರವನ್ನು ರೆವಿನ್ಯೂ ಕಮೀಶನರುಗಳಿಗೆ ವರ್ಗಾಯಿಸಲಾಯಿತು. ಈ ಕಮಿಷನರುಗಳು ಮುಖ್ಯವಾದ ಪ್ರಕರಣಗಳಲ್ಲೆಲ್ಲಾ ಅಪರಾಧಿಕ ನ್ಯಾಯಾಧೀಶರುಗಳೂ ಆದರು. ಆದರೆ ಈ ಕೆಲಸ ಅವರಿಗೆ ಭಾರಿ ಹೊರೆಯಾದ ಕಾರಣ ಕ್ರಿ.ಶ. 1831ರ ನಿಬಂಧನೆಯ ಪ್ರಕಾರ ಜಿಲ್ಲಾ ಮತ್ತು ಸಿವಿಲ್ ನ್ಯಾಯಾಧೀಶರುಗಳಿಗೆ ಅಪರಾಧಿಕ ಪ್ರಕರಣಗಳ ಅಧಿಕಾರ ವ್ಯಾಪ್ತಿಯನ್ನು ವಹಿಸಿಕೊಡಲಾಯಿತು. ಕ್ರಿ.ಶ. 1871ರಲ್ಲಿ ಬಂಗಾಳ ಸತ್ರ ನ್ಯಾಯಾಲಯಗಳ ಮಸೂದೆಯನ್ನು ಅಂಗೀಕಾರ ಮಾಡಲಾಯಿತು. ಬಂಗಾಳ ಮತ್ತು ವಾಯುವ್ಯ ಪ್ರಾಂತಗಳ ಸ್ಥಳೀಯ ಸರ್ಕಾರಗಳು ಸತ್ರ ನ್ಯಾಯಾಧೀಶರುಗಳನ್ನು ಹಾಗೂ ಹೆಚ್ಚುವರಿ ಸತ್ರ ನ್ಯಾಯಾಧೀಶರುಗಳನ್ನು ನೇಮಕ ಮಾಡಲು ಈ ಮಸೂದೆ ಅವಕಾಶ ಮಾಡಿತು. ಈ ಮಸೂದೆಯು ಒಂದು ತಾತ್ಕಾಲಿಕ ಕ್ರಮವಾಗಿದ್ದು ಕ್ರಿ.ಶ. 1872ರಲ್ಲಿ ರದ್ದು ಮಾಡಲಾಯಿತು.

ಬಂಗಾಳದಲ್ಲಿದ್ದ ನ್ಯಾಯಿಕ ಸಂಸ್ಥೆಗಳನ್ನು ಹೋಲುವ ಸಂಸ್ಥೆಗಳನ್ನು ಕ್ರಿ.ಶ. 1802ರಲ್ಲಿ ಮದರಾಸ್ ಪ್ರೆಸಿಡೆನ್ಸಿಯಲ್ಲೂ ಚಾಲ್ತಿಗೊಳಿಸಲಾಯಿತು. ನಾಲ್ಕು

ಸಂಚಾರೀ ನ್ಯಾಯಾಲಯಗಳನ್ನು ಮತ್ತು ಒಂದು ಅಪರಾಧಿಕ ಮೇಲ್ಮನವಿ ನ್ಯಾಯಾಲಯವನ್ನು ಸ್ಥಾಪಿಸಲಾಯಿತು. ಈ ಮೇಲ್ಮನವಿ ನ್ಯಾಯಾಲಯದ ನ್ಯಾಯಾಧೀಶರುಗಳೆಂದರೆ, ಗವರ್ನರ್ ಮತ್ತು ಅವನ ನ್ಯಾಯ ಮಂಡಲಿಯ ಸದಸ್ಯರುಗಳು. ಸಂಚಾರೀ ನ್ಯಾಯಾಲಯಗಳನ್ನು ಕ್ರಿ.ಶ. 1845ರಲ್ಲಿ ರದ್ದುಪಡಿಸಿ, ಅವುಗಳಿಗಿದ್ದ ಅಧಿಕಾರ ವ್ಯಾಪ್ತಿಯನ್ನು ಜಿಲ್ಲಾ ನ್ಯಾಯಾಧೀಶರುಗಳಿಗೆ ವರ್ಗಾಯಿಸಲಾಯಿತು.

ಬೊಂಬಾಯಿಯಲ್ಲಿ ಮ್ಯಾಜಿಸ್ಟ್ರೇಟರುಗಳು (ದಂಡಾಧಿಕಾರಿಗಳು) ಜಿಲ್ಲಾ ನ್ಯಾಯಾಧೀಶರುಗಳು ಮತ್ತು ಸಂಚಾರೀ ನ್ಯಾಯಾಲಯಗಳಾಗಿ ಅಪರಾಧಿಕ ಅಧಿಕಾರ ವ್ಯಾಪ್ತಿಯನ್ನು ಚಲಾಯಿಸುತ್ತಿದ್ದರು. ರಾಜಕೀಯ ಅಪರಾಧಿಗಳ ವಿಚಾರಣೆ ಮಾಡಲು ಒಂದು ವಿಶೇಷ ನ್ಯಾಯಾಲಯವೂ ಅಸ್ತಿತ್ವದಲ್ಲಿತ್ತು. ಹಿಂದೂಗಳನ್ನು ಅವರ ಅಪರಾಧ ಕಾನೂನಿನನ್ವಯ ವಿಚಾರಣೆ ಮಾಡಲಾಗುತ್ತಿತ್ತು; ಪಾರ್ಸಿಗಳು ಮತ್ತು ಕ್ರಿಶ್ಚಿಯನ್ನರುಗಳಿಗೆ ಇಂಗ್ಲೀಷ್ ಕಾನೂನನ್ನು ಅನ್ವಯಿಸಲಾಗುತ್ತಿತ್ತು. ಕ್ರಿ.ಶ. 1841ರಲ್ಲಿ ರಾಜಕೀಯ ಅಪರಾಧಗಳನ್ನು ಸಾಮಾನ್ಯ ನ್ಯಾಯಾಲಯಗಳು ಕೂಡ ಸಂಜ್ಞಾನಕ್ಕೆ ಅಂದರೆ ಪರಿಗಣನೆಗೆ ತೆಗೆದುಕೊಳ್ಳಬಹುದೆಂದು ಶಾಸನ ಮಾಡಲಾಯಿತು.

## ಪ್ರೀವಿ ಕೌನ್ಸಿಲ್ - ಆದರ ಮೇಲ್ಮನವಿ ಅಧಿಕಾರವ್ಯಾಪ್ತಿ ಹಾಗೂ ಅಂಗ ರಚನೆ

ಮೇಲ್ಮನವಿ ನ್ಯಾಯಾಲಯವಾಗಿ ಪ್ರೀವಿ ಕೌನ್ಸಿಲ್‌ನ ಅಂಗರಚನೆಯನ್ನು ನಿರ್ಧಾರ ಮಾಡುವ ಒಂದು ಮಸೂದೆಯನ್ನು ಕ್ರಿ.ಶ. 1833ರಲ್ಲಿ ಬ್ರಿಟಿಷ್ ಪಾರ್ಲಿಮೆಂಟು ಅಂಗೀಕಾರ ಮಾಡಿತು. ಕ್ರಿ.ಶ. 1726ರಲ್ಲಿ ಪ್ರಭುತ್ವದ ಸನ್ನದಿನ ದ್ವಾರಾ ಸ್ಥಾಪಿಸಲ್ಪಟ್ಟ ಮೇಯರ್‌ನ ನ್ಯಾಯಾಲಯಗಳ ತೀರ್ಪಿನ ಬಗ್ಗೆ ರಾಜನ ನ್ಯಾಯ ಸಭೆಗೆ ಮೇಲ್ಮನವಿ ಮಾಡುವ ಹಕ್ಕನ್ನು ಮೊದಲು ಪ್ರದಾನ ಮಾಡಲಾಯಿತು. ಹೀಗೆಯೇ, ಕಲ್ಕತ್ತದ ಫೋರ್ಟ್ ವಿಲಿಯಮ್‌ನಲ್ಲಿದ್ದ ಸರ್ವೋನ್ನತ ನ್ಯಾಯಾಲಯದ ತೀರ್ಪಿನಿಂದ ಮತ್ತು ಮದರಾಸು ಹಾಗೂ ಬೊಂಬಾಯಿಯಲ್ಲಿನ ಅಭಿಲೇಖನ ನ್ಯಾಯಾಲಯಗಳ (ಆಮೇಲಿನ ಸರ್ವೋನ್ನತ ನ್ಯಾಯಾಲಯಗಳು) ತೀರ್ಪುಗಳಿಂದ ಮೇಲ್ಮನವಿ ಮಾಡುವ ಹಕ್ಕನ್ನು ಕಾದಿರಿಸಲಾಯಿತು. ಕ್ರಿ.ಶ. 1781ರಲ್ಲಿ ಬಂಗಾಲದ ಸದ್ದರ್ ದಿವಾನಿ ಅದಾಲತ್ ಕೊಟ್ಟ ತೀರ್ಪುಗಳಿಂದ ಮೇಲ್ಮನವಿ ಸಲ್ಲಿಸುವ ಹಕ್ಕನ್ನು ಮನ್ನಣೆ ಮಾಡಲಾಯಿತು. ಆದರೆ ಕ್ರಿ.ಶ. 1797ರ ನಿಬಂಧನೆ xviರ ಅನ್ವಯ ಈ ಮೇಲ್ಮನವಿ ಹಕ್ಕನ್ನು ತೀರ್ಪಿನ ತಾರೀಖಿನಿಂದ ಆರು ತಿಂಗಳ ಒಳಗೆ ಸಲ್ಲಿಸಬೇಕಾಗಿತ್ತು. ಅಲ್ಲದೆ ಈ ರೀತಿ ಮೇಲ್ಮನವಿ ಮಾಡಬಹುದಾದ ಪ್ರಕರಣಗಳು ದಾವೆಯ ಮೌಲ್ಯ, ನ್ಯಾಯಾಲಯದ ಖರ್ಚನ್ನು ಬಿಟ್ಟು ರೂ.50,000.00 ಗಳಿಗಿಂತ ಹೆಚ್ಚಾಗಿ ಇರಬೇಕಾಗಿತ್ತು. ಕ್ರಿ.ಶ. 1818ರಲ್ಲಿ ಈ ಮೇಲ್ಮನವಿ ಮಾಡುವ ಹಕ್ಕನ್ನು ಮದರಾಸು ಮತ್ತು ಬೊಂಬಾಯಿಗಳಲ್ಲಿನ ಸದ್ದರ್ ನ್ಯಾಯಾಲಯದ ತೀರ್ಪುಗಳಿಗೂ ವಿಸ್ತರಿಸಲಾಯಿತು. ಕ್ರಿ.ಶ. 1838ರಲ್ಲಿ, ರಾಜನ ನ್ಯಾಯ ಮಂಡಲಿಯ ಆದೇಶದ ಪ್ರಕಾರ ಮೇಲ್ಮನವಿ ಮಾಡಲು ಇದ್ದ ರೂ.

50,000.00ದ ಮಿತಿಯನ್ನು ರೂ. 10,000.00ಕ್ಕ ಇಳಿಸಲಾಯಿತು. ಈ ನಿಯಮ ವಿಧಿಯನ್ನು ಬರುವ ವರ್ಷಗಳಲ್ಲೂ ಸಹ ಉನ್ನತ ನ್ಯಾಯಾಲಯಗಳ ಸನ್ನದುಗಳಲ್ಲಿ ಉಳಿಸಿಕೊಳ್ಳಲಾಯಿತು. ಕ್ರಿ.ಶ. 1833ರಲ್ಲಿ ಮೊದಲಿಗೆ ರಚನೆ ಮಾಡಿದಂತೆ ಪ್ರೀವಿ ಕೌನ್ಸಿಲ್‌ನಲ್ಲಿ ಇದ್ದವರೆಂದರೆ ಅ) ಲಾರ್ಡ್ ಪ್ರೆಸಿಡೆಂಟ್ ಆ) ಲಾರ್ಡ್ ಚಾನ್ಸಲರ್ ಹಾಗೂ ಇ) ಕೆಲವು ನಿರ್ದಿಷ್ಟ ಉನ್ನತ ನ್ಯಾಯಿಕ ಹುದ್ದೆಗಳಲ್ಲಿ ಮುಂಚೆ ಇದ್ದ ಅಥವಾ ಹಾಲಿ ಇರುವವರನ್ನು ಒಳಗೊಂಡ ಕೌನ್ಸಿಲರುಗಳು. ಕ್ರಿ.ಶ. 1871ರ ನ್ಯಾಯಿಕ ಸಮಿತಿ ಅಧಿನಿಯಮದಂತೆ, ನಾಲ್ಕುಮಂದಿ ವೇತನ ಸದಸ್ಯರುಗಳನ್ನು ಸೇರಿಸಲಾಯಿತು. ಮುಂದೆ, ಕ್ರಿ.ಶ. 1876ರ ಮೇಲ್ಮನವಿ ಅಧಿಕಾರ ವ್ಯಾಪ್ತಿ ಅಧಿನಿಯಮದನ್ವಯ, ಈ ವೇತನ ಸದಸ್ಯರುಗಳ ಜಾಗಕ್ಕೆ ನಾಲ್ಕು ಮಂದಿ ಮೇಲ್ಮನವಿ ಲಾರ್ಡ್‌ಗಳನ್ನು ನಿಯುಕ್ತಗೊಳಿಸಲಾಯಿತು. ಕ್ರಿ.ಶ. 1833ರ ಅಧಿನಿಯಮದ ಪ್ರಕಾರ ಕೋರಂಗೆ ನಾಲ್ಕು ಸದಸ್ಯರುಗಳು ಇರಬೇಕಾಗಿದ್ದು, ನಂತರದ ಅಧಿನಿಯಮದ ಪ್ರಕಾರ ಇದನ್ನು ಮೂವರು ಸದಸ್ಯರುಗಳಿಗೆ ಇಳಿಸಲಾಯಿತು.

## ಎರಡು ಸಮಾನಾಂತರ ವ್ಯವಸ್ಥೆಗಳ ನ್ಯಾಯಾಲಯಗಳು

ಕ್ರಿ.ಶ. 1861ರ ವರೆಗೆ ಬ್ರಿಟಿಷ್ ಇಂಡಿಯಾದಲ್ಲಿ ಎರಡು ಸಮಾನಾಂತರ ವ್ಯವಸ್ಥೆಗೆ ಸೇರಿದ ನ್ಯಾಯಿಕ ಸಂಸ್ಥೆಗಳಿದ್ದವು; ಇವುಗಳ ಉಗಮ ಮಾತ್ರ ಸಂಪೂರ್ಣವಾಗಿ ಭಿನ್ನವಾದ ಉಗಮ. ಮೊದಲನೆಯದು ಪ್ರೆಸಿಡೆನ್ಸಿ ಊರುಗಳಲ್ಲಿ ರಾಜ ಸನ್ನದಿನಿಂದ ಹಾಗೂ ಪಾರ್ಲಿಮೆಂಟಿನ ಶಾಸನಗಳಿಂದ ಸ್ಥಾಪಿತವಾದ ಪ್ರಭುತ್ವ ನ್ಯಾಯಾಲಯಗಳು. ಇನ್ನೊಂದು, ಗ್ರಾಮ ಪ್ರದೇಶಗಳಲ್ಲಿ ಕಂಪೆನಿಯು ಸ್ಥಳೀಯ ಸರ್ಕಾರಗಳ ಅನುಮತಿ ಪಡೆದು ಸ್ಥಾಪಿಸಿದ ನ್ಯಾಯಾಲಯಗಳು. ಕ್ರಿ.ಶ. 1834ರ ವರೆಗೆ, ಪ್ರಭುತ್ವ ನ್ಯಾಯಾಲಯಗಳು ಬ್ರಿಟಿಷ್ ಪಾರ್ಲಿಮೆಂಟಿನ ಶಾಸನದ ಅಧಿಕಾರಕ್ಕೆ ಹಾಗೂ ಸರ್ವೋನ್ನತ ನ್ಯಾಯಾಲಯ ಮನ್ನಣೆ ನೀಡಿದ ಇಂಡಿಯಾ ಸರ್ಕಾರದ ನಿಬಂಧನೆಗಳಿಗೆ ಮಾತ್ರ ಒಳಪಟ್ಟಿತ್ತು. ಗ್ರಾಮಾಂತರ ನ್ಯಾಯಾಲಯಗಳು, ಭಾರತ ಶಾಸನಗಳನ್ವಯ, ತಿದ್ದುಪಡಿಯಾದ ಮತ್ತು ಸೇರ್ಪಡೆಯಾದ ಹಿಂದು ಮತ್ತು ಮುಸಲ್ಮಾನರ ವೈಯಕ್ತಿಕ ಕಾನೂನುಗಳನ್ನು ಪರಿಪಾಲನೆ ಮಾಡುತ್ತಿದ್ದವು; ಈ ಗ್ರಾಮಾಂತರ ನ್ಯಾಯಾಲಯಗಳಿಗೆ, ಸಾಧಾರಣವಾಗಿ ಐರೋಪ್ಯರ ಮೇಲೆ ಅಧಿಕಾರ ವ್ಯಾಪ್ತಿ ಇರಲಿಲ್ಲ. ಪ್ರಭುತ್ವ ನ್ಯಾಯಾಲಯಗಳು ಬಹುತೇಕ ಇಂಗ್ಲಿಷ್ ಪ್ರಕ್ರಿಯೆ ಕಾನೂನನ್ನೂ ಮತ್ತು ಇಂಗ್ಲಿಷ್ ಕಾನೂನನ್ನು ಅನ್ವಯಿಸುತ್ತಿದ್ದವು; ಆದರೆ, ಹಿಂದೂಗಳು ಮತ್ತು ಮುಸಲ್ಮಾನರ ವಿರುದ್ಧದ ಕೆಲವು ವ್ಯವಹಾರಗಳಿಗೆ ಇದು ಅನ್ವಯವಾಗುತ್ತಿರಲಿಲ್ಲ.

## ಸಮಾನಾಂತರ ಅಧಿಕಾರ ವ್ಯಾಪ್ತಿಯ ವ್ಯವಸ್ಥೆಯನ್ನು ರದ್ದು ಮಾಡಲು ತೆಗೆದುಕೊಂಡ ಕ್ರಮಗಳು

ಕ್ರಿ.ಶ. 1813ರಲ್ಲಿ ಬ್ರಿಟಿಷ್ ಪಾರ್ಲಿಮೆಂಟ್ ಅನುಮೋದಿಸಿದ ಒಂದು ಶಾಸನದ

ಪ್ರಕಾರ, ಭಾರತೀಯರು ಐರೋಪ್ಯರ ಮೇಲೆ ದಾಖಲಿಸಿದ ವ್ಯಾಜ್ಯಗಳನ್ನು ತೀರ್ಮಾನ ಮಾಡಲು ವ್ಯಾವಹಾರಿಕ ಅಧಿಕಾರ ವ್ಯಾಪ್ತಿಯನ್ನು ಕಂಪನಿಯ ನ್ಯಾಯಾಲಯಗಳಿಗೆ ವಹಿಸಿದ್ದುದು, ಈ ಎರಡೂ ವ್ಯವಸ್ಥೆಗಳ ನಡುವಿನ ಕೊಲ್ಲಿಗೆ ಸೇತುಬಂಧ ಮಾಡುವ ಪ್ರಥಮ ಪ್ರಯತ್ನವೆನ್ನಬಹುದು. ಆದರೆ ಯೂರೋಪಿಯನ್ನರಿಗೆ ಇದ್ದ ವಿಶೇಷ ಸವಲತ್ತನ್ನು ಭಾಗಶಃ ಮಾತ್ರ ಕಿತ್ತು ಹಾಕಲಾಯಿತು. ಏಕೆಂದರೆ, ಮೇಲೆ ಹೇಳಿದ ಬ್ರಿಟಿಷ್ ಪಾರ್ಲಿಮೆಂಟಿನ ಶಾಸನ ಯೂರೋಪಿಯನ್ನರಿಗೆ ಸರ್ವೋನ್ನತ ನ್ಯಾಯಾಲಯಕ್ಕೆ ಮೇಲ್ಮನವಿ ಮಾಡುವ ವಿಶಿಷ್ಟ ಹಕ್ಕನ್ನು ಕೊಟ್ಟಿತು; ಸಾಧಾರಣವಾಗಿ ಇಂಥ ಮೇಲ್ಮನವಿಯನ್ನು ಸದ್ದರ್ ನ್ಯಾಯಾಲಯಕ್ಕೆ ಮಾತ್ರ ಮಾಡಬಹುದಾಗಿತ್ತು. ಈ ಭೇದಕಾರಕ ಹಕ್ಕನ್ನು ಕ್ರಿ.ಶ. 1836ರ xiನೇ ಶಾಸನದ ಪ್ರಕಾರ ಕಿತ್ತು ಹಾಕಲಾಯಿತು. ಕ್ರಿ.ಶ. 1813ರ ವರೆಗೆ, ಭಾರತದಲ್ಲಿದ್ದ ಯೂರೋಪಿಯನ್ ನಿವಾಸಿಗಳು ಪ್ರೆಸಿಡೆನ್ಸಿ ಊರುಗಳಲ್ಲಿನ ಪ್ರಭುತ್ವ ನ್ಯಾಯಾಲಯಗಳ ಅಪರಾಧಿಕ ಅಧಿಕಾರ ವ್ಯಾಪ್ತಿಗೆ ಒಳಪಟ್ಟಿದ್ದರು. ಆ ವರ್ಷದ ಶಾಸನದ ಪ್ರಕಾರ (53 ಜ.ಇ.ಓ. IIIಸಿ 155) ಪ್ರಾಂತವಲ್ಲಿನ ದಂಡಾಧಿಕಾರಿಗಳಿಗೆ ಶಾಂತಿ ನ್ಯಾಯಾಧೀಶರುಗಳಾಗಿ ಕಾರ್ಯನಿರ್ವಹಿಸಲು ಮತ್ತು ಕೆಲವು ಅಪರಾಧಿಕ ಪ್ರಕರಣಗಳಲ್ಲಿ ಪ್ರೆಸಿಡೆನ್ಸಿ ಊರುಗಳ ಹೊರಗಡೆ ಇದ್ದ ಬ್ರಿಟಿಷ್ ಪ್ರಜೆಗಳ ಮೇಲೂ ಅಧಿಕಾರ ವ್ಯಾಪ್ತಿ ಹೊಂದಿರಲು ಅಧಿಕಾರ ಕೊಡಲಾಯಿತು. ನಂತರದ ಶಾಸನಗಳಲ್ಲಿ ಈ ಅಧಿಕಾರವನ್ನು ಕ್ರಮೇಣ ವಿಸ್ತರಿಸಲಾಯಿತು.

ವಿಲೀನೀಕರಣದತ್ತ ಇನ್ನೊಂದು ಹೆಜ್ಜೆಯೆಂದರೆ ದೇಶದಲ್ಲೆಲ್ಲಾ ಏಕರೀತಿಯ ಕಾನೂನುಗಳ ಸ್ಥಾಪನೆ. ಕಾನೂನಿನ ಕ್ರೋಢೀಕರಣ ಮತ್ತು ಸರಳೀಕರಣಗಳು ಈ ಕಾಲದಲ್ಲಿ ಜಾರಿಗೆ ತಂದ, ಅತಿ ಮಹತ್ವದ ಸುಧಾರಣೆಗಳಲ್ಲಿ ಒಂದು. ಈಸ್ಟ್ ಇಂಡಿಯಾ ಕಂಪನಿಯು ಭಾರತೀಯರನ್ನು ಭಾರತೀಯ ಕಾನೂನಿನಿಂದಲೂ ಮತ್ತು ಆಂಗ್ಲರನ್ನು ಆಂಗ್ಲ ಕಾನೂನಿನಿಂದಲೂ ಆಳುವುದಕ್ಕೆ ಪ್ರಯತ್ನಿಸಲು ಪ್ರಾರಂಭಿಸಿದರು. ಆದರೆ ಈ ವ್ಯವಸ್ಥೆ ಮೂರು ಕಾರಣಗಳಿಂದಾಗಿ ಕುಸಿದು ಬಿತ್ತು. ಮೊದಲನೆಯದಾಗಿ, ಭಾರತೀಯ ಕಾನೂನಿನ ನಿಖರವಾದ ಸ್ವಭಾವವನ್ನು ಏನು ಎಂದು ಕಂಡುಹಿಡಿಯುವುದರಲ್ಲಿನ ಕಷ್ಟ. ಎರಡನೆಯದಾಗಿ ಅದರ ಸ್ವಭಾವವನ್ನು ಏನು ಎಂದು ಗೊತ್ತು ಹಚ್ಚಿದರೂ, ಅದು ಮೈಗೂಡಿಸಿಕೊಂಡ ನಿಯಮಗಳು ಅನೇಕಬಾರಿ, ಆಂಗ್ಲ ನ್ಯಾಯಶಾಸ್ತ್ರದ ವ್ಯವಸ್ಥೆಯ ತಳಹದಿಯ ವಿಚಾರಗಳು ಮತ್ತು ಸಂಪ್ರದಾಯಗಳಿಗೆ ಅಸಂಗತವಾಗಿದ್ದವು. ಮೂರನೆಯದಾಗಿ, ಭಾರತೀಯ ಕಾನೂನಿನಲ್ಲಿ ಕೊರತೆಯಿತ್ತು. ಕರಾರು ಕಾನೂನು, ಅಪಕೃತ್ಯ ಕಾನೂನು, ನ್ಯಾಸಗಳ ಕಾನೂನು ಮುಂತಾದ ದೊಡ್ಡ ಹಾಗೂ ಮುಖ್ಯವಾದ ಕಾನೂನು ಶಾಖೆಗಳಲ್ಲಿ, ಅದು ಕೊಡುತ್ತಿದ್ದ ಮಾರ್ಗದರ್ಶನ ಏನೇನೂ ಸಾಕಾಗುತ್ತಿರಲಿಲ್ಲ, ಇಲ್ಲವೇ ಸುತರಾಂ ಮಾರ್ಗದರ್ಶನವೇ ಇರುತ್ತಿರಲಿಲ್ಲ. ಹೀಗಾಗಿ, ಬಹು ಮುಂಚಿನ ಕಾಲದಿಂದ, ಭಾರತದಲ್ಲಿ ಆಂಗ್ಲ-ಭಾರತೀಯ ಪ್ರಕರಣ ಕಾನೂನು ಬಹು ವಿಸ್ತಾರವಾಗಿಯೇ ಬೆಳೆಯಲಾರಂಭಿಸಿತು. ಜೊತೆಗೆ, ಭಾರತೀಯ ಕಾನೂನುಗಳಿಗ ತಿದ್ದುಪಡಿ ಸೇರ್ಪಡೆ ಮಾಡುವ ಶಾಸನಸಭೆಗಳ ನಿಬಂಧನೆಗಳೂ ಬೆಳೆದವು. ಈ

ನಿಬಂಧನೆಗಳಲ್ಲಿ ಬಹು ಮುಂಚಿನವುಗಳ ಗುರಿ, ಮಹಮ್ಮದೀಯ ಅಪರಾಧಿಕ ನ್ಯಾಯಶಾಸ್ತ್ರದಲ್ಲಿದ್ದ ದೋಷಗಳನ್ನು ನಿವಾರಿಸುವುದೇ ಆಗಿತ್ತು. ಕ್ರಿ.ಶ. 1780ರಲ್ಲಿ ಬಂಗಾಳ ಸರ್ಕಾರವು, ನ್ಯಾಯ ಪರಿಪಾಲನೆಗೋಸ್ಕರ ಒಂದು ನಿಬಂಧನೆಗಳ ಸಂಹಿತೆಯನ್ನೇ ಬಿಡುಗಡೆ ಮಾಡಿತು. ಅದರ ಮುಂದಿನ ವರ್ಷ ಒಂದು ಪರಿಷ್ಕೃತ ಸಂಹಿತೆಯನ್ನೂ ಪ್ರಸಿದ್ಧಿಸಿತು. ವಿವಾಹ, ವಾರಸ ಮುಂತಾದ ವ್ಯವಹಾರ ಪ್ರಕರಣಗಳಿಗೆ ಸಂಬಂಧಿಸಿದ ವ್ಯಾಜ್ಯಗಳಲ್ಲಿ, ಪಕ್ಷಕಾರರ ವೈಯಕ್ತಿಕ ಕಾನೂನನ್ನು ಅನುಸರಿಸಬೇಕೆಂದು ನ್ಯಾಯಾಲಯಗಳನ್ನು ಕ್ರಿ.ಶ. 1772ರ ವಾರನ್ ಹೇಸ್ಟಿಂಗ್ಸ್‌ನ ಯೋಜನೆಯು ನಿರ್ದೇಶಿಸಿತು. ವಾರನ್ ಹೇಸ್ಟಿಂಗ್ಸ್‌ನ ಈ ಯೋಜನೆಗೆ ಕ್ರಿ.ಶ. 1781ರ ತಿದ್ದುಪಡಿ ಅಧಿನಿಯಮ ಮನ್ನಣೆ ನೀಡಿ ದೃಢಪಡಿಸಿತು. ವ್ಯವಹಾರಿಕ ದಾವೆಗಳಲ್ಲಿನ ಪಕ್ಷಗಾರರು ಬೇರೆ ಬೇರೆ ಮತಾನುಯಾಯಿಗಳಾಗಿದ್ದು, ಅವರ ಮತೀಯ ಕಾನೂನಿನನ್ವಯ ಅವರಿಗೆ ಯಾವುದೇ ಆಸ್ತಿಯಲ್ಲಿ ಹಕ್ಕು ಸಿಗದೇ ಇದ್ದರೂ, ಆ ಹಕ್ಕಿನಿಂದ ಅವರು ವಂಚಿತರಾಗುವುದಿಲ್ಲವೆಂದು ಕ್ರಿ.ಶ. 1832ರ ಬಂಗಾಲದ ನಿಬಂಧನೆಯೊಂದು ವಿಧಿಸಿತು. ಕ್ರಿ.ಶ. 1850ರ ಲೆಕ್ಸ್ ಲೋಸೈ (ಸ್ಥಾನೀಯ ಕಾನೂನು) ಅಧಿನಿಯಮದ ಪ್ರಕಾರ ಈ ಬಂಗಾಲದ ನಿಬಂಧನೆಯ ತತ್ವವನ್ನು ಬ್ರಿಟಿಷ್ ಇಂಡಿಯಾದ ಎಲ್ಲೆಡೆಗೂ ವಿಸ್ತರಿಸಲಾಯಿತು. ಈ ಅಧಿನಿಯಮ, ಒಬ್ಬ ವ್ಯಕ್ತಿ ಕೇವಲ ತನ್ನ ಜಾತಿ ಅಥವಾ ಮತದ ಕಾರಣದಿಂದ ತನ್ನ ಯಾವತ್ತೂ ಹಕ್ಕುಗಳು, ಆಸ್ತಿ ಮತ್ತು ವಾರಸ ಹಕ್ಕು ಇವುಗಳನ್ನು ಕಳೆದುಕೊಳ್ಳುವುದಿಲ್ಲವೆಂದು ಘೋಷಿಸಿತು. ಸಿವಿಲ್ ಹಕ್ಕುಗಳನ್ನು ನಿರ್ಧರಿಸಲು ಹಿಂದು ಅಥವಾ ಮಹಮ್ಮದೀಯ ಲಿಖಿತ ಕಾನೂನಿಗಿಂತ ಅತಿಶಯವಾಗಿ ಸ್ಥಳೀಯ ರೂಢಿಗಳಿಗೆ ಬೊಂಬಾಯಿ ನಿಬಂಧನೆಗಳು ಆದ್ಯತೆ ಕೊಟ್ಟವು. ಇದೇ ನೀತಿಯನ್ನು ಮುಂದೆ, ಕ್ರಿ.ಶ. 1872ರ ಪಂಜಾಬು ಕಾನೂನು ಅಧಿನಿಯಮದ ಪ್ರಕಾರ ಪಂಜಾಬಿಗೂ ಅನ್ವಯಿಸಲಾಯಿತು. ಬ್ರಿಟಿಷ್ ಇಂಡಿಯಾದಲ್ಲಿ ನಿರ್ವಹಿಸಲಾಗದಷ್ಟು ದೊಡ್ಡದಾದ, ಗೊಂದಲಮಯವಾದ ಮತ್ತು ಮಸುಕು ಮಸುಕಾದ ಸ್ಥಿತಿಯಲ್ಲಿದ್ದ ಕಾನೂನಿನ ಬಗ್ಗೆ ಕ್ರಿ.ಶ. 1833ರಲ್ಲಿ ಬ್ರಿಟಿಷ್ ಪಾರ್ಲಿಮೆಂಟಿನ ಗಮನವನ್ನು ಸೆಳೆಯಲಾಯಿತು. ಕ್ರಿ.ಶ. 1833ರ ಸನ್ನದು ಅಧಿನಿಯಮ ಗವರ್ನರ್ ಜನರಲ್ಲನನ್ನು ಬ್ರಿಟಿಷ್ ಇಂಡಿಯಾದಲ್ಲಿದ್ದ ಕಾನೂನಿನ ಸ್ಥಿತಿ ಮತ್ತು ನ್ಯಾಯ ಪರಿಪಾಲನೆಯ ವ್ಯವಸ್ಥೆಯ ಬಗ್ಗೆ ಒಂದು ತನಿಖಾ ವರದಿಯನ್ನು ಕೊಡಲು, ಭಾರತೀಯ ಕಾನೂನು ಆಯೋಗವನ್ನು ನೇಮಿಸುವಂತೆ ನಿರ್ದೇಶಿಸಿತು. ಈ ಕಾನೂನು ಆಯೋಗದ ಕೆಲಸದ ಹೊರೆಯ ಬಹುಪಾಲು ಲಾರ್ಡ್ ಮೆಕಾಲೆಯ ಮೇಲೆ ಬಿದ್ದಿತು. ಆಯೋಗ ಕೈಗೆತ್ತಿಕೊಂಡ ಮೊದಲನೆಯ ವಿಷಯವೆಂದರೆ ದಂಡನೆ ವಿಧಿಸುವ ಕಾನೂನಿನ ಸಂಹಿತೆಯನ್ನು ತಯಾರಿಸುವುದು. ಇದರ ಕರಡು ಕ್ರಿ.ಶ. 1833ರಲ್ಲಿ ಸಂಪೂರ್ಣಗೊಳಿಸಲಾಯಿತಾದರೂ ಮಸೂದೆಯು ಕಾನೂನಾಗಿ ಅನುಮೋದನೆಯಾದದ್ದು ಕ್ರಿ.ಶ. 1860ರಲ್ಲಿ. ಕ್ರಿ.ಶ. 1853ಮತ್ತು ಕ್ರಿ.ಶ. 1861ರಲ್ಲಿ ಇನ್ನೂ ಎರಡು ಆಯೋಗಗಳನ್ನು ನೇಮಿಸಲಾಯಿತು. ಈ ಆಯೋಗಗಳ ಶ್ರಮದ ಫಲವೆಂದರೆ, ಅನೇಕ ಸಾರಭೂತವಾದ ಕಾನೂನುಗಳ ಸಂಹಿತೆಗಳು ಮತ್ತು ಪ್ರಕ್ರಿಯೆಗಳು. ಈ ಸಂಹಿತೆಗಳನ್ನು ಕಾಲಕ್ರಮವಾಗಿ ಕಾನೂನುಗಳಾಗಿ

ಅನುಮೋದಿಸಲಾಯಿತು. ಹೀಗೆ ಜಾರಿಗೆ ಬಂದ ಕಾನೂನುಗಳು, ಆಯಾ ವಿಷಯಕ್ಕೆ ಸಂಬಂಧಪಟ್ಟ ಹಾಗೆ ಮೊದಲಿದ್ದ ಭಾರತೀಯ ಸ್ಥಳೀಯ ಕಾನೂನುಗಳನ್ನು ರದ್ದು ಮಾಡಿ ಬ್ರಿಟಿಷ್ ಇಂಡಿಯಾದ ಎಲ್ಲೆಡೆಯಲ್ಲೂ ಎಲ್ಲ ನ್ಯಾಯಾಲಯಗಳೂ ಹಾಗೂ ವ್ಯಕ್ತಿಗಳಿಗೆ ಅನ್ವಯಗೊಳಿಸಲಾಯಿತು. ಸಿವಿಲ್ ಪ್ರಕ್ರಿಯಾ ಸಂಹಿತೆಯ ಮೊದಲನೆಯ ಆವೃತ್ತಿಯು ಕ್ರಿ.ಶ. 1859ರಲ್ಲಿ ಅನುಮೋದನೆಯಾಯಿತು. ಅನಂತರ ಕ್ರಿ.ಶ. 1861ರಲ್ಲಿ ಅಪರಾಧಿಕ ಪ್ರಕ್ರಿಯಾ ಸಂಹಿತೆಯು (ಕ್ರಿಮಿನಲ್ ಪ್ರೊಸೀಜರ್ ಕೋಡ್) ಹಿಂಬಾಲಿಸಿತು. ಇವುಗಳಿಗೆ ಪೂರಕವಾಗಿ, ಭಾರತ ವಾರಸಾ ಅಧಿನಿಯಮ 1865, ಹಿಂದೂ ಉಯಿಲುಗಳ ಅಧಿನಿಯಮ 1870, ಸಾಕ್ಷ್ಯ ಅಧಿನಿಯಮ ಮತ್ತು ಕರಾರುಗಳ ಅಧಿನಿಯಮ 1872, ನಿರ್ದಿಷ್ಟ ಪರಿಹಾರ ಅಧಿನಿಯಮ 1877 ವರ್ಗಾವಣೆಯ ಲಿಖಿತಗಳ ಅಧಿನಿಯಮ, 1881, (ನೆಗೋಷಿಯಬಲ್ ಇನ್‌ಸ್ಟ್ರುಮೆಂಟ್ಸ್ ಆ್ಯಕ್ಟ್) ಆಸ್ತಿ ವರ್ಗಾವಣೆ ಕಾಯಿದೆ ಮತ್ತು ಭಾರತ ನ್ಯಾಸ ಅಧಿನಿಯಮ 1882, ಮತ್ತು ಕಾಲಪರಿಮಿತಿ ಅಧಿನಿಯಮ 1908, ಇತ್ಯಾದಿ ಶಾಸನಗಳನ್ನು ಅನುಮೋದಿಸಲಾಯಿತು. ಭಾರತದ ಅಪರಾಧಿಕ ಕಾನೂನೆಲ್ಲವನ್ನೂ ಬಹುಮಟ್ಟಿಗೆ ಕ್ರೋಡೀಕರಿಸಲಾಗಿತ್ತು. ಆದರೆ ವ್ಯವಹಾರ ಕಾನೂನಿನ ಕ್ರೋಢೀಕರಣ ಸಂಪೂರ್ಣಗೊಳ್ಳಲು ಬಹುದೂರ ಕ್ರಮಿಸಬೇಕಾಗಿತ್ತು. ಹಿಂದೂ ಮತ್ತು ಮಹಮ್ಮದೀಯರ ಕಾನೂನುಗಳ ಕ್ರೋಢೀಕರಣಕ್ಕೆ ಮೂರು ತೊಡಕುಗಳು ಅಡ್ಡಿಯಾಗಿದ್ದವು. ಮೊದಲನೆಯದಾಗಿ ಈ ಕಾನೂನಿನ ಬಹುತೇಕ ಭಾಗಗಳು ಹೆಚ್ಚು ಕಡಿಮೆ ದೈವ ಮೂಲದಿಂದ ಬಂದುದೆಂದು ನಂಬಲಾಗಿದ್ದು ಇವುಗಳಲ್ಲಿ ಶಾಸನ ಸಭೆಯು ಮಧ್ಯ ಪ್ರವೇಶಿಸುವುದು ರಾಜಕೀಯವಾಗಿ ಅಪಾಯಕಾರಿಯೆಂದು ಪರಿಗಣಿಸಲಾಗಿತ್ತು. ಎರಡನೆಯದಾಗಿ, ಕ್ರೋಢೀಕರಣ ಒಂದೇ ಪಡಿಯಚ್ಚಿನ ನಿಯಮಗಳನ್ನು ಒಳಗೊಂಡಿದ್ದು, ಈ ನಿಯಮಗಳು ಸಾಮಾಜಿಕ ಹಾಗೂ ರಾಜಕೀಯ ಶಕ್ತಿಗಳ ಪ್ರಭಾವಕ್ಕೆ ಒಳಗಾಗಿ ಬದಲಾವಣೆಯ ಕಾರ್ಯಗತಿಯಲ್ಲಿದ್ದವು. ಮೂರನೆಯದಾಗಿ, ಸಾಮಾನ್ಯವಾಗಿ ಮಾನ್ಯ ಮಾಡಲ್ಪಟ್ಟ ಹಿಂದೂ ಕಾನೂನಿನ ಏಕೈಕ ಸಂಚಯುವಿರಲಿಲ್ಲ; ಪ್ರಾಂತದಿಂದ ಪ್ರಾಂತಕ್ಕೆ ಅದು ವಿಭಿನ್ನವಾಗಿದ್ದು, ಅನೇಕ ವೇಳೆ, ಸ್ಥಳೀಯ ಅಥವಾ ಕುಟುಂಬದ ರೂಢಿಗಳಿಂದ ಮಾರ್ಪಾಡು ಆಗುತ್ತಿತ್ತು.

## ಭಾರತದಲ್ಲಿ ಉಚ್ಚ ನ್ಯಾಯಾಲಯಗಳ ಉದಯ

ಏಕರೂಪತೆಯನ್ನು ತರುವ ನಿಟ್ಟಿನಲ್ಲಿ ಮೂರನೆಯ ಹೆಜ್ಜೆಯೆಂದರೆ ಸರ್ವೋಚ್ಚ ನ್ಯಾಯಾಲಯ ಮತ್ತು ಸದ್ದರ್ ನ್ಯಾಯಾಲಯಗಳನ್ನು ರದ್ದುಗೊಳಿಸುವುದು ಮತ್ತು ಅವುಗಳ ಜಾಗದಲ್ಲಿ ಪ್ರತಿ ಅಧಿಪತ್ಯದಲ್ಲೂ ಅಲ್ಲಿನ ನಗರ ಮತ್ತು ಗ್ರಾಮಾಂತರ ನ್ಯಾಯಾಲಯಗಳ ಮೇಲೆ ಹತೋಟಿ ಇದ್ದ ಏಕೈಕ ಮೇಲ್ಮನವಿ ನ್ಯಾಯಾಲಯವನ್ನು ಸ್ಥಾಪಿಸುವುದು. ಇದನ್ನು ಭಾರತ ಉಚ್ಚನ್ಯಾಯಾಲಯಗಳ ಅಧಿನಿಯಮ 1861ರ ಅನುಸಾರ ಕಾರ್ಯರೂಪಕ್ಕೆ ತರಲಾಯಿತು. ಈ ಅಧಿನಿಯಮ, ಲೆಟರ್ಸ್ ಪೇಟೆಂಟ್ ದ್ವಾರ (ಏಕಸ್ವ ಪತ್ರ) ಮದರಾಸು, ಮುಂಬಯಿ ಮತ್ತು ಪೋರ್ಟ್ ವಿಲಿಯಮ್ (ಕಲ್ಕತ್ತಾ)ಗಳಲ್ಲಿ ಮೂರು ಉಚ್ಚ ನ್ಯಾಯಾಲಯಗಳನ್ನು ಸ್ಥಾಪಿಸಲು ಪ್ರಭುತ್ವಕ್ಕೆ

ಅಧಿಕಾರ ಪ್ರದಾನ ಮಾಡಿತು. ಚಾರ್ಟರ್ಡ್ (ಪ್ರಭುತ್ವ ಸನ್ನದು ಹೊಂದಿದ) ಸರ್ವೋಚ್ಚ ನ್ಯಾಯಾಲಯ, ಸದ್ದರ್ ದಿವಾನಿ ಮತ್ತು ನಿಜಾಮತ್ ಅದಾಲತ್ತುಗಳ ಅಧಿಕಾರ ವ್ಯಾಪ್ತಿ ಮತ್ತು ಅವು ಚಲಾಯಿಸುತ್ತಿದ್ದ ಅಧಿಕಾರವನ್ನು ಉಚ್ಚ ನ್ಯಾಯಾಲಯಕ್ಕೆ ವರ್ಗಾಯಿಸಲಾಯಿತು. ಈ ಉಚ್ಚ ನ್ಯಾಯಾಲಯಗಳಲ್ಲಿ ಪ್ರತಿಯೊಂದರಲ್ಲೂ ಒಬ್ಬ ಮುಖ್ಯ ನ್ಯಾಯಾಧೀಶ ಮತ್ತು ಹದಿನೈದಕ್ಕಿಂತ ಹೆಚ್ಚಿಲ್ಲದ ನ್ಯಾಯಾಧೀಶರುಗಳು ಇದ್ದರು. ಇವರುಗಳಲ್ಲಿ ಮುಖ್ಯ ನ್ಯಾಯಾಧೀಶನೂ ಸೇರಿದಂತೆ ಮೂರನೇ ಒಂದು ಭಾಗಕ್ಕೆ ಕಡಿಮೆ ಇಲ್ಲದಂತೆ ನ್ಯಾಯಾಧೀಶರುಗಳು ಬ್ಯಾರಿಸ್ಟರುಗಳಾಗಿರಬೇಕಾಗಿತ್ತು; ಮತ್ತು ಮೂರನೇ ಒಂದು ಭಾಗಕ್ಕೆ ಕಡಿಮೆ ಇಲ್ಲದಂತೆ ಭಾರತದ ಸಿವಿಲ್ ಸರ್ವಿಸ್ ಅಧಿಕಾರಿಗಳಾಗಿರಬೇಕಾಗಿತ್ತು. ನಾಲ್ಕನೆಯ ಉಚ್ಚ ನ್ಯಾಯಾಲಯವನ್ನು ಸ್ಥಾಪಿಸಲು ಅಧಿಕಾರವನ್ನು ಕೊಡಲಾಗಿ ಅದರಂತೆ ಕ್ರಿ.ಶ. 1866ರಲ್ಲಿ ಅಲಹಾಬಾದ್‌ನಲ್ಲಿ ಉಚ್ಚ ನ್ಯಾಯಾಲಯವನ್ನು ಸ್ಥಾಪಿಸಲಾಯಿತು. ಅದೇ ವರ್ಷ ಸಾರ್ವಭೌಮ ನ್ಯಾಯ ವಿಧಾಯಕ ಮಂಡಲಿಯು ಒಂದು ಅಧಿನಿಯಮವನ್ನು ಅನುಮೋದನೆ ಮಾಡಿ ಅದರಂತೆ ಉಚ್ಚ ನ್ಯಾಯಾಲಯಗಳ ಮಾದರಿಯಲ್ಲೇ ಒಂದು ಮುಖ್ಯ ನ್ಯಾಯಾಲಯವನ್ನು ಪಂಜಾಬಿನಲ್ಲಿ ಸ್ಥಾಪಿಸಲಾಯಿತು. ಈ ಮುಖ್ಯ ನ್ಯಾಯಾಲಯದಲ್ಲಿ ಗವರ್ನರ್ ಜನರಲ್ಲನ ನ್ಯಾಯ ಮಂಡಲಿಯು ನೇಮಕ ಮಾಡಿದ ಇಬ್ಬರು ಅಥವಾ ಹೆಚ್ಚಿಗೆ ನ್ಯಾಯಾಧೀಶರುಗಳು ಇದ್ದು, ಇದಕ್ಕೆ ಅತ್ಯುಚ್ಚ ಮೇಲ್ಮನವಿ ಅಧಿಕಾರ ಮತ್ತು ಕೆಲವು ವ್ಯವಹಾರ ಹಾಗೂ ಅಪರಾಧಿಕ ಪ್ರಕರಣಗಳ ವಿಚಾರಣೆ ಮಾಡಲು ಮೂಲ ಅಧಿಕಾರ ವ್ಯಾಪ್ತಿಯನ್ನು ನಿಹಿತ ಮಾಡಲಾಯಿತು.

## ಅಪರಾಧಿಕ ಪ್ರಕ್ರಿಯೆ ಸಂಹಿತೆ 1872ರ ಕೆಳಗೆ ಅಪರಾಧಿಕ ನ್ಯಾಯಾಲಯಗಳ ಪುನರ್ ರಚನೆ

ಕ್ರಿ.ಶ. 1872ರಲ್ಲಿ, ಮುಂಚೆ ಇದ್ದ ಅಧಿನಿಯಮಗಳನ್ನು ತೊಡೆದುಹಾಕಿ ಒಂದು ಹೊಸ ಅಪರಾಧಿಕ ಪ್ರಕ್ರಿಯಾ ಸಂಹಿತೆಯನ್ನು ಜಾರಿಗೆ ತರಲಾಯಿತು. ಈ ಹೊಸ ಸಂಹಿತೆಯಲ್ಲಿ, ಉಚ್ಚ ನ್ಯಾಯಾಲಯ, ಪಂಜಾಬಿನ ಮುಖ್ಯ ನ್ಯಾಯಾಲಯ, ಮತ್ತು ನಿಬಂಧನೆಗಳಿಗೆ ಒಳಪಡದ ಪ್ರಾಂತಗಳಲ್ಲಿನ ನ್ಯಾಯಿಕ ಆಯುಕ್ತರುಗಳ ನ್ಯಾಯಾಲಯಗಳು, ಇವುಗಳಲ್ಲದೆ ಬ್ರಿಟಿಷ್ ಇಂಡಿಯಾದಲ್ಲಿ ನಾಲ್ಕು ದರ್ಜೆಗಳ ಅಪರಾಧಿಕ ನ್ಯಾಯಾಲಯಗಳಿರಬೇಕೆಂದು ವಿಧಿಸಲಾಯಿತು. ಇವುಗಳೆಂದರೆ, ಸತ್ರ ನ್ಯಾಯಾಲಯ, ಮೊದಲನೆ, ಎರಡನೆ ಮತ್ತು ಮೂರನೆ ದರ್ಜೆಯ ದಂಡಾಧಿಕಾರಿಗಳ ನ್ಯಾಯಾಲಯಗಳು. ಪ್ರತಿಯೊಂದು ಪ್ರಾಂತವನ್ನು ಸತ್ರ ವಿಭಾಗಗಳನ್ನಾಗಿ ವಿಂಗಡಿಸಿ, ಇಂಥ ವಿಭಾಗಗಳೆಲ್ಲದರಲ್ಲೂ ಒಂದೊಂದು ಸತ್ರ ನ್ಯಾಯಾಲಯ ಮತ್ತು ಒಬ್ಬೊಬ್ಬ ಸತ್ರ ನ್ಯಾಯಾಧೀಶನಿರಬೇಕೆಂದು ನಿಗದಿಪಡಿಸಲಾಯಿತು. ಇದಲ್ಲದೆ ಸ್ಥಳೀಯ ಸರ್ಕಾರಕ್ಕೆ ಅತಿರಿಕ್ತ ಮತ್ತು ಜಂಟಿ ಸತ್ರ ನ್ಯಾಯಾಧೀಶರುಗಳನ್ನು ನೇಮಕ ಮಾಡುವುದಕ್ಕೆ ಅಧಿಕಾರ ಕೊಡಲಾಯಿತು. ಇವರುಗಳು ಸತ್ರ ನ್ಯಾಯಾಲಯದ ಎಲ್ಲ ಅಧಿಕಾರವನ್ನೂ ಚಲಾಯಿಸಬಹುದಾಗಿದ್ದರೂ, ಸರ್ಕಾರ ನಿರ್ದೇಶಿಸಿದ ಪ್ರಕರಣಗಳನ್ನು ಅಥವಾ

ವಿಭಾಗದ ಸತ್ರ ನ್ಯಾಯಾಧೀಶ ಅವರಿಗೆ ವಹಿಸಿಕೊಟ್ಟ ಪ್ರಕರಣಗಳನ್ನು ಮಾತ್ರ ವಿಚಾರಣೆ ಮಾಡಬಹುದಾಗಿತ್ತು. ಮೂರು ದರ್ಜೆಗಳ ದಂಡಾಧಿಕಾರಿಗಳಲ್ಲಿ ಇದ್ದ ವ್ಯತ್ಯಾಸ ಅವರು ಎಂಥ ಶಿಕ್ಷೆಯನ್ನು ವಿಧಿಸಬಹುದಾಗಿತ್ತೆಂಬುದರ ಮೇಲೆ ಅವಲಂಬಿತವಾಗಿತ್ತು. ಮೊದಲನೆ ದರ್ಜೆಯ ದಂಡಾಧಿಕಾರಿ ಎರಡು ವರ್ಷಗಳವರೆಗೆ ಕಾರಾಗೃಹ ಶಿಕ್ಷೆ ಮತ್ತು ಒಂದು ಸಾವಿರ ರೂಪಾಯಿಗಳವರೆಗೆ ದಂಡವನ್ನು ವಿಧಿಸಬಹುದಾಗಿತ್ತು; ಎರಡನೆ ದರ್ಜೆ ದಂಡಾಧಿಕಾರಿ ಆರು ತಿಂಗಳವರೆಗೆ ಕಾರಾಗೃಹ ವಾಸವನ್ನು ಮತ್ತು ಇನ್ನೂರು ರೂಪಾಯಿಗಳವರೆಗೆ ದಂಡವನ್ನೂ ವಿಧಿಸಬಹುದಾಗಿತ್ತು. ಇವೆರಡು ದರ್ಜೆಯ ದಂಡಾಧಿಕಾರಿಗಳು ಛಡಿ ಏಟಿನ ಶಿಕ್ಷೆ ಅಥವಾ ಏಕಾಂತ ಕಾರಾಗೃಹ ಶಿಕ್ಷೆಯನ್ನೂ ವಿಧಿಸಬಹುದಾಗಿತ್ತು. ಮೂರನೆಯ ದರ್ಜೆಯ ದಂಡಾಧಿಕಾರಿ ಇಂಥ ಆದೇಶವನ್ನು ಮಾಡುವ ಹಾಗಿರಲಿಲ್ಲ. ಮೂರೂ ದರ್ಜೆಯ ದಂಡಾಧಿಕಾರಿಗಳನ್ನು ಸ್ಥಳೀಯ ಸರ್ಕಾರ ನೇಮಕ ಮಾಡಬಹುದಾಗಿದ್ದು ಇವರುಗಳು ಜಿಲ್ಲಾ ದಂಡಾಧಿಕಾರಿಯವರಿಗೆ ಅಧೀನರಾಗಿದ್ದರು. ಸ್ಥಳೀಯ ಸರ್ಕಾರವು ಒಂದು ಜಿಲ್ಲೆಯನ್ನು ಉಪವಿಭಾಗಗಳಾಗಿ ವಿಂಗಡಿಸಿ ಒಂದೊಂದು ವಿಭಾಗಕ್ಕೆ ಮೊದಲನೆಯ ಅಥವಾ ಎರಡನೆಯ ದರ್ಜೆಯ ದಂಡಾಧಿಕಾರಿಯನ್ನು ನೇಮಕ ಮಾಡಬಹುದಾಗಿತ್ತು. ವಿಭಾಗ ದಂಡಾಧಿಕಾರಿಯು ಜಿಲ್ಲಾ ದಂಡಾಧಿಕಾರಿಯ ಹತೋಟಿಗೆ ಒಳಪಟ್ಟಿದ್ದು ತನ್ನ ವಿಭಾಗದಲ್ಲಿ ಬರುವ ಇತರ ದಂಢಾಧಿಕಾರಿಗಳನ್ನು ತಾನು ನಿಯಂತ್ರಿಸುತ್ತಿದ್ದನು. ನಿಬಂಧನೆಗಳಿಗೆ ಒಳಪಡದ ಪ್ರಾಂತಗಳಲ್ಲಿ ಮರಣದಂಡನೆ ವಿಧಿಸಬೇಕಾಗಿಲ್ಲದ ಅಪರಾಧ ಪ್ರಕರಣಗಳನ್ನೂ ಮತ್ತು ಏಳು ವರ್ಷಗಳಿಗೆ ಹೆಚ್ಚಿನ ಕಾರಾಗೃಹವಾಸದ ಶಿಕ್ಷೆಯನ್ನು ಕೊಡಬೇಕಾಗಿಲ್ಲದ ಪ್ರಕರಣಗಳನ್ನೂ ವಿಚಾರಣೆಮಾಡಲು, ಜಿಲ್ಲಾಧಿಕಾರಿಗಾಗಲೀ ಅಥವಾ ಇತರ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಾಗಲೀ, ಅಧಿಕಾರವನ್ನು ಹಚ್ಚಲು ಸ್ಥಳೀಯ ಸರ್ಕಾರಕ್ಕೆ ಅವಕಾಶವಿತ್ತು. ಯಾವುದೇ ಜಿಲ್ಲೆಯಲ್ಲಿ, ವಿಶೇಷ ದಂಡಾಧಿಕಾರಿಯನ್ನಾಗಲೀ, ಅಥವಾ ದಂಡಾಧಿಕಾರಿಗಳ ಪೀಠವನ್ನಾಗಲೀ ನೇಮಕಮಾಡಿ, ಅವರಿಗೆ ಮೊದಲನೆ, ಎರಡನೆ ಅಥವಾ ಮೂರನೆ ದರ್ಜೆಯ ದಂಡಾಧಿಕಾರಿಗಳ ಅಧಿಕಾರವನ್ನು ಕೊಡಲು ಸ್ಥಳೀಯ ಸರ್ಕಾರಕ್ಕೆ ಯಾಜಮಾನ್ಯ ಕೊಡಲಾಗಿತ್ತು.

## ಅಪರಾಧಿಕ ನ್ಯಾಯಪರಿಪಾಲನೆಯ ಕೆಲವು ಗಮನಾರ್ಹ ಲಕ್ಷಣಗಳು

ಈ ದೇಶದಲ್ಲಿ ಸ್ಥಾಪಿಸಲಾದ ಅಪರಾಧಿಕ ನ್ಯಾಯ ಪರಿಪಾಲನಾ ವ್ಯವಸ್ಥೆಯ ಕೆಲವು ಅತಿ ಮುಖ್ಯವಾದ ಲಕ್ಷಣಗಳು ಹೀಗಿದ್ದವು:

i. ನ್ಯಾಯಿಕ ಮತ್ತು ಕಾರ್ಯ ನಿರ್ವಾಹಕ ಕರ್ತವ್ಯಗಳ ಸೇರ್ಪಡೆ. ಅಂದರೆ ನ್ಯಾಯಾಧೀಶನ ಮತ್ತು ಪ್ರಕರಣ ನಿರ್ವಾಹಕನ (ಪ್ರಾಸಿಕ್ಯೂಟರ್) ಕೆಲಸವನ್ನು ಒಬ್ಬನೇ ಅಧಿಕಾರಿಗೆ ಕೊಡಲಾಗಿತ್ತು.

ii. ಐರೋಪ್ಯ ಬ್ರಿಟಿಷ್ ಪ್ರಜೆಗಳಿಗೆ ಅನುಗ್ರಹಿಸಿದ್ದ ಪ್ರತ್ಯೇಕ ವಿಧಾನ ಮತ್ತು

ಸಾಧಾರಣ ನ್ಯಾಯಾಲಯಗಳ ಅಧಿಕಾರ ವ್ಯಾಪ್ತಿಯಿಂದ ಅವರಿಗಿದ್ದ ಭಾಗಶಃ ವಿನಾಯಿತಿ.

iii. ನ್ಯಾಯದರ್ಶಿಮಂಡಲಿಯಿಂದ ವಿಚಾರಣೆ ನಡೆಸುವ ವ್ಯವಸ್ಥೆಯು ಸರ್ವತ್ರ ಇಲ್ಲದಿರುವಿಕೆ.

iv. ರಾಜ್ಯಕ್ಕೆ ವಿರುದ್ಧಮಾಡಿದ ಅಪರಾಧ ಪ್ರಕರಣಗಳ ವಿಚಾರಣೆಗೆ ವಿಶೇಷ ಪ್ರಕ್ರಿಯೆ ಹಾಗೂ ಸಾಕ್ಷ್ಯ ನಿಯಮಗಳನ್ನು ಅನುಸರಿಸುವ ವಿಶೇಷ ನ್ಯಾಯಾಧಿಕರಣಗಳನ್ನು ಸ್ಥಾಪಿಸಲು ಕಾರ್ಯಾಂಗ ಸರ್ಕಾರಕ್ಕೆ ನೆರವಾಗಿದ್ದ ಕಾನೂನುಗಳು,

v. ಅಧೀನ ದಂಡಾಧಿಕಾರಿಗಳ ಮತ್ತು ನ್ಯಾಯಾಧೀಶರುಗಳ ನೇಮಕ, ಮುಂಬಡ್ತಿ ಇವುಗಳ ಮೇಲೆ ಕಾರ್ಯಾಂಗಕ್ಕೆ ಇದ್ದ ಸಂಪೂರ್ಣ ಹತೋಟಿ,

vi. ಹೇಬಿಯಸ್ ಕಾರ್ಪಸ್ ರಿಟ್ ಅರ್ಜಿಗಳನ್ನು ಸಲ್ಲಿಸುವ ಹಕ್ಕಿಗೆ ಕಡಿವಾಣ. ಅಪರಾಧಿಕ ಪ್ರಕ್ರಿಯಾ ಸಂಹಿತೆಯು ಈ ಹಕ್ಕನ್ನು ಫೋರ್ಟ್ ವಿಲಿಯಮ್, ಮದರಾಸು ಮತ್ತು ಮುಂಬೈಗಳಲ್ಲಿನ ಉಚ್ಚನ್ಯಾಯಾಲಯಗಳ ಸಾಧಾರಣ ಅಧಿಕಾರ ವ್ಯಾಪ್ತಿಗೆ ಸೀಮಿತಗೊಳಿಸಿದುದೇ ಅಲ್ಲದೆ, ಬಂಗಾಳ ರಾಜ್ಯದ ಖೈದಿಗಳ ನಿಬಂಧನೆಗಳು, 1818; ಮದರಾಸು ನಿಬಂಧನೆಗಳು II, 1819 ಬೊಂಬಾಯಿ ನಿಬಂಧನೆಗಳು xxv, 1827, ರಾಜ್ಯ ಖೈದಿಗಳ ಅಧಿನಿಯಮ 1858,ಈ ಎಲ್ಲಾ ಕಾನೂನಿನನ್ವಯ ಸ್ಥಾನ ಬದ್ಧತೆಯಲ್ಲಿ ಇಡಲಾಗಿದ್ದ ವ್ಯಕ್ತಿಗಳ ಅನುಕೂಲಕ್ಕಾಗಿ ಚಲಾಯಿಸಲಾಗದೆಂದು ನಿರ್ದಿಷ್ಟವಾಗಿ ನಿಷೇಧಿಸಿತ್ತು.

vii. ಉಚ್ಚ ನ್ಯಾಯಾಲಯಗಳಲ್ಲೇ ಆಗಲಿ, ಅಥವಾ ಅತ್ಯುನ್ನತ ನ್ಯಾಯಾಧಿಕರಣಗಳಲ್ಲೇ ಆಗಲಿ ವಿವಿಧ ಸಂದರ್ಭಗಳಿಂದಾಗಿ, ನ್ಯಾಯಪರತೆ ಮತ್ತು ನ್ಯಾಯಿಕ ಸ್ವಾತಂತ್ರ್ಯವಿಲ್ಲದ ಕೊರತೆ. ಈ ಸಂದರ್ಭಗಳೆಂದರೆ ನ್ಯಾಯಾಧೀಶರುಗಳು ಪ್ರಭುತ್ವದ ಇಚ್ಛಾನುಸಾರ ಮಾತ್ರ ಅಧಿಕಾರದಲ್ಲಿರಬಹುದೆಂಬ ಕಟ್ಟುಪಾಡು. (ಇಂಗ್ಲೆಂಡಿನಲ್ಲಿ ಎರಡೂ ಪಾರ್ಲಿಮೆಂಟ್ ಸಭೆಗಳ ಸಮ್ಮತಿಯಿಂದ ಮಾತ್ರ ಅವರುಗಳನ್ನು ತೆಗೆಯಬಹುದಾಗಿತ್ತು.) ನ್ಯಾಯಾಧೀಶರುಗಳ ನೇಮಕದಲ್ಲಿ -ಸ್ಥಳೀಯ ಸರ್ಕಾರಗಳಿಗೆ ಕೊಟ್ಟಿದ್ದ ಮೇಲುಗೈ; ಕಡೆಯ ಪಕ್ಷ, ಮೂರನೇ ಒಂದು ಭಾಗದಷ್ಟು ನ್ಯಾಯಾಧೀಶರುಗಳು . ಸಿವಿಲ್ ಸರ್ವೀಸ್ ಅಧಿಕಾರಿಗಳಾಗಿರಬೇಕೆಂಬ ನಿಯಮ,

viii. ಗವರ್ನರ್ ಜನರಲ್‌ಗಳು, ಗವರ್ನರುಗಳು ಮತ್ತು ಅವರ ಕಾರ್ಯನಿರ್ವಾಹಕ ಮಂಡಲಿಯ ಸದಸ್ಯರುಗಳಿಗೆ, ಅವರು ತಮ್ಮ ಸಾರ್ವಜನಿಕ ಕರ್ತವ್ಯ ನಿರ್ವಹಣೆಯಲ್ಲಿ ಮಾಡಿದ ಯಾವುದೇ ತಪ್ಪುಗಳಿಗೆ, ಅಥವಾ ಇನ್ನಿತರೆ ಅಪರಾಧಗಳಿಗೆ (ದೇಶದ್ರೋಹ ಮತ್ತು ಗುರುತರವಾದ ಅಪರಾಧಗಳನ್ನು

ಹೊರತುಪಡಿಸಿ) ಉಚ್ಚ ನ್ಯಾಯಾಲಯಗಳ ಅಧಿಕಾರ ವ್ಯಾಪ್ತಿಯಿಂದ ವಿನಾಯಿತಿ.

ix. ಉಚ್ಚನ್ಯಾಯಾಲಯದ ಮೂಲ ಅಧಿಕಾರ ವ್ಯಾಪ್ತಿಯೊಳಗೆ ಬರುವ ಯಾವುದೇ ನಡವಳಿಕೆಗಳಲ್ಲಿ, ತಾವು ಮಾಡಿದ ಯಾವುದೇ ಕೆಲಸಕ್ಕೆ ಸಂಪೂರ್ಣ ಸಮರ್ಥನೆಯಾಗಿ ಗವರ್ನರ್ ಜನರಲ್ಲಿನ ನ್ಯಾಯಮಂಡಲಿಯು ಕೊಟ್ಟ ಲಿಖಿತ ಆಜ್ಞೆಯನ್ನು ಅವಲಂಬಿಸುವ ಅವಕಾಶ. (ಯಾವುದೇ ಐರೋಪ್ಯ ಬ್ರಿಟಿಷ್ ಪ್ರಜೆಗಳಿಗೆ ಸಂಬಂಧಿಸಿದ ಹಾಗೆ ಕೊಟ್ಟ ಆಜ್ಞೆಗಳಿಗೆ ಈ ವಿನಾಯಿತಿ ಇರಲಿಲ್ಲ.)

## ಭಾರತ ಉಚ್ಚ ನ್ಯಾಯಾಲಯಗಳ ಅಧಿನಿಯಮ 1911

ಕ್ರಿ.ಶ. 1911ರಲ್ಲಿ ಬ್ರಿಟಿಷ್ ಇಂಡಿಯಾದ ನಾಲ್ಕು ಪ್ರಾಂತಗಳಲ್ಲಿ ಮಾತ್ರ ಉಚ್ಚನ್ಯಾಯಾಲಯಗಳಿದ್ದವು. ಕ್ರಿ.ಶ. 1862ರಲ್ಲಿ ಬಂಗಾಳ, ಮದರಾಸು ಮತ್ತು ಮುಂಬೈಗಳಲ್ಲಿ ಉಚ್ಚನ್ಯಾಯಾಲಯಗಳನ್ನು ಸ್ಥಾಪಿಸಲು ಸನ್ನದುಗಳನ್ನು ಹೊರಡಿಸಲಾಯಿತು. ಕ್ರಿ.ಶ. 1865ರಲ್ಲಿ ಅಲಹಾಬಾದ್‌ನಲ್ಲಿ ಉಚ್ಚನ್ಯಾಯಾಲಯ ಸ್ಥಾಪಿಸಲು ಇನ್ನೊಂದು ಸನ್ನದನ್ನು ಹೊರಡಿಸಲಾಯಿತು. ಅವುಗಳ ಏಕಸ್ವ ಪತ್ರಗಳು (ಲೆಟರ್ ಪೇಟೆಂಟ್) ಎಲ್ಲ ಮುಖ್ಯ ವಿಚಾರಗಳಲ್ಲಿ ಏಕರೀತಿಯಾಗಿದ್ದವು; ಆದರೆ, ಅಲಹಾಬಾದ್ ಉಚ್ಚನ್ಯಾಯಾಲಯಕ್ಕೆ ಐರೋಪ್ಯ ಬ್ರಿಟಿಷ್ ಪ್ರಜೆಗಳ ವಿರುದ್ಧ ಅಪರಾಧಿಕ ನಡವಳಿಕೆಗಳನ್ನು ಜರುಗಿಸುವ ಅಧಿಕಾರದ ವಿನಹ, ಸಾಧಾರಣ ಮೂಲ ಅಧಿಕಾರವ್ಯಾಪ್ತಿಯನ್ನು ಕೊಟ್ಟಿರಲಿಲ್ಲ. ಕ್ರಿ.ಶ. 1866ರಲ್ಲಿ ಪಂಜಾಬಿನಲ್ಲಿ ಒಂದು ಮುಖ್ಯ ನ್ಯಾಯಾಲಯವನ್ನು (ಚೀಫ್ ಕೋರ್ಟ್) ಸ್ಥಾಪಿಸಲಾಯಿತು. ಈ ನ್ಯಾಯಾಲಯ ಅಲಹಾಬಾದ್ ಉಚ್ಚನ್ಯಾಯಾಲಯದ ಮೇಲ್ಪಂಕ್ತಿಯಲ್ಲಿ ಇದ್ದಿತಾದರೂ, ಪ್ರಭುತ್ವದ ಸನ್ನದು ದ್ವಾರಾ ಸ್ಥಾಪಿಸಲ್ಪಟ್ಟಿರದೆ, ಭಾರತ ನ್ಯಾಯ ವಿಧಾಯಕ ಸಭೆಯ ಮೂಲಕ ತನ್ನ ಅಧಿಕಾರವನ್ನು ಹೊಂದಿದ್ದು, ಇದರ ನ್ಯಾಯಾಧೀಶರುಗಳನ್ನು ಗವರ್ನರ್ ಜನರಲ್ಲಿನ ನ್ಯಾಯಮಂಡಳಿಯು ನೇಮಕಮಾಡುತ್ತಿತ್ತು. ಇನ್ನೊಂದು ನ್ಯಾಯಾಲಯವನ್ನು ಕೆಳ ಬರ್ಮಾಪ್ರಾಂತಕ್ಕೆ ರಂಗೂನಿನಲ್ಲಿ ಸ್ಥಾಪಿಸಲಾಯಿತು. ಇದು ಪ್ರೆಸಿಡೆನ್ಸಿ ನ್ಯಾಯಾಲಯಗಳ ಮಾದರಿಯಲ್ಲಿದ್ದು ಮೂಲ ವ್ಯವಹಾರಿಕ ಹಾಗೂ ಅಪರಾಧಿಕ ಅಧಿಕಾರ ವ್ಯಾಪ್ತಿಯನ್ನು ಹೊಂದಿದ್ದಿತು. ಮಿಕ್ಕೆಲ್ಲ ಪ್ರಾಂತಗಳಲ್ಲಿ ಅತ್ಯುಚ್ಚನ್ಯಾಯಾಧಿಕರಣವೆಂದರೆ ಭಾರತ ಸರ್ಕಾರ ನೇಮಕ ಮಾಡಿದ ನ್ಯಾಯಿಕ ಆಯುಕ್ತರ ನ್ಯಾಯಾಧಿಕರಣ. ಭಾರತ ಉಚ್ಚನ್ಯಾಯಾಲಯಗಳ ಅಧಿನಿಯಮ 1911, ಆವಶ್ಯಕತೆ ಬಿದ್ದಾಗ ಬ್ರಿಟಿಷ್ ಇಂಡಿಯಾದ ಯಾವುದೇ ಭಾಗದಲ್ಲಿ ಹೆಚ್ಚುವರಿ ಉಚ್ಚನ್ಯಾಯಾಲಯಗಳನ್ನು ಸ್ಥಾಪಿಸಲು ಅವಕಾಶವನ್ನು ಒಳಗೊಂಡಿತ್ತು. ಅಲ್ಲದೆ, ದಿನೇ ದಿನೇ ವೃದ್ಧಿಯಾಗುತ್ತಿದ್ದ ನ್ಯಾಯಿಕ ಪ್ರಕರಣಗಳನ್ನು ನಿಭಾಯಿಸಲು ನ್ಯಾಯಾಧೀಶರುಗಳ ಗರಿಷ್ಠ ಮಿತಿಯನ್ನು ಹದಿನಾರರಿಂದ ಇಪ್ಪತ್ತಕ್ಕೆ ಹೆಚ್ಚಿಸಲಾಯಿತು. ಇದಲ್ಲದೆ ಗವರ್ನರ್ ಜನರಲ್ಲಿನ ನ್ಯಾಯಮಂಡಲಿಯು ತಾತ್ಕಾಲಿಕ

ಹೆಚ್ಚುವರಿ ನ್ಯಾಯಾಧೀಶರುಗಳನ್ನು ನಿಯಮಿಸಲು ಅವಕಾಶವನ್ನು ರೂಪಿಸಲಾಯಿತು. ಇದೇ ಅಧಿನಿಯಮದ ದ್ವಾರಾ ದತ್ತವಾದ ಅಧಿಕಾರದಂತೆ, 1915ರಲ್ಲಿ ಪಾಟ್ನಾದಲ್ಲೂ ಮತ್ತು ಕ್ರಿ.ಶ. 1919ರಲ್ಲಿ ಲಾಹೋರಿನಲ್ಲೂ ಉಚ್ಚನ್ಯಾಯಾಲಯಗಳನ್ನು ಸ್ಥಾಪಿಸಲಾಯಿತು.

## ನ್ಯಾಯಾಂಗ ಮತ್ತು ಕಾರ್ಯಾಂಗಗಳ ಚಟುವಟಿಕೆಗಳನ್ನು ಬೇರ್ಪಡಿಸಲು ಚಾಲನೆ

ಬ್ರಿಟಿಷರು ಜಾರಿಗೆ ತಂದ ನ್ಯಾಯಪದ್ಧತಿಯು, ಸ್ಥಳೀಯ ಸ್ಥಿತಿಗತಿಗಳಿಗೆ ಹಾಗೂ ಮನೋಧರ್ಮಕ್ಕೆ ಹೊಂದಾಣಿಕೆಯಾಗುವುದಕ್ಕಿಂತ ಸೈದ್ಧಾಂತಿಕ ವಿವೇಚನಾ ಪ್ರಜ್ಞೆಯನ್ನು ಆಧಾರವಾಗಿ ಇಟ್ಟುಕೊಂಡಿತ್ತು. ತತ್ಪರಿಣಾಮವಾಗಿ, ಈ ಪದ್ಧತಿ ಅಪರಿಪೂರ್ಣವಾಗಿತ್ತು. ಎಚ್ಚರಗೊಳ್ಳುತ್ತಿದ್ದ ರಾಷ್ಟ್ರೀಯ ಪ್ರಜ್ಞೆಯಿಂದಾಗಿ, ಎದ್ದುಕಾಣುತ್ತಿದ್ದ ದೋಷಗಳನ್ನು ನಿವಾರಿಸಲು ಸತತವಾದ ಬೇಡಿಕೆ ಉಂಟಾಗಿತ್ತು. ಭಾರತ ರಾಷ್ಟ್ರೀಯ ಕಾಂಗ್ರೆಸ್ 1855ರಲ್ಲಿ ಉದಯವಾದ ನಂತರ, ನ್ಯಾಯಾಂಗ ಮತ್ತು ಕಾರ್ಯಾಂಗದ ಕೆಲಸಗಳನ್ನು ಬೇರ್ಪಡೆಮಾಡಬೇಕೆಂಬ ಪ್ರಶ್ನೆಗೆ ದೊರೆತಷ್ಟು ಸ್ಥಿರವಾದ ಗಮನ ಮತ್ತು ಸರ್ವತ್ರ ಬೆಂಬಲ ಬೇರೆ ಯಾವ ವಿಷಯಕ್ಕೂ ದೊರೆಯಲಿಲ್ಲ. ಕ್ರಿ.ಶ. 1899ರಲ್ಲಿ ಹತ್ತು ಮಂದಿ ಉನ್ನತ ನ್ಯಾಯಿಕ ಅಧಿಕಾರಿಗಳು ಇಂಡಿಯಾ ಸರ್ಕಾರದ ರಾಜ್ಯ ಕಾರ್ಯದರ್ಶಿಯವರಿಗೆ ಸಲ್ಲಿಸಿದ ಎಂಟು ಅಂಶಗಳ ಆಕ್ಷೇಪಣೆಗಳನ್ನು ಒಳಗೊಂಡ ಜ್ಞಾಪನಾ ಪತ್ರವನ್ನು ಕೊಡುವುದರೊಂದಿಗೆ ಈ ವಿಷಯ ಕೊನೆ ಮುಟ್ಟಿತು. ಈ ಆಕ್ಷೇಪಣೆಗಳ ಸಾರಾಂಶ ಕೆಳಗೆ ಕಂಡಂತೆ ಇತ್ತು:

i. ನ್ಯಾಯಿಕ ಮತ್ತು ಕಾರ್ಯನಿರ್ವಾಹಕ ಕರ್ತವ್ಯಗಳು ಒಬ್ಬನೇ ಅಧಿಕಾರಿಯಲ್ಲಿ ಮಿಳಿತಗೊಂಡಿರುವುದು ನೀತಿಸಂಹಿತೆಯ ಪ್ರಾಥಮಿಕ ತತ್ವಗಳ ಉಲ್ಲಂಘನೆಯಾಗುತ್ತದೆ.

ii. ನ್ಯಾಯಿಕ ಅಧಿಕಾರಿಯೊಬ್ಬ ಸಂಪೂರ್ಣ ನಿಷ್ಪಕ್ಷಪಾತಿಯಾಗಿದ್ದು ಯಾವುದೇ ಪ್ರಕರಣವನ್ನು ಸಂಗತಿಗಳ ಪೂರ್ವ ತಿಳುವಳಿಕೆಯಿಲ್ಲದೆ ಪರಾಮರ್ಶಿಸಬೇಕು. ಆದರೆ ಕಾರ್ಯನಿರ್ವಾಹಕ ಅಧಿಕಾರಿ, ತನ್ನ ಜಿಲ್ಲೆಯ ಒಳಿತಿಗೆ ಬೇಕಾದ ಯಾವುದೇ ಮಟ್ಟದಲ್ಲಿ ಉಪಯೋಗಿಸಿಕೊಳ್ಳಬಹುದಾದ, ಎಲ್ಲಾ ವರದಿಗಳು ಮತ್ತು ಮಾಹಿತಿಗಳಿಗೆ ಕಿವಿತೆರೆದುಕೊಂಡಿರದಿದ್ದರೆ ತನ್ನ ಕರ್ತವ್ಯಗಳನ್ನು ಸಮರ್ಪಕವಾಗಿ ನಿರ್ವಹಿಸಲಾರ.

iii. ಭಾರತದ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಅತಿಶಯವಾದ ಹಲವು ಬಗೆಯ ಕಾರ್ಯಭಾರದ ಹೊಣೆಯಿದ್ದು, ತಮ್ಮ ಎಂದಿನ ಕೆಲಸದ ಜೊತೆಗೆ ನ್ಯಾಯಿಕ ಕರ್ತವ್ಯವನ್ನು ಸಮರ್ಪಕವಾಗಿ ನಿರ್ವಹಿಸಲು ಸಾಕಷ್ಟು ಸಮಯವಿಲ್ಲ.

iv. ನಿರ್ದಿಷ್ಟ ಕಾರ್ಯನಿರ್ವಾಹಕ ಕ್ರಮಗಳನ್ನು ನಿರ್ವಹಿಸುವುದರಲ್ಲಿ ತೀವ್ರ ಆಸಕ್ತಿಯಿರುವುದರಿಂದ, ಆ ಅಧಿಕಾರಿಗಳಿಗೆ ವ್ಯಕ್ತಿಗಳೊಡನೆ

ಘರ್ಷಣೆಯಾಗುವ ಸಂಭವವಿರುವುದರಿಂದ ಅವರಲ್ಲಿ ನ್ಯಾಯಿಕ ಅಧಿಕಾರಗಳನ್ನು ನಿಹಿತಗೊಳಿಸುವುದು ಅನುಚಿತವಾದುದು.

v. ಈಗ ಅಸ್ತಿತ್ವದಲ್ಲಿರುವ ವ್ಯವಸ್ಥೆಯಲ್ಲಿ ಕಲೆಕ್ಟರ್ ದಂಡಾಧಿಕಾರಿಗಳು ವಾಸ್ತವವಾಗಿ ಕಾರ್ಯಾಂಗ ಕೆಲಸಗಳಿಗಾಗಿ ನ್ಯಾಯಿಕ ಕರ್ತವ್ಯಗಳನ್ನು ಕಡೆಗಾಣಿಸುತ್ತಾರೆ.

vi. ಕಂದಾಯ ನಿರ್ಧರಣೆ ಆದೇಶಗಳಿಂದ ಬಂದ ಮೇಲ್ಮನವಿಗಳು, ಅವು ರಾಜಸ್ವ ಅಧಿಕಾರಿಗಳಿಂದಲೇ ತೀರ್ಮಾನವಾಗಬೇಕಾದಾಗ ನಿರರ್ಥಕವೆನಿಸುವುದು ಸಹಜ,

vii. ನ್ಯಾಯಿಕ ಅಧಿಕಾರಿಯೊಬ್ಬ ತನ್ನ ಕಾರ್ಯಾಂಗ ಕರ್ತವ್ಯವನ್ನು ನಿರ್ವಹಿಸಲು ತನ್ನ ಜಿಲ್ಲೆಯಲ್ಲಿ ಸಂಚಾರ ಮಾಡುತ್ತಿದ್ದರೆ ಅವನ ಮೊಕ್ಕಾಮನ್ನು ಹಿಂಬಾಲಿಸಬೇಕಾಗುವ ವ್ಯಾಜ್ಯದ ಪಕ್ಷಗಾರರಿಗೆ ಅತೀವ ಅನಾನುಕೂಲ, ಖರ್ಚು ಮತ್ತು ಬವಣೆ ಅನಿವಾರ್ಯವಾಗುತ್ತದೆ.

viii. ಈಗ ಅಸ್ತಿತ್ವದಲ್ಲಿರುವ ವ್ಯವಸ್ಥೆಯು ಸಂಬಂಧಪಟ್ಟವರೆಲ್ಲರಿಗೂ ಕಷ್ಟಕೋಟಲೆಗಳು ಮತ್ತು ಅನಾನುಕೂಲವನ್ನು ಉಂಟುಮಾಡುವುದೇ ಅಲ್ಲದೆ ನ್ಯಾಯಾಧಿಕರಣಗಳಿಗೆ ಪೊಲೀಸರ ಮತ್ತು ಗುಪ್ತದಳದವರ ಕೆಲಸವನ್ನು ಪಚ್ಚಿ, ಸಾಕ್ಷ್ಯ ನಿಯಮಗಳಲ್ಲಿ ಅಳವಡಿಸಿರುವ ರಕ್ಷಣೆಗಳನ್ನು ಕ್ಷಯಗೊಳಿಸುವುದರಿಂದ, ನ್ಯಾಯ ದೊರೆಯದೇ ಅನ್ಯಾಯವಾಗಿ, ನ್ಯಾಯ ದೊರಕಿದರೂ ಸಂಶಯ, ಅಪನಂಬಿಕೆ ಮತ್ತು ಅಸಮಾಧಾನ ಉಂಟಾಗಲು ಅವಕಾಶಗಳನ್ನು ಕಲ್ಪಿಸಿ ಶೋಚನೀಯ ಪರಿಸ್ಥಿತಿಯನ್ನುಂಟುಮಾಡುತ್ತದೆ.

ಆಡಳಿತದ ಬಗ್ಗೆ ಪೌರ್ವಾತ್ಯ ದೃಷ್ಟಿಕೋನವು ಅಧಿಕಾರದ ಕೇಂದ್ರೀಕರಣದತ್ತ ಇರುವುದಲ್ಲದೆ, ಅದು ಮಿತವ್ಯಯವಾದುದೂ ಆಗಿದೆ. ಅಲ್ಲದೆ ಬೇರ್ಪಡಿಸುವಿಕೆಯಿಂದ ಎಲ್ಲೆಲ್ಲೂ ಕಲೆಕ್ಟರನ ನೆಲೆ ನಿರ್ಬಲವಾಗಿ ತನ್ಮೂಲಕ ಬ್ರಿಟಿಷ್ ರಾಜ್ಯವೂ ನಿರ್ಬಲವಾಗುತ್ತದೆ ಎಂಬ ಕಾರಣಗಳನ್ನು ಕೊಟ್ಟು ಅಸ್ತಿತ್ವದಲ್ಲಿರುವ ವ್ಯವಸ್ಥೆಯನ್ನೇ ಸರ್ಕಾರ ಸಮರ್ಥಿಸಿಕೊಂಡಿತು.

# 4

# ಫೆಡರಲ್ ನ್ಯಾಯಾಲಯ

ಭಾರತ ಸರ್ಕಾರದ ಅಧಿನಿಯಮ 1935, ಜಾರಿಗೆ ಬರುವುದರೊಂದಿಗೆ ಭಾರತದಲ್ಲಿ ಪ್ರಾಂತೀಯ ಸ್ವಯಮಾಡಳಿತ ಸ್ಥಾಪಿತವಾಯಿತು. ಇದು ಪ್ರಾಂತೀಯ ಮಟ್ಟದಲ್ಲಿ ಹೊಣೆಗಾರಿಕೆಯನ್ನು ತಂದುದೇ ಅಲ್ಲದೆ ಬ್ರಿಟಿಷ್ ಇಂಡಿಯಾದ ಪ್ರಾಂತಗಳು ಮತ್ತು ರಾಜರುಗಳ ಆಳ್ವಿಕೆಗೆ ಒಳಪಟ್ಟ ಸಂಸ್ಥಾನಗಳನ್ನು ಒಂದುಗೂಡಿಸಿ ಫೆಡರಲ್ (ಒಕ್ಕೂಟ) ವ್ಯವಸ್ಥೆಯ ಕೆಳಗೆ ತರುವುದನ್ನು ಗುರಿಯಾಗಿಟ್ಟುಕೊಂಡಿದ್ದಿತು. ಯತಾರ್ಥ ಆಚರಣೆಯಲ್ಲಿ, ಫೆಡರಲ್ ವ್ಯವಸ್ಥೆಯು, ಸರ್ಕಾರ ಮತ್ತು ಪ್ರಜೆಗಳ ನಡುವೆ, ವ್ಯಕ್ತಿ ವ್ಯಕ್ತಿಗಳ ನಡುವೆ ಅಲ್ಲದೆ ಸರ್ಕಾರ ಸರ್ಕಾರಗಳ ನಡುವೆಯೂ, ನ್ಯಾಯಯುತವಾದ ಹಾಗೂ ಸಕ್ಷಮವಾದ ನ್ಯಾಯ ಪರಿಪಾಲನೆಯ ಮೇಲೆ ಹೆಚ್ಚಾಗಿ ಅವಲಂಬಿತವಾಗಿದೆ. ಈ ಉದ್ದೇಶದಿಂದಲೇ 1935ರ ಅಧಿನಿಯಮ ಫೆಡರಲ್ ನ್ಯಾಯಾಲಯ ಸ್ಥಾಪನೆಯನ್ನು ಒಳಗೊಂಡಿತ್ತು. (ಈ ಫೆಡರಲ್ ನ್ಯಾಯಾಲಯವೇ ಇಂದಿನ ಸರ್ವೋಚ್ಚ ನ್ಯಾಯಾಲಯದ ಪೂರ್ವಿಕ ನ್ಯಾಯಾಲಯ) ಭಾರತದ ಶ್ರೇಣೀಕೃತ ನ್ಯಾಯಿಕ ವ್ಯವಸ್ಥೆಯಲ್ಲಿ ಇದು ಎರಡನೆ ಅತ್ಯುಚ್ಚ ನ್ಯಾಯಾಲಯವಾಗಿತ್ತು. ಈ ನ್ಯಾಯಾಲಯದ ಅಧಿಕಾರ ವ್ಯಾಪ್ತಿ ವಿಸ್ತಾರವಾಗಿದ್ದು ಕೆಳಕಂಡ ವಿಷಯಗಳನ್ನು ಒಳಗೊಂಡಿತ್ತು:

i. ವ್ಯಾಜ್ಯದ ಪಕ್ಷಕಾರರುಗಳು:

   ಅ) ಫೆಡರೇಷನ್ (ಒಕ್ಕೂಟ) ಮತ್ತು ಪ್ರಾಂತ ಅಥವಾ ಸಂಸ್ಥಾನ

   ಅಥವಾ

   ಆ) ಎರಡು ಪ್ರಾಂತಗಳು ಅಥವಾ ಎರಡು ಸಂಸ್ಥಾನಗಳು ಅಥವಾ ಒಂದು ಪ್ರಾಂತ ಮತ್ತು ಒಂದು ಸಂಸ್ಥಾನವಾಗಿರುವ, ರಾಜ್ಯಾಂಗದ ನಿಬಂಧನೆಗಳ ನಿರ್ವಚನಕ್ಕೆ ಸಂಬಂಧಪಟ್ಟ ಯಾವುದೇ ವಿಷಯ ಅಥವಾ ಯಾವುದೇ ಹಕ್ಕು ಇಲ್ಲವೇ ಹೊಣೆಗಾರಿಕೆಯನ್ನು ನಿರ್ಧರಿಸುವುದು.

ii. ರಾಜ್ಯಾಂಗದ ಅಧಿನಿಯಮ ಪ್ರಾರಂಭವಾದಮೇಲೆ, ಒಕ್ಕೂಟ ಮತ್ತು ಒಕ್ಕೂಟದ ಘಟಕವೊಂದರ ನಡುವೆ, ಅಥವಾ ಘಟಕಗಳೆರಡರ ನಡುವೆ ಆದ ಒಪ್ಪಂದದಿಂದ ಉದ್ಭವಿಸಿದ, ಅಥವಾ ಒಪ್ಪಂದದ ನಿರ್ವಚನಕ್ಕೆ ಸಂಬಂಧಿಸಿದ

ವಿಷಯ (ಒಪ್ಪಂದ ಅನ್ಯಥಾ ವಿಧಿಸಿದ ಸಂದರ್ಭಗಳನ್ನು ವಿನಾಯಿಸಿ) (ಭಾರತ ಸರ್ಕಾರದ ಅಧಿನಿಯಮ 1935ರ 204ನೇ ಖಂಡ)

iii. ಉಚ್ಚ ನ್ಯಾಯಾಲಯ ಅಥವಾ ಯಾವುದೇ ಸಂಸ್ಥಾನದ ನ್ಯಾಯಾಲಯ ಕೊಟ್ಟ ತೀರ್ಮಾನದ ಮೇಲೆ ಏಕಮಾತ್ರ ಮೇಲ್ಮನವಿ ಅಧಿಕಾರ ವ್ಯಾಪ್ತಿ. ಆದರೆ ಈ ಮೇಲ್ಮನವಿ, ರಾಜ್ಯಾಂಗ ಅಧಿನಿಯಮದ ನಿರ್ವಚನಕ್ಕೆ ಸಂಬಂಧಿಸಿದ ಕಾನೂನಿನ ಗಹನವಾದ ಪ್ರಶ್ನೆಯನ್ನೊಳಗೊಂಡಿರಬೇಕಾಗಿತ್ತು. ಇಲ್ಲವೆ ಯಾವುದೇ ಹಕ್ಕು ಅಥವಾ ಹೊಣೆಗಳು ಅದರ ಕೆಳಗೆ ಉದ್ಭವಿಸಿರಬೇಕಾಗಿತ್ತು. ಆದರೆ ಈ ಮೇಲ್ಮನವಿಯನ್ನು ಹೂಡಲು ಉಚ್ಚ ನ್ಯಾಯಾಲಯವು ಭಾರತ ಸರ್ಕಾರದ ಅಧಿನಿಯಮ 1935ರ 205ನೇ ಖಂಡದ ಕೆಳಗೆ ಸರ್ಟಿಫಿಕೇಟ್ ಕೊಡಬೇಕಾಗಿತ್ತು. ಹೇಗಾದರೂ, ಪ್ರೀವಿ ಕೌನ್ಸಿಲ್‌ನ ಮೇಲ್ಮನವಿ ಅಧಿಕಾರ ವ್ಯಾಪ್ತಿಗೆ ಕುಂದುಂಟಾಗಲಿಲ್ಲ. (ಭಾರತ ಸರ್ಕಾರದ ಅಧಿನಿಯಮ 1935ರ 208ನೇ ಖಂಡ)

iv. ನ್ಯಾಯಿಕ ಸಮಿತಿಯ ಅಧಿನಿಯಮ 19833ರ 4ನೇ ಖಂಡತ ಕೆಳಗೆ ಪ್ರೀವಿ ಕೌನ್ಸಿಲ್‌ಗೆ ಕೊಟ್ಟ ಹಾಗೆ ಈ ನ್ಯಾಯಾಲಯಕ್ಕೂ ಅಧಿಕಾರ ವ್ಯಾಪ್ತಿ ಕೊಡಲಾಗಿತ್ತು. ಅಂದರೆ ಗವರ್ನರ್ ಜನರಲ್ಲನು ತನ್ನ ವಿವೇಚನೆಯಂತೆ ನ್ಯಾಯಾಲಯಕ್ಕೆ ಕಳುಹಿಸಿದ ಸಾರ್ವಜನಿಕ ಪ್ರಾಮುಖ್ಯತೆ ಇದ್ದ ಯಾವುದೇ ಕಾನೂನಿನ ಪ್ರಶ್ನೆಯ ಮೇಲೆ ತನ್ನ ಸಲಹೆ ಅಥವಾ ಅಭಿಪ್ರಾಯವನ್ನು ನೀಡುವ ಅಧಿಕಾರ ವ್ಯಾಪ್ತಿ.

v. ಇದಲ್ಲದೆ, ಭಾರತ ಸರ್ಕಾರದ ಅಧಿನಿಯಮ 1935ರ ಅಥವಾ ಸಾಧಾರಣ ರಾಜ್ಯಾಂಗ ಕಾನೂನಿನ ನಿರ್ವಚನಕ್ಕೆ ಸಂಬಂಧಿಸಿದ ಕಾನೂನಿನ ಪ್ರಶ್ನೆಯ ಮೇಲೆ, ಒಕ್ಕೂಟದಲ್ಲಿನ ಸಂಸ್ಥಾನವು ಉಚ್ಚ ನ್ಯಾಯಾಲಯವೊಂದು ಕೊಟ್ಟ ತೀರ್ಮಾನದಿಂದ ಫೆಡರಲ್ ನ್ಯಾಯಾಲಯಕ್ಕೆ ಮೇಲ್ಮನವಿ ಮಾಡಬಹುದಾಗಿತ್ತು.

ಆಗಸ್ಟ್ 1947ರ ನಂತರ ಭಾರತದ ರಾಜಕೀಯ ಆಕಾಂಕ್ಷೆಗಳು ಈಡೇರಿದ ಮೇಲೆ, ಫೆಡರಲ್ ನ್ಯಾಯಾಲಯಕ್ಕೆ ಅತ್ಯುಚ್ಚ ನ್ಯಾಯಾಲಯಕ್ಕೆ ಸಲ್ಲಬೇಕಾದ ಅಧಿಕಾರ ಮತ್ತು ಅಧಿಕಾರ ವ್ಯಾಪ್ತಿಯನ್ನು ನೀಡುವ ಪ್ರಶ್ನೆ ಅಗ್ರಸ್ಥಾನ ಪಡೆಯಿತು. ಆದರಂತೆ, ಮೊದಲ ಹೆಜ್ಜೆಯಾಗಿ, ಯಾವುದೇ ಸಿವಿಲ್ ಪ್ರಕರಣದಲ್ಲಿ ಉಚ್ಚ ನ್ಯಾಯಾಲಯ ಕೊಟ್ಟ ತೀರ್ಪು, ಡಿಕ್ರಿ ಅಥವಾ ಅಂತಿಮ ಆದೇಶದಿಂದ ಪ್ರೀವಿ ಕೌನ್ಸಿಲ್‌ಗೆ ನೇರವಾಗಿ ತೆಗೆದುಕೊಂಡು ಹೋಗಬಹುದಾಗಿದ್ದ ಮೇಲ್ಮನವಿಗಳನ್ನು 1.4.1948ರ ನಂತರ ಪೆಡರಲ್ ನ್ಯಾಯಾಲಯದ ಮೇಲ್ಮನವಿ ಅಧಿಕಾರದ ವ್ಯಾಪ್ತಿಗೊಳಪಡಿಸಿ, ವ್ಯಾಪ್ತಿಯನ್ನು ವಿಸ್ತರಿಸಲಾಯಿತು. ಸೆಪ್ಟೆಂಬರ್ 1949ರಲ್ಲಿ, ಸಂವಿಧಾನ ಸಭೆಯು 1949ರ ಅಧಿನಿಯಮ 5ರಲ್ಲಿ ಚಕ್ರವರ್ತಿಯ ನ್ಯಾಯಮಂಡಲಿಗಿದ್ದ (ಪ್ರೀವಿ ಕೌನ್ಸಿಲ್) ಎಲ್ಲ ಮೇಲ್ಮನವಿ ಅಧಿಕಾರ ವ್ಯಾಪ್ತಿಯನ್ನು (ಅಂದರೆ, ಅಪರಾಧಿಕ ವಿಷಯಗಳಿಗೆ ಸೇರಿದ ಅರ್ಜಿಗಳು ಮತ್ತು ಮೇಲ್ಮನವಿಗಳು ಸೇರಿದಂತೆ, ಭಾರತದಲ್ಲಿನ ಯಾವುದೇ

ನ್ಯಾಯಾಲಯ ಅಥವಾ ನ್ಯಾಯಾಧಿಕರಣ ನೀಡಿದ ಯಾವುದೇ ತೀರ್ಪು, ಡಿಕ್ರಿ ಅಥವಾ ಅಂತಿಮ ಆದೇಶದಿಂದ ಉದ್ಭವಿಸಿದ ಯಾವುದೇ ಮೇಲ್ಮನವಿ ಅರ್ಜಿಗಳನ್ನು ಕೇಳುವ ಅಧಿಕಾರ ವ್ಯಾಪ್ತಿಯನ್ನು) ಸಂಪೂರ್ಣವಾಗಿ ರದ್ದು ಮಾಡಿತು. ಈ ಅಧಿಕಾರ ವ್ಯಾಪ್ತಿಯನ್ನು ಫೆಡರಲ್ ನ್ಯಾಯಾಲಯಕ್ಕೆ ಕೊಡಮಾಡಲಾಗಿ, ಈ ನ್ಯಾಯಾಲಯ ಎಲ್ಲ ಉದ್ದೇಶಗಳಿಗಾಗಿ ಭಾರತದ ಅಂತಿಮ ನ್ಯಾಯಾಲಯವಾಯಿತು. ಇದರಿಂದಾಗಿ ರಾಜನೇ ಎಲ್ಲ ವಿಷಯಗಳಿಗೂ ಕಟ್ಟಕಡೆಯ ನ್ಯಾಯ ಮೂರ್ತಿಯೆಂಬ ಕಲ್ಪನೆ ಪರಿಣಾಮಕಾರಿಯಾಗಿ ಅವಸಾನ ಹೊಂದಿತು.

# 1

# ನ್ಯಾಯಾಂಗ ಈ ದಿನಗಳಲ್ಲಿ

## ಅಪರಾಧಿಕ ನ್ಯಾಯಾಲಯಗಳು
## ಶ್ರೇಣಿ ಮತ್ತು ಪ್ರಕ್ರಿಯೆ

ಅಪರಾಧಗಳೆಂದು ಕರೆಯಬಹುದಾದ ಕೃತ್ಯಗಳಿಗೆ ಬಹುಮುಂಚೆ ವಿಧಿಸುತ್ತಿದ್ದ 'ಶಿಕ್ಷೆ'ಯ ಪ್ರಾಕಾರ ಖಾಸಗಿ ಪ್ರತೀಕಾರವೇ ಆಗಿತ್ತು. ಪೆಟ್ಟಿಗಾಗಿ ಪೆಟ್ಟುಕೊಡುವುದು, ಪೆಟ್ಟು ತಿಂದವರ ಅಥವಾ ಅವರ ಬದುಕುಳಿದ ಬಂಧುಗಳ ವೈಯಕ್ತಿಕ ವಿಷಯವೆಂದು ಪರಿಗಣಿಸಲ್ಪಟ್ಟು, ಸಮಾಜ ಇದರಲ್ಲಿ ತಲೆಹಾಕುತ್ತಿರಲಿಲ್ಲ. ಖಾಸಗಿ ಪ್ರತೀಕಾರ ಅನೇಕ ವೇಳೆ, ಕುಟುಂಬಗಳ ಕುಲಗಳ ಮತ್ತು ಬುಡಕಟ್ಟುಗಳ ನಡುವೆ ರಕ್ತ ಕಲಹಗಳಿಗೆ ನಾಂದಿಯಾಗುತ್ತಿತ್ತು. ತತ್ಪರಿಣಾಮವಾಗಿ ಸಂಭವಿಸುತ್ತಿದ್ದ ಪ್ರಾಣ ಹಾನಿ ಮತ್ತು ಧನಹಾನಿ ಕೆಲವು ವೇಳೆ ಅಗಾಧವಾಗಿರುತ್ತಿದ್ದದ್ದನ್ನು ಮನಗಂಡ ಸಮಾಜ, ಖಾಸಗಿ ಪ್ರತೀಕಾರಕ್ಕೆ ಕ್ರಮೇಣವಾಗಿ ಕಡಿವಾಣವನ್ನು ಹಾಕಿ, ಅಪರಾಧಿಗಳನ್ನು ವಿಚಾರಣೆಗೆ ಗುರಿಪಡಿಸಿ, ಅಧಿಕೃತವಾದ ದಂಡ/ಶಿಕ್ಷೆಯನ್ನು ವಿಧಿಸುತ್ತಿದ್ದಿತು. ಹೇಗಾದರೂ, ಕಲಹಗಳು, ಅದರಲ್ಲೂ ಬೇರೆ ಬೇರೆ ಪಂಗಡಗಳಿಗೆ ಸೇರಿದ ಶಕ್ತಿಶಾಲಿ ಕುಟುಂಬಗಳ ನಡುವಿನ ಕಲಹಗಳು ಎಂದಿನಂತೆ ಯುದ್ಧ ಪ್ರಾರಂಭವಾಗುವುದಕ್ಕೆ ಒಂದು ಕಾರಣವಾಗುತ್ತಿತ್ತು.

ಧಾರ್ಮಿಕ ನಾಯಕರುಗಳು ಅನೇಕ ಬಾರಿ ಜಗಳಗಳಲ್ಲಿ ಮಧ್ಯಸ್ಥಿಕೆದಾರರ ಹಾಗೂ ಶಿಕ್ಷೆ ವಿಧಿಸುವವರ ಪಾತ್ರವನ್ನು ವಹಿಸುತ್ತಿದ್ದರು. ಜನಗಳಲ್ಲಿ ದೈವಭಯ ಮತ್ತು ಅತೀಂದ್ರಿಯ ಶಕ್ತಿಗಳ ಭಯ ಗಣನೀಯವಾಗಿದ್ದು, ಯಕ್ಷಿಣಿ ಮತ್ತು ಧಾರ್ಮಿಕ ಕಟ್ಟುಪಾಡುಗಳು ಪರಿಣಾಮಕಾರಿಯಾದ ಸಾಮಾಜಿಕ/ರಾಜಕೀಯ ಅಸ್ತ್ರಗಳಾಗಿ ಪರಿಣಮಿಸಿದ್ದು ದೈವಿಕ ಪ್ರತೀಕಾರದ ಭಯವನ್ನು ಅಪರಾಧಿಗಳಲ್ಲಿ ಹುಟ್ಟಿಸಲಾಗುತ್ತಿತ್ತು. ಸಮಾಜಕ್ಕೆ ಆಘಾತವನ್ನುಂಟುಮಾಡುತ್ತಿದ್ದ ಕೆಲಸಗಳು ದೈವಕ್ಕೆ ಮಾಡಿದ ಅಪಚಾರವೆಂದು ಪರಿಗಣಿಸಲಾಗುತ್ತಿತ್ತು; ಅಲ್ಲದೆ, ಪಿಡುಗುಗಳು, ಭೂಕಂಪಗಳು ಮತ್ತಿತರ ವಿಪತ್ತುಗಳನ್ನು ದೈವಿಕ ಕೋಪದ ಪರಿಣಾಮಗಳೆಂದು ಭಾವಿಸಲಾಗಿತ್ತು. ಅಪರಾಧಿಗಳಿಗೆ ಕೊಟ್ಟ ಶಿಕ್ಷೆ ಅವರು ಎಸಗಿದ ಅಪರಾಧಗಳಿಗೆ ತಕ್ಕುದಾಗಿದ್ದರೆ, ದೇವರ ಕೋಪವು ಶಮನವಾಗುತ್ತದೆಂದು ತಿಳಿಯಲಾಗಿತ್ತು. "ಕಣ್ಣಿಗೆ ಕಣ್ಣು; ಹಲ್ಲಿಗೆ ಹಲ್ಲು" ಎಂಬ ಪರಿಕಲ್ಪನೆಯ ಮೂಲವೇ ಇದಾಗಿತ್ತು.

ಅಪರಾಧ ಪ್ರಜ್ಞೆ ಮತ್ತು ಪಾಪ ಪ್ರಜ್ಞೆ ಒಂದರ ಮೇಲೊಂದು ಪರಸ್ಪರ ಪ್ರಸರಿಸಿದುದು ಈ ಸಮಯದಲ್ಲೇ ಎಂದು ಹೇಳಬಹುದು.

ಇದಕ್ಕೆ ಮೇಲೆ ರಾಜ್ಯದ ಪ್ರತೀಕಾರ ಎಂಬುದು ಸಹಾ ಇತ್ತು. ವೈಯಕ್ತಿಕ ವಿರೋಧಿ ನಡವಳಿಕೆ ಅಥವಾ ಸಮಾಜ ವಿರೋಧಿ ನಡವಳಿಕೆಗಳು ದೈವಕ್ಕೆ ಅಪಚಾರ ಮಾಡುವುದೂ ಅಲ್ಲದೆ ರಾಜಕೀಯ ಭದ್ರತೆಯ ಮೇಲೂ ಹಾಗೂ ಸಾಮಾಜಿಕ ಗುಂಪಿನ ಕ್ಷೇಮಾಭಿವೃದ್ಧಿಯ ಮೇಲೂ ದುಷ್ಪರಿಣಾಮ ಬೀರುವುದೆಂದು ತಿಳಿಯಲಾಗಿತ್ತು. ತಪ್ಪುಮಾಡಿದವರನ್ನು ಶಿಕ್ಷಿಸಲು ರಾಜ್ಯವು, ದೇವರು/ದೇವಸ್ಥಾನಗಳಿಂದ ಸ್ವತಂತ್ರವಾಗಿ ವರ್ತಿಸುತ್ತಿತ್ತು. ತನಗೆ ಆದ ಅನ್ಯಾಯಕ್ಕೆ ಪರಿಹಾರವನ್ನು ಸಂಬಂಧಪಟ್ಟ ಅಧಿಕಾರಿಗಳಿಂದಲೇ ತೊಂದರೆಗೊಳಗಾದವನು ಪಡೆಯಬೇಕಾದುದೇ ಆಧುನಿಕ ನ್ಯಾಯ ವ್ಯವಸ್ಥೆ. ಈ ವ್ಯವಸ್ಥೆಯ ಉಗಮವೇ ರಾಜ್ಯದ ಪ್ರತೀಕಾರ ಮನೋಭಾವ.

ಬ್ರಾಹ್ಮಣ ಯುಗದ ಭಾರತದಲ್ಲಿ, ಚರಿತ್ರೆಯ ಅತ್ಯಂತ ನಿರಂಕುಶ ಪುರೋಹಿತಶಾಹಿ ರಾಜ್ಯಗಳೊಂದರಲ್ಲಿ, ಮನುಸಂಹಿತೆಯ ರಚನೆಯಾಯಿತು. ಇದು ಕ್ರಿ.ಪೂ. 13ನೇ ಶತಮಾನದಿಂದ ಕ್ರಿ.ಪೂ. 9ನೇ ಶತಮಾನದ ಮಧ್ಯದಲ್ಲಿ ಇದ್ದಿರಬಹುದೆಂದು ನಂಬಲಾಗಿದೆ. ಆಪಾದಿತನ ಮತ್ತು ಸಾಕ್ಷಿಗಳ ಭಂಗಿ, ಮುಖಭಾವ ಮತ್ತು ಧ್ವನಿ ಹಾಗೂ ಮಾತಿನ ಜೋಡಣೆಗಳಲ್ಲಿ ಆಗುವ ಬದಲಾವಣೆ ಇವುಗಳನ್ನು ಅಭ್ಯಸಿಸಿ ಅವರ ಹೃದಯಾಂತರಾಳವನ್ನು ಶೋಧನೆ ಮಾಡುವುದು ನ್ಯಾಯಾಧೀಶರುಗಳ ಕಾರ್ಯಭಾಗವೆಂದು ಮನುಸಂಹಿತೆ ಸೂಚಿಸುತ್ತದೆ. ಹೀಗೆ, ನ್ಯಾಯಿಕ ಮನಃಶಾಸ್ತ್ರವನ್ನು ಗಣನೆಗೆ ತೆಗೆದುಕೊಳ್ಳುವುದರಲ್ಲಿ ಇದೇ ಮೊಟ್ಟಮೊದಲ ಸಂಹಿತೆಯಾಯಿತು; ಈ ತತ್ವವನ್ನೇ ಇಂದಿನ ದಂಡಸಂಹಿತೆಯಲ್ಲೂ ಮತ್ತು ಅಪರಾಧಿಕ ನ್ಯಾಯಾಲಯಗಳಲ್ಲೂ ಸಾವು ಕಾಣಬಹುದಾಗಿದೆ.

## ಭಾರತ ದಂಡ ಸಂಹಿತೆ 1860

ಭಾರತದ ಸಾರಭೂತವಾದ ಅಪರಾಧಿಕ ಕಾನೂನನ್ನು ಭಾರತ ದಂಡಸಂಹಿತೆ 1860ರಲ್ಲೂ ಮತ್ತು ಪ್ರಕ್ರಿಯೆ ಕಾನೂನನ್ನು ದಂಡ ಪ್ರಕ್ರಿಯಾ ಸಂಹಿತೆ 1898ರಲ್ಲೂ (1973ರಲ್ಲಿ ತಿದ್ದುಪಡಿಯಾದಂತೆ) ಕ್ರೋಢೀಕರಿಸಲಾಗಿದೆ. ದಂಡಸಂಹಿತೆ, ವಿವಿಧ ಅಪರಾಧಗಳನ್ನು ನಿಖರವಾಗಿ ವಿಚಾರಮಾಡುತ್ತಾ ಯಾವ ಕೃತ್ಯಗಳು ಅಪರಾಧವಾಗುತ್ತವೆ, ಯಾವ ಕೃತ್ಯಗಳು ಅಪರಾಧದ ಆಪಾದನೆಗೆ ಸಮರ್ಥನೆ ಅಥವಾ ಸಕಾರಣವನ್ನು ಒದಗಿಸುತ್ತದೆ ಎಂಬುದನ್ನು ವಿವರಿಸುತ್ತದೆ. ದಂಡಸಂಹಿತೆಯು ಸಾರಭೂತವಾದ ಕಾನೂನಾಗಿದ್ದು, ದಂಡ ಪ್ರಕ್ರಿಯಾ ಸಂಹಿತೆಯು ಪ್ರಕ್ರಿಯೆಗಳನ್ನು ಒಳಗೊಂಡಿದೆ. ದಂಡಸಂಹಿತೆಯಲ್ಲಾಗಲೀ ಅಥವಾ ಇನ್ನಾವುದೇ ಅಧಿನಿಯಮದಲ್ಲಾಗಲೀ ಹೆಸರಿಸಿರುವ ಅಪರಾಧಗಳ ಪತ್ತೆ, ತನಿಖೆ, ವಿಚಾರಣೆ ಮತ್ತಿತರ ಕೆಲಸಗಳು ಪ್ರಕ್ರಿಯಾಸಂಹಿತೆಯಲ್ಲಿ ವಿಧಿಸಿರುವ ವಿಧಾನಗಳ ಪ್ರಕಾರವೇ ನಡೆಯಬೇಕು.

ದಂಡಸಂಹಿತೆಯಲ್ಲಿ ವಿವರಿಸಿರುವ ಅಪರಾಧಗಳನ್ನು ಅಪರಾಧಿಕ

ನ್ಯಾಯಾಲಯಗಳು ವಿಚಾರಣೆಮಾಡುತ್ತವೆ. ಭಾರತದಲ್ಲಿರುವ ಯಾವನೇ ವ್ಯಕ್ತಿ ಈ ಅಪರಾಧಗಳನ್ನು ಮಾಡಿದುದೇ ಆದರೆ, ದಂಡ ಪ್ರಕ್ರಿಯಾಸಂಹಿತೆಯ ರೀತ್ಯಾ ವಿಚಾರಣೆಗೊಳಪಟ್ಟು ದಂಡಸಂಹಿತೆಯಲ್ಲಿ ವಿಧಿಸಿರುವ ಶಿಕ್ಷೆಗೆ ಒಳಗಾಗುತ್ತಾನೆ. ಭಾರತದ ಯಾವುದೇ ಭಾಗದಲ್ಲಿ ಎಸಗಿದ ಅಪರಾಧ ಅಥವಾ ಮಾಡಿದ ತಪ್ಪಿಗೆ, ಜಾತಿ, ಧರ್ಮ, ದರ್ಜೆಗಳ ಭೇದಭಾವವಿಲ್ಲದೆ ಪ್ರತಿಯೊಬ್ಬ ವ್ಯಕ್ತಿಯೂ ಶಿಕ್ಷೆಗೊಳಗಾಗುತ್ತಾನೆ. ಭಾರತದ ನೆಲದಲ್ಲಿ ಯಾವನೇ ವಿದೇಶದ ಪ್ರಜೆ ಅಪರಾಧ ಮಾಡಿದರೆ, ಅವನನ್ನು ವಿಚಾರಣೆಗೊಳಪಡಿಸಿ, ತಪ್ಪಿತಸ್ತನೆಂದು ಕಂಡುಬಂದಲ್ಲಿ ಶಿಕ್ಷಿಸಬಹುದು. ಆದರೆ ಇದಕ್ಕೆ ಈ ಕೆಳಗೆ ಕಂಡ ವಿನಾಯಿತಿಗಳು ಇವೆ:

i ವಿದೇಶಿ ಸಾರ್ವಭೌಮರು

ii ರಾಯಭಾರಿಗಳು ಮತ್ತು ಉನ್ಮುಕ್ತಿ ಕೊಡಲಾಗಿರುವ ರಾಜತಾಂತ್ರಿಕ ವರ್ಗದ ಸದಸ್ಯರುಗಳು

iii ಅನ್ಯ ದೇಶೀಯ ಶತ್ರುಗಳು

iv ವಿದೇಶೀ ಸೈನ್ಯಗಳು

v ಸಮರ ನೌಕೆಗಳು ಮತ್ತು

vi ಸಂವಿಧಾನದ ಅನುಚ್ಛೇದ 361ರ ಕೆಳಗೆ, ರಾಷ್ಟ್ರಾಧ್ಯಕ್ಷರು ಮತ್ತು ರಾಜ್ಯಪಾಲರುಗಳು

ದಂಡಸಂಹಿತೆಯಲ್ಲಿ ಕಾಣಿಸಿರುವ ಅಪರಾಧಗಳಲ್ಲದೆ, ಲೋಕಸಭೆ ಮತ್ತು ರಾಜ್ಯ ವಿಧಾನಸಭೆಗಳು ಅನುಮೋದಿಸಿರುವ ವಿವಿಧ ಅಧಿನಿಯಮಗಳ ಪ್ರಕಾರ ಶಿಕ್ಷಾರ್ಹವಾದ ಇತರ ಅಪರಾಧಗಳೂ ಇವೆ. ಈ ಅಪರಾಧಗಳ ವಿಚಾರಣೆ ಮಾಡಲು ವಿಶೇಷ ನ್ಯಾಯಾಲಯಗಳು ರಚನೆಯಾಗಿಲ್ಲದಿದ್ದರೆ, ಮತ್ತು ಆ ಅಪರಾಧಗಳಿಗೆ ವಿಧಿಸಬಹುದಾದ ಶಿಕ್ಷೆ ಕಾರಾಗೃಹವಾಸ ಮತ್ತು ದಂಡವಾಗಿದ್ದರೆ, ಅಪರಾಧಿಕ ನ್ಯಾಯಾಲಯಗಳು ಮಾತ್ರ ಇವುಗಳನ್ನು ವಿಚಾರಣೆ ಮಾಡಬಹುದು. ವಿದೇಶಿ ವಿನಿಮಯ ನಿಯಂತ್ರಣ ಅಧಿನಿಯಮ ಆದಾಯ ತೆರಿಗೆ ಅಧಿನಿಯಮ, ಸೀಮಾ ಶುಲ್ಕ ಅಧಿನಿಯಮ ಕೇಂದ್ರ ಅಬ್ಕಾರಿ ಮತ್ತು ಉಪ್ಪು ಅಧಿನಿಯಮ, ಆಹಾರ ಕಲಬೇರಿಕೆ ಅಧಿನಿಯಮ, ಪೊಲೀಸ್ ಅಧಿನಿಯಮ, ಕಂಪನಿಗಳ ಅಧಿನಿಯಮ ಇತ್ಯಾದಿ ಅಧಿನಿಯಮಗಳ ಕೆಳಗೆ ಬರುವ ಅಪರಾಧಗಳನ್ನು ಅಪರಾಧಿಕ ನ್ಯಾಯಾಲಯಗಳು ದಂಡ ಪ್ರಕ್ರಿಯಾ ಸಂಹಿತೆಯಲ್ಲಿ ವಿಧಿಸಿರುವ ನಿಯಮಗಳ ಪ್ರಕಾರ ವಿಚಾರಣೆ ಮಾಡುತ್ತವೆ.

ಭಾರತ ದಂಡ ಸಂಹಿತೆ, ವಿವಿಧ ಶಿರೋನಾಮೆಗಳ ಕೆಳಗೆ ವಿವಿಧ ಅಪರಾಧಗಳನ್ನು ಪಟ್ಟಿಮಾಡಿದೆ. ಉದಾಹರಣೆಗೆ:

i ಅಪರಾಧ ಉದ್ದೇಶಿತ ಒಳಸಂಚು

ii ದೇಶದ್ರೋಹಕ್ಕೆ ಸಂಬಂಧಿಸಿದ ಅಪರಾಧಗಳು

iii ಭೂಸೇನೆ, ನೌಕಾಸೇನೆ ಮತ್ತು ವಾಯುಸೇನಾ ಪಡೆಗಳಿಗೆ ಸಂಬಂಧಿಸಿದ ಅಪರಾಧಗಳು

iv ಸಾರ್ವಜನಿಕ ಶಾಂತಿಗೆ, ನೆಮ್ಮದಿಗೆ ಭಂಗವನ್ನುಂಟು ಮಾಡುವ ಅಪರಾಧಗಳು

v ಸರ್ಕಾರಿ ನೌಕರರು ಮಾಡಿದ ಅಥವಾ ಅವರಿಗೆ ಸಂಬಂಧಿಸಿದ ಅಪರಾಧಗಳು

vi ಚುನಾವಣೆಗಳಿಗೆ ಸಂಬಂಧಿಸಿದ ಅಪರಾಧಗಳು

vii ಸರ್ಕಾರಿ ಅಧಿಕಾರಿಗಳ ನ್ಯಾಯದತ್ತ ಅಧಿಕಾರವನ್ನು ತಿರಸ್ಕಾರ ಮಾಡಿದ ಅಪರಾಧಗಳು.

viii ಸುಳ್ಳು ಸಾಕ್ಷ್ಯ ಮತ್ತು ನ್ಯಾಯ ವಿತರಣೆಗೆ ಅಡಚಣೆ ಮಾಡಿದುದಕ್ಕೆ ಸಂಬಂಧಿಸಿದ ಅಪರಾಧಗಳು.

ix ನಾಣ್ಯಗಳು ಮತ್ತು ಮುದ್ರಾಂಕಗಳಿಗೆ ಸಂಬಂಧಿಸಿದ ಅಪರಾಧಗಳು.

x ತೂಕ ಮತ್ತು ಅಳತೆಗೆ ಸಂಬಂಧಿಸಿದ ಅಪರಾಧಗಳು.

xi ಸಾರ್ವಜನಿಕ ಆರೋಗ್ಯ, ಕ್ಷೇಮ, ಸೌಕರ್ಯ, ಶೀಲ ಮತ್ತು ನೀತಿಗೆ ಸಂಬಂಧಿಸಿದ ಅಪರಾಧಗಳು.

xii ಧರ್ಮಕ್ಕೆ ಸಂಬಂಧಿಸಿದ ಅಪರಾಧಗಳು

xiii ಮಾನವ ಶರೀರಕ್ಕೆ ಸಂಬಂಧಿಸಿದ ಹಾಗೂ ಆಘಾತವನ್ನುಂಟುಮಾಡಿದ ಅಪರಾಧಗಳು.

xiv ಆಸ್ತಿಗಳಿಗೆ ಸಂಬಂಧಿಸಿದ ಅಪರಾಧಗಳು

xv ದಸ್ತಾವೇಜುಗಳು ಮತ್ತು ಆಸ್ತಿಗಳ ಗುರುತಿನ ಚಿಹ್ನೆಗೆ ಸಂಬಂಧಿಸಿದ ಅಪರಾಧಗಳು

xvi ಸೇವಾ ಒಪ್ಪಂದಗಳನ್ನು ಉದ್ದೇಶಪೂರ್ವಕವಾಗಿ ಒಡೆಯುವುದಕ್ಕೆ ಸಂಬಂಧಿಸಿದ ಅಪರಾಧಗಳು.

xvii ವಿವಾಹಕ್ಕೆ ಸಂಬಂಧಿಸಿದ ಅಪರಾಧಗಳು.

xviii ಪತಿ ಅಥವಾ ಪತಿಯ ಸಂಬಂಧಿಕರು (ಪತ್ನಿಗೆ ಕೊಡುವ) ಮಾನಸಿಕ/ಶಾರೀರಿಕ ಹಿಂಸೆ

xix ಮಾನಭಂಗ

xx ಅಪರಾಧ ಉದ್ದೇಶಿತ ಬಲೋದ್ಬಂಧ, ಹೀಯಾಳಿಕೆ ಮತ್ತು ಕಿರಿಕಿರಿ

ಈ ಅಪರಾಧಗಳ ಪಟ್ಟಿಗೆ ಸೇರ್ಪಡೆಮಾಡಲು . ಅವನ್ನು ಬದಲಾಯಿಸಲು/ತಿದ್ದುಪಡಿಮಾಡಲು, ಹಾಗೂ, ದಂಡಸಂಹಿತೆಯ ಕೆಳಗಾಗಲಿ ಅಥವಾ ಬೇರೆ ಯಾವ ಕಾಯಿದೆಯ ಕೆಳಗಾಗಲೀ ಹೊಸ ಅಪರಾಧವನ್ನು ಹೆಸರಿಸುವುದಕ್ಕೇ ಆಗಲಿ ಲೋಕಸಭೆಗೆ ಅಧಿಕಾರವಿದೆ. ಹೊಸ ಅಪರಾಧವನ್ನು

ಹೆಸರಿಸಿದಾಗ, ಅದು ಪೂರ್ವಾನ್ವಯವಾಗಿ ಜಾರಿಗೆ ಬರುವುದಿಲ್ಲ. ಜಾರಿಯ ನಂತರ ಅಪರಾಧವಾಗುವ ಯಾವುದೇ ಕ್ರಿಯೆ, ಜಾರಿಗೆ ಮುಂಚೆ ಅಪರಾಧವಾಗುವುದಿಲ್ಲ, ಅದಕ್ಕೆ ಶಿಕ್ಷೆಯೂ ಇಲ್ಲ.

ಭಾರತ ದಂಡಸಂಹಿತೆಯು ವಿವಿಧ ನ್ಯಾಯಾಲಯಗಳು ವಿಧಿಸಬಹುದಾದ ಶಿಕ್ಷೆಗಳ ನಮೂನೆಗಳನ್ನು ಕೊಡುತ್ತದೆ. ಅವು ಯಾವುವೆಂದರೆ:

i ಮರಣ ದಂಡನೆ

ii ವಿವಿಧ ಅವಧಿಗಳವರೆಗೆ ಜೈಲು ಶಿಕ್ಷೆಯಿಂದ ಹಿಡಿದು ಜೀವಾವಧಿ ಜೈಲು ಶಿಕ್ಷೆಯವರೆಗೆ. ಜೈಲು ಶಿಕ್ಷೆಯಲ್ಲಿ ಎರಡು ಬಗೆಗಳು ಇವೆ.

ಅ) ಕಠಿಣ ಶಿಕ್ಷೆ ಅಂದರೆ ದೈಹಿಕ ದುಡಿಮೆ ಸೇರಿದ್ದು.

ಆ) ಸಾದಾ ಶಿಕ್ಷೆ

iii ಆಸ್ತಿಯ ಮುಟ್ಟುಗೋಲು

iv ದಂಡಗಳು

ಮಾಡಿದ ಅಪರಾಧದ ತೀವ್ರತೆಯನ್ನು ಪರಿಗಣಿಸಿ ಮೇಲ್ಕಂಡ ಯಾವುದಾದರೊಂದು ಶಿಕ್ಷೆಯನ್ನಾಗಲಿ, ಒಂದಕ್ಕಿಂತ ಹೆಚ್ಚು ಶಿಕ್ಷೆಯನ್ನಾಗಲೀ ನ್ಯಾಯಾಲಯಗಳು ವಿಧಿಸಬಹುದು. ಉದಾಹರಣೆಗೆ ಜೈಲು ಶಿಕ್ಷೆಯ ಜೊತೆಗೆ ದಂಡವೂ ಇರಬಹುದು, ಇಲ್ಲವೇ ವಿವಿಧ ಅಪರಾಧಗಳಿಗೆ ಬೇರೆ ಬೇರೆ ಅವಧಿಯ ಜೈಲು ಶಿಕ್ಷೆಯನ್ನು ವಿಧಿಸಿ, ಅವುಗಳನ್ನು ಏಕಕಾಲದಲ್ಲಿ ಅಥವಾ ಒಂದಾದ ನಂತರ ಒಂದನ್ನು ಅನುಭವಿಸಬೇಕೆಂದು ನಿರ್ದೇಶಿಸಬಹುದು.

## ದಂಡ ಪ್ರಕ್ರಿಯಾ ಸಂಹಿತೆ (1898) 1973ರಲ್ಲಿನ ತಿದ್ದುಪಡಿಯಂತೆ

ಬ್ರಿಟಿಷರ ಆಳ್ವಿಕೆಗೆ ಮುಂಚೆ, ಸಮಗ್ರ ಭಾರತದಲ್ಲಿ ಏಕರೂಪವಾದ ದಂಡಪ್ರಕ್ರಿಯೆ ಇರಲಿಲ್ಲ. ಮುಂಚಿನ ಪ್ರಾಂತಗಳಲ್ಲಿ ಪ್ರೆಸಿಡೆನ್ಸಿ ಪಟ್ಟಣಗಳಲ್ಲಿ, ಮತ್ತು ಸಂಸ್ಥಾನಗಳಲ್ಲಿ ಇದ್ದ ನ್ಯಾಯಾಲಯಗಳ ಪ್ರಕ್ರಿಯೆಗೆ ಮಾರ್ಗದರ್ಶನ ಮಾಡುವುದಕ್ಕೆಂದು, ತೀರ ಪ್ರಾರಂಭಾವಸ್ಥೆಯ ಬೇರೆ ಬೇರೆ ಅಧಿನಿಯಮಗಳಿದ್ದವು. 1882ರ ದಂಡ ಪ್ರಕ್ರಿಯಾ ಸಂಹಿತೆ ಮೊಟ್ಟಮೊದಲಬಾರಿಗೆ ಸಮಗ್ರ ಬ್ರಿಟಿಷ್ ಇಂಡಿಯಾಕ್ಕೆ ಏಕರೂಪವಾದ ಪ್ರಕ್ರಿಯೆ ಕಾನೂನನ್ನು ಕೊಟ್ಟಿತು. ತದನಂತರದ 1898ರ ಕಾಯಿದೆ ಇದಕ್ಕೆ ಪೂರಕವಾಯಿತು. ಈ ಸಂಹಿತೆಯನ್ನು ಕೊರತೆ ಕಂಡು ಬಂದಾಗಲೆಲ್ಲ ಕಾಲದಿಂದ ಕಾಲಕ್ಕೆ ತಿದ್ದುಪಡಿ ಮಾಡಲಾಯಿತು. ಈ ಕೊರತೆಯು ಭಾರತ ಸ್ವತಂತ್ರವಾಗಿ, ರಾಜರುಗಳ ಸಂಸ್ಥಾನಗಳು ಭಾರತ ಪ್ರಜಾಪ್ರಭುತ್ವದಲ್ಲಿ ವಿಲೀನವಾಗಿ ಹೋದಾಗ ಇನ್ನೂ ಹೆಚ್ಚಾಗಿ ಕಂಡುಬಂದಿತು.

ಕಾನೂನು ಆಯೋಗವು ಈ ಸಂಹಿತೆಯನ್ನು ಸವಿಸ್ತಾರವಾಗಿ ಅಭ್ಯಸಿಸಿ, 1969ನೇ ಇಸವಿ ಸೆಪ್ಟೆಂಬರ್ ತಿಂಗಳಿನಲ್ಲಿ ತನ್ನ 41ನೇ ವರದಿಯನ್ನು ಸಲ್ಲಿಸಿತು. ಈ ಸಂಹಿತೆಯು 1973ರಲ್ಲಿ ಸಂಪೂರ್ಣವಾಗಿ ತಿದ್ದುಪಡಿ ಮಾಡಲ್ಪಟ್ಟು ತಿದ್ದುಪಡಿಯಾದ

ಸಂಹಿತೆಯು 1974ನೇ ಇಸವಿ ಏಪ್ರಿಲ್ ತಿಂಗಳ ಮೊದಲನೇ ತಾರೀಖಿನಿಂದ (1.4.1974) ಜಾರಿಗೆ ಬಂದಿತು. ಈ ದಂಡ ಪ್ರಕ್ರಿಯಾ ಸಂಹಿತೆ ಸಾರಭೂತವಲ್ಲದ ಕಾನೂನಾಗಿದ್ದು, ಪ್ರಕ್ರಿಯಾ ನಿಯಮಗಳನ್ನೊಳಗೊಂಡ ಕಾನೂನಾಗಿದೆ. ಇದರ ಉದ್ದೇಶ, ಸಾರಭೂತವಾದ ಅಪರಾಧಿಕ ಕಾನೂನಿನ (ಉದಾ: ಭಾರತ ದಂಡಸಂಹಿತೆ) ಚೌಕಟ್ಟಿನೊಳಗೆ ಬರುವ ಅಪರಾಧಗಳಿಗೆ ಶಿಕ್ಷೆಯನ್ನು ವಿಧಿಸುವ ಸಾಧನವನ್ನು ಒದಗಿಸುವುದೇ ಆಗಿದೆ. ವಾಸ್ತವವಾಗಿ ಈ ಸಂಹಿತೆಯನ್ನು ಭಾರತ ಸಾಕ್ಷ್ಯ ಅಧಿನಿಯಮದೊಟ್ಟಿಗೆ ಓದಿಕೊಳ್ಳಬೇಕು. ಈ ಸಂಹಿತೆಯು ಒದಗಿಸಿರುವ ಸಾಧನ, ಭಾರತ ದಂಡಸಂಹಿತೆಯಲ್ಲದೆ ಬೇರೆ ಅಧಿನಿಯಮಗಳ ಕೆಳಗೆ ಬರುವ ಅಪರಾಧಗಳಿಗೂ ಅನ್ವಯವಾಗುತ್ತದೆ. ಈ ಸಂಹಿತೆ, ಕೇವಲ ಪ್ರಕ್ರಿಯೆಯ ಕಾನೂನು ಮಾತ್ರವಲ್ಲ. ಆದರ ಕೆಲವು ವಿಧಾಯಕಗಳು ಸಾರಭೂತವಾದ ಕಾನೂನಿನಂತೆಯೇ ಇವೆ. ಉದಾಹರಣೆಗೆ, ಅಪರಾಧಗಳನ್ನು ತಡೆಗಟ್ಟುವ ವಿಧಾಯಕ, ಮಕ್ಕಳುಗಳು, ಹೆಂಡತಿ, ತಾಯಿ ಮತ್ತು ತಂದೆ ಇವರನ್ನು ಪೋಷಿಸಲು, 19ನೇ ಅಧ್ಯಾಯದ 125ನೇ ಖಂಡದಲ್ಲಿರುವ ವಿಧಾಯಕ, ಇವುಗಳನ್ನು ಹೆಸರಿಸಬಹುದು. ದಂಡಪ್ರಕ್ರಿಯಾ ಸಂಹಿತೆಯ ವ್ಯಾಪ್ತಿಗೆ ಬರುವ ಕೆಲವು ಮುಖ್ಯವಾದ ಕ್ಷೇತ್ರಗಳು ಯಾವುವೆಂದರೆ:

i. ಅಪರಾಧಿಕ ನ್ಯಾಯಾಲಯಗಳ ಹಾಗೂ ಸಂಬಂಧಿಸಿದ ಕಚೇರಿಗಳ ರಚನೆ

ii. ನ್ಯಾಯಾಲಯಗಳ ಅಧಿಕಾರಗಳು

iii. ವ್ಯಕ್ತಿಗಳ ಬಂಧನ

iv. ಆಪಾದಿತನು ಮತ್ತು ಸಾಕ್ಷಿಗಳು ನ್ಯಾಯಾಲಯದಲ್ಲಿ ಹಾಜರಾಗುವಂತೆ ಒತ್ತಾಯಿಸಲು ಇರುವ ಕ್ರಮ

v. ದೋಶಾರೋಪ ಹೊರಿಸುವುದು.

vi. ವಿಚಾರಣೆಗೆ ಗುರಿಮಾಡುವ ನಡವಳಿಕೆಗಳು

vii. ದಂಡಾಧಿಕಾರಿಗಳ ಮುಂದೆ ವಿಚಾರಣೆ

viii. ಸತ್ರ ನ್ಯಾಯಾಲಯಗಳು

ix. ಸಂಕ್ಷಿಪ್ತ ವಿಚಾರಣೆಗಳು

x. ಮೇಲ್ಮನವಿಗಳು ಇತ್ಯಾದಿ

## ನಮ್ಮ ಇಂದಿನ ಅಪರಾಧಿಕ ನ್ಯಾಯಾಲಯಗಳು

ನಮ್ಮ ಇಂದಿನ ನ್ಯಾಯಾಲಯಗಳು, ಶಾಸನ ಸಭೆಗಳು ರೂಪಿಸಿದ ಕಾನೂನಿನಿಂದ ಅಸ್ತಿತ್ವಕ್ಕೆ ಬಂದಿವೆ. ಅಂದರೆ ಅವುಗಳ ಅಂಗರಚನೆ, ನಿರ್ವಹಿಸುವ ಕೆಲಸಗಳು, ಅಧಿಕಾರ ವ್ಯಾಪ್ತಿ ಈ ಕಾನೂನಿನ ವ್ಯವಸ್ಥೆಗೊಳಪಟ್ಟಿವೆ. ಅತಿ ಕೆಳಗಿನಿಂದ ಪ್ರಾರಂಭಿಸಿ ಅತ್ಯುನ್ನತ ಅಪರಾಧಿಕ ನ್ಯಾಯಾಲಯಗಳ ಸ್ಥಾಪನೆಗೆ ಸಂಬಂಧಿಸಿದ ವಿಧಾಯಕಗಳು ದಂಡ ಪ್ರಕ್ರಿಯಾ ಸಂಹಿತೆಯಲ್ಲಿವೆ. ಹೀಗೆಯೇ ವ್ಯವಹಾರ ಪ್ರಕ್ರಿಯಾ ಸಂಹಿತೆಯು

ವ್ಯವಹಾರ ನ್ಯಾಯಾಲಯಗಳ ಸ್ಥಾಪನೆಗೆ ಸಂಬಂಧಿಸಿದ ವಿಧಾಯಕಗಳನ್ನು ಒಳಗೊಂಡಿದೆ.

ನ್ಯಾಯಪರಿಪಾಲನೆಯ ಉದ್ದೇಶಕ್ಕಾಗಿ, ಎರಡು ಜಾತಿಯ ಪ್ರಕರಣಗಳನ್ನು ಸ್ಪಷ್ಟವಾಗಿ ಗುರುತಿಸಲಾಗಿದೆ. ಹೀಗಾಗಿ ಕಾನೂನನ್ನು ವ್ಯವಹಾರಿಕ ಮತ್ತು ಅಪರಾಧಿಕ ಎಂದು ವಿಭಾಗ ಮಾಡಿರುವುದು, ಈ ಎರಡು ಜಾತಿಗಳನ್ನು ವಿವರಿಸಲು ನೆರವಾಗುತ್ತದೆ. ವ್ಯವಹಾರ ಪ್ರಕರಣಗಳನ್ನು ವ್ಯಾವಹಾರಿಕ ನ್ಯಾಯಾಲಯಗಳೆಂದು ತಿಳಿಯಲ್ಪಟ್ಟಿರುವ ಶ್ರೇಣೀಕೃತ ನ್ಯಾಯಾಲಯಗಳು ವಿಚಾರಣೆ ಮಾಡುತ್ತವೆ. ಮತ್ತು ಅಪರಾಧಿಕ ಪ್ರಕರಣಗಳನ್ನು ಅಪರಾಧಿಕ ನ್ಯಾಯಾಲಯಗಳೆಂದು ತಿಳಿಯಲ್ಪಟ್ಟಿರುವ ನ್ಯಾಯಾಲಯಗಳು ವಿಚಾರಣೆ ಮಾಡುತ್ತವೆ.* ಇವುಗಳ ವಿವರಣೆ ಎಲ್ಲೂ ಕಂಡುಬರುವುದಿಲ್ಲವಾದರೂ ಇವೆರಡರ ನಡುವಿನ ಪ್ರಭೇದ ಸ್ಪಷ್ಟವಾಗಿ ಗೋಚರಿಸುತ್ತದೆ. ಸರಳ ಮಾತುಗಳಲ್ಲಿ ಹೇಳುವುದಾದರೆ, ವ್ಯವಹಾರ ಪ್ರಕರಣಗಳನ್ನು ತೀರ್ಮಾನಿಸುವ ನ್ಯಾಯಾಲಯದ ನಡವಳಿಕೆಗಳು, ವ್ಯವಹಾರ ನಡವಳಿಕೆಗಳೆಂದೂ, ಅಪರಾಧಿಕ ಪ್ರಕರಣಗಳನ್ನು ತೀರ್ಮಾನಿಸುವ ನ್ಯಾಯಾಲಯಗಳ ನಡವಳಿಕೆಗಳನ್ನು ಅಪರಾಧಿಕ ನಡವಳಿಕೆಗಳೆಂದೂ ತಿಳಿಯಲಾಗಿದೆ. ಈ ನಡವಳಿಕೆಗಳನ್ನು ನಡೆಸುವ ನ್ಯಾಯಾಲಯಗಳು ಬೇರೆಬೇರೆಯಾದ್ದರಿಂದ, ಈ ನಡವಳಿಕೆಗಳೂ ಮತ್ತು ಅವಕ್ಕೆ ಸಂಬಂಧಿಸಿದ ಕಾನೂನು ಬೇರೆಬೇರೆಯಾಗಿವೆ. ಪಕ್ಷಗಾರನೊಬ್ಬ ವ್ಯವಹಾರ ಕಾನೂನು ಅಥವಾ ಶಾಸನ ದ್ವಾರಾ ತನಗೆ ಸಿದ್ಧಿಸಿರುವ ಹಕ್ಕನ್ನು ಉದ್ಧರಿಸಿ, ಹಕ್ಕನ್ನು ಮುರಿದುದಕ್ಕೆ ಪರಿಹಾರ ಬೇಡಿರುವ ಎಲ್ಲಾ ನಡವಳಿಕೆಗಳು ವ್ಯವಹಾರ ನಡವಳಿಕೆಗಳಾಗುತ್ತವೆ.

ಮರಣದಂಡನೆ, ಕಾರಾಗೃಹ ವಾಸ, ದಂಡ, ಆಸ್ತಿಮುಟ್ಟುಗೋಲು ಈ ಶಿಕ್ಷೆಗಳಲ್ಲಿ ಮುಕ್ತಾಯವಾಗುವ ನಡವಳಿಕೆಗಳು ಸಾಮಾನ್ಯವಾಗಿ ಅಪರಾಧಿಕ ನಡವಳಿಕೆಗಳಾಗಿರುತ್ತವೆ. ಅಪರಾಧದ ಆರೋಪದ (ಅಂದರೆ ಸಾರ್ವಜನಿಕ ಕಾನೂನು ಮುರಿದ ಆರೋಪದ) ಪರಿಶೀಲನೆ, ದಂಡಗಳು ಕಾರಾಗೃಹವಾಸ ಇತ್ಯಾದಿ ಶಿಕ್ಷೆಗಳನ್ನು ವಿಧಿಸಲು ಅಧಿಕಾರ ವ್ಯಾಪ್ತಿ ಇರುವ ನ್ಯಾಯಾಲಯ/ನ್ಯಾಯಾಧಿಕರಣವೊಂದರ ಮುಂದೆ ಈ ಆರೋಪವನ್ನು ಮಾಡುವುದನ್ನು, ಈ ನಡವಳಿಕೆಗಳು ಒಳಗೊಂಡಿರುತ್ತವೆ. ಇದಲ್ಲದೆ ಶಾಂತಿ ಭಂಗವಾಗುವುದನ್ನು ತಡೆಗಟ್ಟುವುದು ಹಾಗೂ ಸುವ್ಯವಸ್ಥೆಯನ್ನು ಕಾಪಾಡುವುದಕ್ಕೆ ಅಪಾಯಕಾರಿಯಾದ ವ್ಯಕ್ತಿಗಳನ್ನು ಹದ್ದುಬಸ್ತಿನಲ್ಲಿ ಇಡುವುದು ಈ ನಡವಳಿಕೆಗಳಲ್ಲಿ ಒಳಗೊಂಡಿರುತ್ತವೆ. ಆದರೆ ವ್ಯವಹಾರಿಕ ಮತ್ತು ಅಪರಾಧಿಕ ನಡವಳಿಕೆಗಳನ್ನು ಸಂಪೂರ್ಣವಾಗಿ ಪ್ರತ್ಯೇಕಿಸುವುದು ಕಷ್ಟ. ಕೆಲವು ನಡವಳಿಕೆಗಳು ವ್ಯವಹಾರಿಕ ಮತ್ತು ಅಪರಾಧಿಕ ಎರಡೂ ಆಗಿರಬಹುದು, ಅಥವಾ ಎರಡೂ ಆಗಿರದೆ ಇತರ ನಡವಳಿಕೆಗಳೂ ಆಗಿರಬಹುದು. ಪರಿಹಾರವನ್ನು ಕೊಡಲು ಅಧಿಕಾರವುಳ್ಳ ನ್ಯಾಯಾಧಿಕರಣ

---

*ಕರ್ನಾಟಕದಲ್ಲಿ ಕೆಲವು ಕಡೆ, ವಿಶೇಷವಾಗಿ ಉತ್ತರ ಕರ್ನಾಟಕದಲ್ಲಿ ವ್ಯವಹಾರಿಕ ನ್ಯಾಯಾಲಯವನ್ನು ದಿವಾಣಿ ನ್ಯಾಯಾಲಯ ಹಾಗೂ ಅಪರಾಧಿಕ ನ್ಯಾಯಾಲಯವನ್ನು ಫೌಜುದಾರಿ ನ್ಯಾಯಾಲಯ ಎಂದೂ ಕರೆಯಲಾಗುತ್ತದೆ.

ಎಂಥದು ಎಂಬುದರ ಮೇಲೆ ನಡವಳಿಕೆಗಳ ಸ್ವಭಾವ ಅವಲಂಬಿಸಿರುವುದಿಲ್ಲ. "ಆದರೆ ಉಲ್ಲಂಘನೆಯಾದ ಹಕ್ಕು ಎಂಥದು, ಅದಕ್ಕೆ ಕೇಳಿದ, ಕೊಡಬಹುದಾದ ಪರಿಹಾರ ಯಾವುದು ಎಂಬುದರ ಮೇಲೆ ಅವಲಂಬಿಸಿದೆ" ಎಂದು ಪ್ರಕರಣವೊಂದರಲ್ಲಿ ಸರ್ವೋಚ್ಚ ನ್ಯಾಯಾಲಯ ವೀಕ್ಷಣೆಮಾಡಿದೆ. ಪ್ರಾಸಿಕ್ಯೂಷನ್ ಎಂದು ಸಾಮಾನ್ಯವಾಗಿ ಕರೆಯಲ್ಪಡುವ ಕ್ರಿಮಿನಲ್ ನಡವಳಿಕೆಗಳಲ್ಲಿ (ಅಪರಾಧಿಕ ನಡವಳಿಕೆಗಳಲ್ಲಿ) ಪೆಟ್ಟು ತಿಂದ ವ್ಯಕ್ತಿಗೆ ಆರ್ಥಿಕ ಲಾಭವಾಗುವುದಿಲ್ಲ. ಆಪಾದಿತನಿಗೆ ವಿಧಿಸಿದ ದಂಡ ಸರ್ಕಾರಕ್ಕೆ ಹೋಗುತ್ತದೆ. ಇದಕ್ಕೆ ಅಪವಾದವೆಂದರೆ ವಸೂಲಿಯಾದ ದಂಡವನ್ನು ಪೆಟ್ಟುತಿಂದ ವ್ಯಕ್ತಿ ಅಥವಾ ಅವನ ಕುಟುಂಬಕ್ಕೆ ಕೊಡಬೇಕೆಂದು ನ್ಯಾಯಾಲಯ ಮಾಡಿದ ಆದೇಶ. ಉದಾ: ವಾಹನ ಅಪಘಾತ ಪ್ರಕರಣ.

ಪೆಟ್ಟುತಿಂದ ವ್ಯಕ್ತಿ ಪ್ರಾಸಿಕ್ಯೂಷನ್ ಅನ್ನು ಪ್ರಾರಂಭಿಸಬಹುದು. ಆದರೆ, ಕುಂದುಂಟಾದ ತನ್ನ ಘನತೆ/ಗೌರವಕ್ಕೆ ತಕ್ಕ ಪ್ರತೀಕಾರವಾಯಿತೆಂಬ ಸಮಾಧಾನದ ಹೊರತು, ಇನ್ನೇನೂ ಅವನಿಗೆ ದಕ್ಕುವುದಿಲ್ಲ; ಇದರಿಂದಾಗಿ, ಸರ್ಕಾರವು ಪೊಲೀಸ್ ಮತ್ತು ಪ್ರಾಸಿಕ್ಯೂಟರ್ ನೆರವಿನಿಂದ ಪ್ರಾಸಿಕ್ಯೂಷನ್ (ಅಭಿಯೋಜನೆ)ಯನ್ನು ನಡೆಸುತ್ತದೆ. ನಿಂದಾಲೇಖನ, ಮಾನಹಾನಿ ಇಂಥ ಪ್ರಕರಣಗಳಲ್ಲಿ ಎರಡೂ ತೆರನಾದ ನಡವಳಿಕೆಗಳನ್ನು (ಅಂದರೆ ವ್ಯವಹಾರಿಕ ಮತ್ತು ಅಪರಾಧಿಕ) ಪ್ರಾರಂಭಿಸಬಹುದು. ಮೊದಲನೆಯದರಲ್ಲಿ ವಾದಿ ಪರಿಹಾರ ಕೇಳಿ ಪಡೆಯಬಹುದು. ಆದರೆ ಇಲ್ಲಿ ಪ್ರತಿವಾದಿ ಜೈಲಿಗೆ ಹೋಗುವುದಿಲ್ಲ. ಪ್ರತಿವಾದಿಯಿಂದ ಪರಿಹಾರ ಪಡೆದುಕೊಳ್ಳುವ ಸಂಭವ ಇಲ್ಲದಾಗ, ಅಪರಾಧಿಕ ನಡವಳಿಕೆಗಳನ್ನು ಪ್ರಾರಂಭಿಸಬಹುದು* ರೂಢಿಯಲ್ಲಿ, ಎರಡೂ ನಡವಳಿಕೆಗಳನ್ನು, ಶಿಕ್ಷೆ ಅಥವಾ ಧನ ಪರಿಹಾರ ಇವುಗಳ ಮೇಲಿನಿಂದ ಗುರುತಿಸಲು ಕಷ್ಟವೇನೂ ಅಲ್ಲ. ಈಗಿನ ಅಪರಾಧಿಕ ನ್ಯಾಯಾಲಯಗಳು, ಏರುವ ಏಣಿಯ ಮೂರು ಪ್ರತ್ಯೇಕವಾದ ಮೆಟ್ಟಲುಗಳ ಮೇಲೆ ಇವೆ. ಪ್ರತಿ ಜಿಲ್ಲೆಯಲ್ಲೂ ಮೊದಲನೆ ಮತ್ತು ಎರಡನೆ ದರ್ಜೆಯ ನ್ಯಾಯಿಕ ದಂಡಾಧಿಕಾರಿಗಳ ನ್ಯಾಯಾಲಯಗಳಿವೆ. ಮೊದಲನೆ ದರ್ಜೆಯ ನ್ಯಾಯಿಕ ದಂಡಾಧಿಕಾರಿಗಳಲ್ಲೊಬ್ಬರನ್ನು ನ್ಯಾಯಾಲಯದ ಮುಖ್ಯ ದಂಡಾಧಿಕಾರಿ ಯವರನ್ನಾಗಿ ನೇಮಿಸಲಾಗುತ್ತದೆ. ಮತ್ತು, ಇವರ ನ್ಯಾಯಾಲಯವನ್ನು ಮುಖ್ಯ ನ್ಯಾಯಿಕ ದಂಡಾಧಿಕಾರಿಯವರ ನ್ಯಾಯಾಲಯವೆಂದು ಉಚ್ಚ ನ್ಯಾಯಾಲಯ ಹೆಸರಿಸಿದೆ. ಇದು ಸತ್ರ ನ್ಯಾಯಾಲಯಕ್ಕೆ ಅಧೀನವಾಗಿರುತ್ತದೆ.

ಮೊದಲಿಗೆ ಪ್ರೆಸಿಡೆನ್ಸಿ ಊರುಗಳೆಂದು ಕರೆಯಲಾಗುತ್ತಿದ್ದ ದೆಹಲಿ, ಮುಂಬೈ, ಕಲ್ಕತ್ತಾ ಮತ್ತು ಮದರಾಸು ಮಹಾನಗರಗಳಲ್ಲಿನ ನ್ಯಾಯಾಲಯಗಳನ್ನು ಮಹಾನಗರ ದಂಡಾಧಿಕಾರಿಗಳ ನ್ಯಾಯಾಲಯವೆಂದು ಕರೆಯುತ್ತಾರೆ. ಇಲ್ಲಿನ ಮುಖ್ಯ ಮಹಾನಗರ ದಂಡಾಧಿಕಾರಿಗೆ ಮುಖ್ಯ ನ್ಯಾಯಿಕ ದಂಡಾಧಿಕಾರಿಗೆ ಇರುವ ಅಧಿಕಾರವೇ ಇದೆ. ಮಹಾನಗರ ದಂಡಾಧಿಕಾರಿಗೆ ಮೊದಲನೆ ದರ್ಜೆಯ

---

*ಭಾಷಾಂತರಕಾರನ ಟಿಪ್ಪಣಿ: ಮಾನಹಾನಿ ಪ್ರಕರಣಗಳಲ್ಲಿ, ಪರಿಹಾರ ಸಿಗುವ ಸಂಭವ ಇರಲಿ, ಇಲ್ಲದಿರಲಿ ವ್ಯವಹಾರಿಕ ಮತ್ತು ಅಪರಾಧಿಕ ನಡವಳಿಕೆಗಳೆರಡನ್ನೂ ಏಕಕಾಲದಲ್ಲೇ ಪ್ರಾರಂಭಿಸಬಹುದು.

ದಂಡಾಧಿಕಾರಿಗೆ ಇರುವ ಅಧಿಕಾರ ಇದೆ. ಈಗ ಅಹಮದಾಬಾದನ್ನು ಮಹಾನಗರವೆಂದು ಪರಿಗಣಿಸಲಾಗಿದೆ.* ಅಪರಾಧದ ಸ್ವಭಾವ ಮತ್ತು ಶಿಕ್ಷೆಯನ್ನು ಪ್ರದಾನ ಮಾಡುವ ನ್ಯಾಯಾಲಯದ ಅಧಿಕಾರಕ್ಕನುಗುಣವಾಗಿ ಅಪರಾಧಗಳ ವಿಚಾರಣೆಯನ್ನು ಬೇರೆ ಬೇರೆ ಶ್ರೇಣೀಕೃತ ನ್ಯಾಯಾಲಯಗಳಿಗೆ ಒಪ್ಪಿಸಲಾಗುತ್ತದೆ.

ರಾಜ್ಯದ ಪ್ರತಿ ಜಿಲ್ಲೆಯಲ್ಲೂ ಮುಖ್ಯ ನ್ಯಾಯಿಕ ದಂಡಾಧಿಕಾರಿಯೆಂದು ಕರೆಯಲ್ಪಡುವ ಮೊದಲನೆ ದರ್ಜೆಯ ದಂಡಾಧಿಕಾರಿಯನ್ನು ಉಚ್ಚನ್ಯಾಯಾಲಯ ನೇಮಿಸುತ್ತದೆ. ಬೇಕಾದಲ್ಲಿ ಹೆಚ್ಚುವರಿ ಮೊದಲನೆ ದರ್ಜೆಯ ದಂಡಾಧಿಕಾರಿಗಳನ್ನು ಉಚ್ಚನ್ಯಾಯಾಲಯ ನೇಮಿಸಬಹುದಾಗಿದೆ. ಇವರುಗಳನ್ನು ಅಪರ ಮುಖ್ಯ




*ಭಾಷಾಂತರಕಾರನ ಟಿಪ್ಪಣಿ: ಕರ್ನಾಟಕದಲ್ಲಿ ಬೆಂಗಳೂರನ್ನು ಮಹಾನಗರವೆಂದು ಪರಿಗಣಿಸಲಾಗಿದೆ. ಇಲ್ಲಿನ ಮುಖ್ಯ ಮಹಾನಗರ ದಂಡಾಧಿಕಾರಿ ಜಿಲ್ಲಾ ನ್ಯಾಯಾಧೀಶರ ದರ್ಜೆಯವರು; ಇತರ ಮಹಾನಗರ ದಂಡಾಧಿಕಾರಿಗಳು ಸಿವಿಲ್ ನ್ಯಾಯಾಧೀಶರ ದರ್ಜೆಯವರು.

ನ್ಯಾಯಿಕ ದಂಡಾಧಿಕಾರಿಗಳೆಂದು ಕರೆಯುತ್ತಾರೆ. ಇವರುಗಳಿಗೆ ಮುಖ್ಯ ನ್ಯಾಯಿಕ ದಂಡಾಧಿಕಾರಿಗೆ ಇರುವ ಅಧಿಕಾರವೇ ಇರುತ್ತದೆ. ಜಿಲ್ಲೆಯ ಉಪವಿಭಾಗಗಳಲ್ಲಿ ಮೊದಲನೆ ದರ್ಜೆ ನ್ಯಾಯಿಕ ದಂಡಾಧಿಕಾರಿಗಳನ್ನು ಉಚ್ಚನ್ಯಾಯಾಲಯ ನೇಮಿಸಬಹುದು. ಇವರನ್ನು ಉಪವಿಭಾಗ ನ್ಯಾಯಿಕ ದಂಡಾಧಿಕಾರಿಗಳೆನ್ನಲಾಗುತ್ತದೆ. ಮುಖ್ಯ ನ್ಯಾಯಿಕ ದಂಡಾಧಿಕಾರಿಯ ಆಡಳಿತಾತ್ಮಕ ನಿಯಂತ್ರಣವನ್ನು ಬಿಟ್ಟರೆ, ಉಪವಿಭಾಗ ನ್ಯಾಯಿಕ ದಂಡಾಧಿಕಾರಿ ಉಚ್ಚನ್ಯಾಯಾಲಯ ಕೊಟ್ಟ ಎಲ್ಲ ಅಧಿಕಾರವನ್ನೂ ಚಲಾಯಿಸಬಹುದು.

ಯಾವುದಾದರೊಂದು ನಿರ್ದಿಷ್ಟ ಪ್ರಕರಣದಲ್ಲಿ ಯಾರಿಗೇ ಆಗಲೀ ಮೊದಲನೆ ದರ್ಜೆಯ ದಂಡಾಧಿಕಾರಿಯ ಅಧಿಕಾರವನ್ನು ಉಚ್ಚನ್ಯಾಯಾಲಯ ಪ್ರದಾನ ಮಾಡಬಹುದು. ಈ ದಂಡಾಧಿಕಾರಿಯು ವಿಶೇಷ ನ್ಯಾಯಿಕ ದಂಡಾಧಿಕಾರಿಯೆಂದು ಕರೆಯಲ್ಪಡುತ್ತಾರೆ. ಇಂಥ ದಂಡಾಧಿಕಾರಿಗಳು ಸಾಧಾರಣವಾಗಿ ಒಂದು ವರ್ಷಕ್ಕೆ ಮೀರದ ನಿರ್ದಿಷ್ಟ ಅವಧಿಗೆ ನೇಮಕ ಹೊಂದುತ್ತಾರೆ. ಅವರು ತಮಗೆ ಕೊಡಲ್ಪಟ್ಟ ಕ್ಷೇತ್ರದಲ್ಲಿ ಅಧಿಕಾರ ವ್ಯಾಪ್ತಿಯನ್ನು ಹೊಂದಿದ್ದು ತಮಗೆ ವಹಿಸಿದ ಪ್ರಕರಣಗಳನ್ನು ವಿಚಾರಣೆ ಮಾಡುತ್ತಾರೆ.

## ಕಾರ್ಯನಿರ್ವಾಹಕ ದಂಡಾಧಿಕಾರಿಗಳು

ನ್ಯಾಯಿಕ ದಂಡಾಧಿಕಾರಿಗಳನ್ನಲ್ಲದೆ, ತಮಗೆ ಸೂಕ್ತ ಕಂಡಷ್ಟು ಕಾರ್ಯನಿರ್ವಾಹಕ ದಂಡಾಧಿಕಾರಿಗಳನ್ನು ರಾಜ್ಯ ಸರ್ಕಾರ ನೇಮಕ ಮಾಡಬಹುದು. ಇವರಲ್ಲೊಬ್ಬರು ಜಿಲ್ಲಾ ದಂಡಾಧಿಕಾರಿಯಾಗಿ ನೇಮಕ ಹೊಂದುತ್ತಾರೆ. ಹೀಗೆಯೇ ಒಂದು ನಿರ್ದಿಷ್ಟ ಕ್ಷೇತ್ರದಲ್ಲಿ ಕಾಲ ಕಾಲಕ್ಕೆ ಒಬ್ಬ ವಿಶೇಷ ದಂಡಾಧಿಕಾರಿಯನ್ನು ರಾಜ್ಯಸರ್ಕಾರ ನೇಮಿಸಿ ಆವನಿಗೆ ತನಗೆ ಸೂಕ್ತಕಂಡಂತೆ ದಂಡಾಧಿಕಾರಿಯ ಅಧಿಕಾರಗಳನ್ನು ಕೊಡಬಹುದು. ಹೀಗೆ, ಐದು ದರ್ಜೆಗಳ ಕಾರ್ಯನಿರ್ವಾಹಕ ದಂಡಾಧಿಕಾರಿಗಳಿಗಿದ್ದಾರೆ:

i. ಜಿಲ್ಲಾ ದಂಡಾಧಿಕಾರಿ

ii. ಅಪರ ಜಿಲ್ಲಾ ದಂಡಾಧಿಕಾರಿ

iii. ಉಪ ವಿಭಾಗ ದಂಡಾಧಿಕಾರಿ

iv. ಕಾರ್ಯನಿರ್ವಾಹಕ ದಂಡಾಧಿಕಾರಿ

v. ವಿಶೇಷ ದಂಡಾಧಿಕಾರಿ

ಮಹಾನಗರ ಕ್ಷೇತ್ರಗಳಲ್ಲೂ ಸಹ ಕಾರ್ಯನಿರ್ವಾಹಕ ದಂಡಾಧಿಕಾರಿಗಳನ್ನು ರಾಜ್ಯ ಸರ್ಕಾರ ನೇಮಕ ಮಾಡಬಹುದು. ಜಿಲ್ಲಾ ದಂಡಾಧಿಕಾರಿಗಳು ರಾಜ್ಯಸರ್ಕಾರದ ನಿಯಂತ್ರಣಕ್ಕೆ ಒಳಪಟ್ಟಿದ್ದು, ಕಾರ್ಯನಿರ್ವಾಹಕ ದಂಡಾಧಿಕಾರಿಗಳ ಅಧಿಕಾರ ಕ್ಷೇತ್ರವನ್ನು ಆಗಿಂದಾಗ್ಗೆ ನಿಗದಿಪಡಿಸುತ್ತಾರೆ.

ರಾಜ್ಯಸರ್ಕಾರ ಅಪರ ಜಿಲ್ಲಾ ದಂಡಾಧಿಕಾರಿಗಳನ್ನೂ ನೇಮಕ ಮಾಡಬಹುದು. ಮುಖ್ಯ ನ್ಯಾಯಿಕ ದಂಡಾಧಿಕಾರಿ ಅಥವಾ ಮುಖ್ಯ ಮಹಾನಗರ ದಂಡಾಧಿಕಾರಿಯು

ಮರಣ ದಂಡನೆ, ಜೀವಾವಧಿ ಶಿಕ್ಷೆ ಅಥವಾ ಏಳು ವರ್ಷಗಳಿಗೆ ಮೀರಿದ ಕಾರಾಗೃಹ ಶಿಕ್ಷೆಗಳನ್ನು ಬಿಟ್ಟು ಇತರ ಎಲ್ಲಾ ಶಿಕ್ಷೆಗಳನ್ನು ಕೊಡಬಹುದು. ದಂಡಕೊಡಲು ತಪ್ಪಿದಲ್ಲಿ; ಹೆಚ್ಚಿಗೆ ಕಾರಾಗೃಹ ಶಿಕ್ಷೆಯನ್ನೂ ಕೊಡಬಹುದು.

ಮೊದಲನೆ ದರ್ಜೆಯ ದಂಡಾಧಿಕಾರಿ ಮೂರು ವರ್ಷಗಳಿಗೆ ಮೀರದ ಸಾದಾ ಅಥವಾ ಕಠಿಣ ಸಜೆಯನ್ನು ಅಥವಾ ಐದು ಸಾವಿರ ರೂಪಾಯಿಗಳಿಗೆ ಮೀರದ ದಂಡವನ್ನು ಅಥವಾ ಎರಡೂ ಶಿಕ್ಷೆಯನ್ನು ವಿಧಿಸಬಹುದು. ಎರಡನೆಯ ದರ್ಜೆಯ ದಂಡಾಧಿಕಾರಿ ಎರಡು ವರ್ಷಗಳಿಗೆ ಮೀರದ ಸಜೆಯನ್ನು ಅಥವಾ ಒಂದು ಸಾವಿರ ರೂಪಾಯಿಗಳಿಗೆ ಮೀರದ ದಂಡವನ್ನು ಅಥವಾ ಎರಡನ್ನೂ ವಿಧಿಸಬಹುದು.

ಮೊದಲನೆ ದರ್ಜೆಯ ದಂಡಾಧಿಕಾರಿಗೆ ಎರಡನೆಯ ದರ್ಜೆಯ ದಂಡಾಧಿಕಾರಿಗೆ ಇರುವುದಕ್ಕಿಂತ ವಿಸ್ತಾರವಾದ ಅಧಿಕಾರ ವ್ಯಾಪ್ತಿ ಹಾಗೂ ಅಧಿಕಾರವಿದೆ.

## ಸತ್ರ ನ್ಯಾಯಾಲಯ

ದಂಡಾಧಿಕಾರಿಗಳ ನ್ಯಾಯಾಲಯಗಳ ಮೇಲೆ ಸತ್ರ ನ್ಯಾಯಾಲಯಗಳಿದ್ದು ಅವುಗಳಲ್ಲಿ ಸತ್ರ ನ್ಯಾಯಾಧೀಶರು ಉಪಸ್ಥಿತರಿರುತ್ತಾರೆ. ಕೆಳಗಡೆಯ ನ್ಯಾಯಾಲಯಗಳಿಂದ ವಿಚಾರಣೆಗೆ ಒಪ್ಪಿಸಿದ ಪ್ರಕರಣಗಳು ಅಂದರೆ, ಡಕಾಯಿತಿ ಪ್ರಕರಣಗಳು, ಎಲ್ಲ ರೀತಿಯ ಕೊಲೆ ಪ್ರಕರಣಗಳು, ವಾಡಿಕೆ ಕಳ್ಳರು ಮಾಡಿದ ಕಳ್ಳತನದ ಪ್ರಕರಣಗಳು ಇಂಥ ಹೆಚ್ಚಿನ ಗಂಭೀರ ಪ್ರಕರಣಗಳನ್ನು ಸತ್ರ ನ್ಯಾಯಾಲಯಗಳು ವಿಚಾರಣೆ ಮಾಡುತ್ತವೆ. ಪ್ರತಿಯೊಂದು ಸತ್ರ ವಿಭಾಗಕ್ಕೆ ಒಂದು ಸತ್ರ ನ್ಯಾಯಾಲಯವನ್ನು ರಾಜ್ಯ ಸರ್ಕಾರ ದಂಡಪ್ರಕ್ರಿಯಾ ಸಂಹಿತೆಯ ಪ್ರಕಾರ ಸ್ಥಾಪಿಸಬೇಕು. ಸಾಧಾರಣವಾಗಿ ಒಂದು ಸತ್ರ ವಿಭಾಗದಲ್ಲಿ ಒಂದು ಸತ್ರ ನ್ಯಾಯಾಲಯ ಇದ್ದಾಗ್ಯೂ, ನ್ಯಾಯಾಲಯದಲ್ಲಿ ಒಂದಕ್ಕಿಂತ ಹೆಚ್ಚಿಗೆ ನ್ಯಾಯಾಧೀಶರುಗಳು ಇರಬಹುದು. ಇವರುಗಳನ್ನು ಅಪರ ಸತ್ರ ನ್ಯಾಯಾಧೀಶರುಗಳೆಂದೋ ಅಥವಾ ಸಹಾಯಕ ಸತ್ರ ನ್ಯಾಯಾಧೀಶರುಗಳೆಂದೋ ಹೆಸರಿಸಬಹುದು. ಇವರುಗಳು ಅದೇ ನ್ಯಾಯಾಲಯದ ನ್ಯಾಯಾಧೀಶರಾಗಿರುತ್ತಾರೆ. ಸತ್ರ ನ್ಯಾಯಾಧೀಶರು ತನಗೆ ವಹಿಸಿದ ಎಲ್ಲಾ ಪ್ರಕರಣಗಳನ್ನು ಅಪರ ಸತ್ರ ನ್ಯಾಯಾಧೀಶರು ವಿಚಾರಣೆ ಮಾಡುತ್ತಾರೆ. ಹೇಗಾದರೂ ದಂಡಾಧಿಕಾರಿಯ ತೀರ್ಮಾನದಿಂದ ಉದ್ಭವಿಸಿದ ಮೇಲ್ಮನವಿಯನ್ನು ಸತ್ರನ್ಯಾಯಾಧೀಶರು ಮಾತ್ರ ಸ್ವೀಕರಿಸಿ ಇತ್ಯರ್ಥ ಮಾಡಬೇಕು. ಸತ್ರ ನ್ಯಾಯಾಲಯ ಇರಬೇಕಾದ ಸ್ಥಳವನ್ನು ಉಚ್ಚನ್ಯಾಯಾಲಯ ಮಾತ್ರ ನಿಗದಿಮಾಡುತ್ತದೆ. ಸತ್ರ ನ್ಯಾಯಾಲಯಕ್ಕೆ ತನ್ನ ಅಧೀನ ನ್ಯಾಯಾಲಯಗಳ ಮೇಲೆ ಮೇಲ್ಮನವಿ ಹಾಗೂ ಪುನರ್ವಿಮರ್ಶೆ ಅಧಿಕಾರ ವ್ಯಾಪ್ತಿ ಇರುತ್ತದೆ. ಆದರೆ ಅವುಗಳು ದಂಡಾಧಿಕಾರಿಗಳು ತಮಗೆ ವಿಚಾರಣೆಗೆ ವಹಿಸಿದ ಪ್ರಕರಣಗಳನ್ನು ಮಾತ್ರ ಪರಿಗಣನೆಗೆ (ಸಂಜ್ಞಾನಕ್ಕೆ) ತೆಗೆದುಕೊಳ್ಳಬಹುದೇ ವಿನಾ ಅನ್ಯಥಾ ತೆಗೆದುಕೊಳ್ಳುವ ಹಾಗಿಲ್ಲ. ಈ ನ್ಯಾಯಾಲಯಗಳು ದಂಡ ಪ್ರಕ್ರಿಯಾ ಸಂಹಿತೆಯಲ್ಲಿ ಉಕ್ತವಾಗಿರುವ ರೀತ್ಯಾ ಪ್ರಕರಣಗಳನ್ನು ಮತ್ತು ಮೇಲ್ಮನವಿಗಳನ್ನು ವಿಚಾರಣೆ ಮಾಡಿ ತೀರ್ಮಾನ ಮಾಡುತ್ತವೆ.

**ಸತ್ರನ್ಯಾಯಾಲಯಕ್ಕೆ ಪ್ರಕರಣಗಳನ್ನು ವಹಿಸಿಕೊಡುವ ಪ್ರಕ್ರಿಯೆ**

ಗಂಭೀರವಾದ ಅಪರಾಧ ಪ್ರಕರಣದಲ್ಲಿ ದಂಡಾಧಿಕಾರಿಯವರು ಪೂರ್ವಭಾವಿಯಾಗಿ ವಿಚಾರಣೆಮಾಡಿದ ನಂತರ, ಅಪರಾಧವು ತೀವ್ರವಾಗಿ ನೋಡಬೇಕಾಗಿರುವಂಥದೆಂದು ಮನವರಿಕೆಯಾದರೆ, ಇಲ್ಲವೇ ದಂಡಾಧಿಕಾರಿಯವರ ಅಧಿಕಾರವ್ಯಾಪ್ತಿಗೆ ಮೀರಿದ ಶಿಕ್ಷೆಯನ್ನು ವಿಧಿಸುವಂಥದ್ದಾಗಿದ್ದರೆ, ಪ್ರಕರಣವನ್ನು ಸತ್ರನ್ಯಾಯಾಲಯಕ್ಕೆ ವಿಚಾರಣೆಗಾಗಿ ಕಳುಹಿಸಲಾಗುತ್ತದೆ. ಇದನ್ನೇ ಸತ್ರ ನ್ಯಾಯಾಲಯಕ್ಕೆ 'ವಹಿಸುವುದು' (Commit) ಎನ್ನುತ್ತಾರೆ. ಸತ್ರನ್ಯಾಯಾಧೀಶರಾಗಲೀ, ಅಪರ ಸತ್ರನ್ಯಾಯಾಧೀಶರಾಗಲೀ, ಕಾನೂನಿನಂತೆ ಯಾವ ಶಿಕ್ಷೆಯನ್ನಾದರೂ, ಅಂದರೆ, ಕಾರಾಗೃಹವಾಸ, ಜೀವಾವಧಿ ಕಾರಾಗೃಹ ವಾಸ, ದಂಡ ಅಥವಾ ಮರಣ ದಂಡನೆಯನ್ನು ವಿಧಿಸಬಹುದು. ಮರಣದಂಡನೆ ಶಿಕ್ಷೆಯನ್ನು ಮಾತ್ರ ಉಚ್ಚನ್ಯಾಯಾಲಯ ಸ್ಥಿರೀಕರಿಸಿದ ನಂತರವೇ ಜಾರಿಗೊಳಿಸಬಹುದು. ಮೊದಲನೆ ದರ್ಜೆಯ ದಂಡಾಧಿಕಾರಿಗಳ ಆಜ್ಞೆ/ಆದೇಶಗಳ ಮೇಲ್ಮನವಿಯನ್ನೂ ಸತ್ರ ನ್ಯಾಯಾಧೀಶರು ವಿಚಾರಿಸುತ್ತಾರೆ. ಮೊದಲನೆ ದರ್ಜೆಯ ನ್ಯಾಯಾಧೀಶರುಗಳಿಗೆ ಇರುವಂಥ ಪುನರ್ವಿಮರ್ಶೆ ಅಧಿಕಾರವೂ ಸತ್ರ ನ್ಯಾಯಾಧೀಶರಿಗೆ ಇದೆ.

ಪ್ರತಿಯೊಂದು ಅಪರಾಧಿಕ ನ್ಯಾಯಾಲಯದ ಅಧಿಕಾರವ್ಯಾಪ್ತಿ ಶಾಸನದತ್ತವಾದುದು. ಪಕ್ಷಗಾರರು ತಮ್ಮೊಳಗೆ ಒಪ್ಪಂದ ಮಾಡಿಕೊಂಡು ನ್ಯಾಯಾಲಯವೊಂದರ ಅಧಿಕಾರವ್ಯಾಪ್ತಿಯನ್ನು ನಿರ್ಧರಿಸುವ ಹಾಗಿಲ್ಲ, ಸರಿಯಾದ ರೀತಿಯಲ್ಲಿ ತನ್ನ ಮುಂದೆ ಬಂದ, ಅಂದರೆ ಕಾನೂನು ರೀತ್ಯ ವಹಿಸಿಕೊಡಲು ಆದೇಶ ಮಾಡಿದಾಗ ಮಾತ್ರ, ಪ್ರಕರಣವನ್ನು ವಿಚಾರಣೆ ಮಾಡಲು ಸತ್ರನ್ಯಾಯಾಲಯಕ್ಕೆ ಅಧಿಕಾರ ವ್ಯಾಪ್ತಿ ಬರುತ್ತದೆ. ಸಹಾಯಕ ಸತ್ರ ನ್ಯಾಯಾಧೀಶರು, ಹತ್ತುವರ್ಷಗಳಿಗೆ ಮೀರಿದ ಸಜೆ, ಜೀವವಾಧಿ ಸಜೆ, ಮರಣ ದಂಡನೆ ಶಿಕ್ಷೆ ಇವುಗಳನ್ನು ಹೊರತುಪಡಿಸಿ, ಕಾನೂನು ರೀತ್ಯ ಬೇರೆ ಯಾವುದೇ ಶಿಕ್ಷೆಯನ್ನು ವಿಧಿಸಬಹುದು. ಹೀಗಾಗಿ, ಗಂಭೀರವಾದ ಸಾವಿನ ಪ್ರಕರಣಗಳು, ಕೊಲೆ, ದರೋಡೆ ಇತ್ಯಾದಿ ಪ್ರಕರಣಗಳು, ಸಹಾಯಕ ಸತ್ರ ನ್ಯಾಯಾಧೀಶರು ವಿಚಾರಣೆ ಮಾಡದೆ ಸತ್ರ ನ್ಯಾಯಾಧೀಶರು ಮಾತ್ರ ವಿಚಾರಣೆ ಮಾಡುತ್ತಾರೆ.

ಅಂತಿಮವಾಗಿ, ಪ್ರತಿರಾಜ್ಯದಲ್ಲಿ ಶ್ರೇಣಿಯ ತುಟ್ಟ ತುದಿಯಲ್ಲಿ ಉಚ್ಚ ನ್ಯಾಯಾಲಯುವಿದೆ. ಈ ಉಚ್ಚ ನ್ಯಾಯಾಲಯಕ್ಕೆ ತನ್ನ ಅಧೀನ ನ್ಯಾಯಾಲಯುಗಳೆಲ್ಲದರಮೇಲೆ ಮೇಲ್ವಿಚಾರಣೆ ಅಧಿಕಾರವಿದೆ. ಆದರೆ ಉಚ್ಚ ನ್ಯಾಯಾಲಯದ ಮುಖ್ಯ ಕಾರ್ಯಭಾರ, ಮೇಲ್ಮನವಿಗಳು, ಪುನರ್ವಿಮರ್ಶೆಗಳು ಮತ್ತು ಪರಾಮರ್ಶೆಗಳು ಇವುಗಳನ್ನು ವಿಚಾರಿಸುವುದೇ ಆಗಿದೆ. ಸತ್ರ ನ್ಯಾಯಾಲಯುದಿಂದ ಶಿಕ್ಷೆಗೆ ಗುರಿ ಪಡಿಸಲ್ಪಟ್ಟ ಎಲ್ಲ ವ್ಯಕ್ತಿಗಳು ಉಚ್ಚ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಬಹುದಾಗಿದೆ. ಸತ್ರ ನ್ಯಾಯಾಲಯವು ಮಾಡಿದ ಬಿಡುಗಡೆ ಆಜ್ಞೆಯ ಮೇಲೆ ಮೇಲ್ಮನವಿಯನ್ನು ರಾಜ್ಯ ಸರ್ಕಾರವೂ ಉಚ್ಚ ನ್ಯಾಯಾಲಯಕ್ಕೇ ಸಲ್ಲಿಸಬೇಕು. ಮರಣ ದಂಡನೆಗೊಳಗಾದ ಅಪರಾಧಿ ಮೇಲ್ಮನವಿ

ಮಾಡಲಿ, ಬಿಡಲಿ, ಮರಣ ದಂಡನೆಯ ಶಿಕ್ಷೆಯನ್ನು ಉಚ್ಚ ನ್ಯಾಯಾಲಯ ಸ್ಥಿರೀಕರಿಸಿದ ಮೇಲೆಯೇ ಜಾರಿ ಮಾಡಬೇಕು. ಸತ್ರ ನ್ಯಾಯಾಧೀಶರೇ ಆಗಲಿ, ಅಥವಾ ಜಿಲ್ಲಾ ದಂಡಾಧಿಕಾರಿಗಳೇ ಆಗಲಿ, ಕಳುಹಿಸಿದ ಪುನರ್ವಿಮರ್ಶೆ ಪ್ರಕರಣಗಳನ್ನು ಉಚ್ಚ ನ್ಯಾಯಾಲಯ ಮಾತ್ರ ವಿಚಾರಿಸುತ್ತದೆ.

ಎಲ್ಲ ಅಪರಾಧಿಕ ಪ್ರಕರಣಗಳಲ್ಲಿ ಉಚ್ಚ ನ್ಯಾಯಾಲಯವೇ ಅಂತಿಮ ಮೇಲ್ಮನವಿ ನ್ಯಾಯಾಲಯ. ಇದಕ್ಕೆ ಅಪವಾದವೆಂದರೆ ಕಾನೂನನ್ನು ತಪ್ಪಾಗಿ ಅನ್ವಯಿಸಿದ ಪ್ರಕರಣ ಅಥವಾ ದೋಷಪೂರಿತ ಪ್ರಕ್ರಿಯೆ ಇದ್ದ ಪ್ರಕರಣಗಳು. ಇಂಥ ಸಂದರ್ಭದಲ್ಲಿ, ಸಂವಿಧಾನದ 134ನೇ ಅನುಚ್ಛೇದದ ಕೆಳಗೆಯಾಗಲೀ ಅಥವಾ ದಂಡಪ್ರಕ್ರಿಯಾಸಂಹಿತೆಯಲ್ಲಿ ಹೇಳಿರುವಂತೆ ಉಚ್ಚ ನ್ಯಾಯಾಲಯದ ಅನುಮತಿಯನ್ನು ಪಡೆದಾಗಲೀ, ಸರ್ವೋಚ್ಚ ನ್ಯಾಯಾಲಯಕ್ಕೆ ಮೇಲ್ಮನವಿ ಮಾಡಬಹುದು. ಬೇರೆ ಪ್ರಕರಣಗಳಲ್ಲಿ, ಮೇಲ್ಮನವಿ ಸಲ್ಲಿಸಲು, ರಾಜ್ಯಾಂಗದ 136ನೇ ಅನುಚ್ಛೇದದ ಅನ್ವಯ ವಿಶೇಷ ಅನುಮತಿ ಕೊಡಲು, ಸರ್ವೋಚ್ಚ ನ್ಯಾಯಾಲಯಕ್ಕೆ ಅನಿರ್ಬಂಧಿತ ಅಧಿಕಾರವಿದೆ.

ಇವೇ ನಮ್ಮ ಅಪರಾಧಿಕ ನ್ಯಾಯಾಲಯಗಳಲ್ಲಿರುವ ಮೂರು ಮುಖ್ಯ ಅಂತಸ್ತುಗಳು. ಇದಲ್ಲದೆ ಕೆಲವು ವಿಶೇಷ ಅಧಿನಿಯಮಗಳ ಕೆಳಗೆ, ಪ್ರಕರಣಗಳನ್ನು ವಿಚಾರಣೆ ಮಾಡಲು ಸ್ಥಾಪಿಸಲಾದ ಕೆಲವು ವಿಶೇಷ ನ್ಯಾಯಾಧಿಕರಣಗಳು ಹಾಗೂ ಗ್ರಾಮ ಪಂಚಾಯಿತಿಗಳೂ ಇವೆ (ಇವುಗಳನ್ನು ಪ್ರತ್ಯೇಕವಾಗಿ ಮುಂದೆ ಪ್ರಸ್ತಾಪಿಸಲಾಗಿದೆ.)

## ಪ್ರಕ್ರಿಯೆ

ಅಪರಾಧಿಕ ಪ್ರಕರಣಗಳನ್ನು ವಿಚಾರಣೆ ಮಾಡಲು ಪ್ರಕ್ರಿಯೆಯನ್ನು ದಂಡ ಪ್ರಕ್ರಿಯಾ ಸಂಹಿತೆಯಲ್ಲಿ ಕೊಡಲಾಗಿದೆ. ಕೆಲವು ತೆರನಾದ ಚಿಲ್ಲರೆ ಪ್ರಕರಣಗಳನ್ನು ಅಂದರೆ ಮೋಟಾರು ವಾಹನಗಳ ಅಧಿನಿಯಮಕ್ಕೆ ಸಂಬಂಧಿಸಿದ ಅಪರಾಧಗಳು, ತೂಕ ಮತ್ತು ಅಳತೆಗೆ ಸಂಬಂಧಿಸಿದ ಅಪರಾಧಗಳು, ಸಣ್ಣಪುಟ್ಟ ಕಳ್ಳತನಗಳು, ದನಗಳ ಅತಿಕ್ರಮಣ ಅಧಿನಿಯಮದಡಿ ಬರುವ ಅಪರಾಧಗಳು, ಇತ್ಯಾದಿ ಪ್ರಕರಣಗಳನ್ನು ದೀರ್ಘವಲ್ಲದ, ಅತಿ ವಿವರವಲ್ಲದ, ಆದರೆ ಸಂಕ್ಷಿಪ್ತವಾದ ವಿಚಾರಣೆ ನಡೆಸಿ, ವಿಲೇ ಮಾಡಲಾಗುತ್ತದೆ. ಆಪಾದಿತನನ್ನು ನ್ಯಾಯಾಲಯದ ಮುಂದೆ ಕರೆದು ಆರೋಪವನ್ನು ಅವನಿಗೆ ವಿವರಿಸಲಾಗುತ್ತದೆ. ಆಪಾದನೆ ನಿಜವೇ ಅಲ್ಲವೇ ಎಂದು ತಿಳಿಸಲು ಅವನಿಗೆ ಕೇಳಗಾಗುತ್ತದೆ. ನಿಜವಲ್ಲವೆಂದು ಅವನು ಹೇಳಿದರೆ, ಆಪಾದನೆಯನ್ನು ಬೆಂಬಲಿಸುವ ಸಾಕ್ಷ್ಯವನ್ನು ಆಗಲೇ ಪರೀಕ್ಷಿಸಲಾಗುತ್ತದೆ. ಅಂದರೆ, ಆಪಾದಿತನನ್ನು ದಂಡಾಧಿಕಾರಿಯ ಮುಂದೆ ಹಾಜರುಪಡಿಸಿದಾಗ, ಆಪಾದನೆ ಎಂಥಾದ್ದು ಎಂದು ಅವನಿಗೆ ತಿಳಿಸಿ, ಅವನ ಸಮಜಾಯಿಶಿಯನ್ನು ಕೇಳಲಾಗುತ್ತದೆ. ಅವನು ತಪ್ಪೊಪ್ಪಿಕೊಂಡರೆ, ಅವನನ್ನು ಅಪರಾಧಿ ಎಂದು ನಿರ್ಣಯಿಸಿ, ಆಗಲೇ ಶಿಕ್ಷೆ ವಿಧಿಸಬಹುದು. ಅವನು ತಾನು ನಿರಪರಾಧಿಯೆಂದರೆ, ಅವನ ವಿರುದ್ಧದ ಸಾಕ್ಷ್ಯವನ್ನು ದಂಡಾಧಿಕಾರಿ ದಾಖಲಿಸಿಕೊಳ್ಳುತ್ತಾನೆ. ಆಪಾದಿತನು ತಾನು

ಇನ್ನೊಂದು ಹೇಳಿಕೆಯನ್ನು ಕೊಡುವುದೂ ಅಲ್ಲದೆ ತನ್ನ ಪರ ಸಾಕ್ಷ್ಯವನ್ನೂ ಕರೆಯಬಹುದು. ಹೆಚ್ಚು ಗಂಭೀರವಾದ ಪ್ರಕರಣಗಳನ್ನು 'ವಾರಂಟ್ ಪ್ರಕರಣ'ಗಳೆಂದು ಪರಿಗಣಿಸಲಾಗುತ್ತದೆ. ನ್ಯಾಯಾಲಯದ ಮುಂದೆ ಬಂದಾಗ ಆಪಾದಿತ ಜಾಮೀನು ಪಡೆದುಕೊಳ್ಳಬೇಕು, ಇಲ್ಲವಾದಲ್ಲಿ ಅವನನ್ನು ಜೈಲಿಗೆ ಕಳುಹಿಸಲಾಗುತ್ತದೆ. ಆರು ತಿಂಗಳಿಗಿಂತ ಹೆಚ್ಚು ಶಿಕ್ಷೆ ಕೊಡಬಹುದಾದ ಎಲ್ಲ ಅಪರಾಧಗಳನ್ನು ವಾರಂಟ್ ಪ್ರಕರಣಗಳು ಎಂದು ಕರೆಯುತ್ತಾರೆ. ಇಂಥ ಪ್ರಕರಣಗಳನ್ನು ನಡೆಸುವ ಪ್ರಕ್ರಿಯೆ ಕೊಂಚ ಭಿನ್ನವಾಗಿರುತ್ತದೆ. ವಾರಂಟ್ ಪ್ರಕರಣವೊಂದರಲ್ಲಿ ಆಪಾದಿತನನ್ನು ನ್ಯಾಯಾಲಯದ ಮುಂದೆ ತಂದಾಗ, ಪ್ರಾಸಿಕ್ಯೂಷನ್ ಸಾಕ್ಷ್ಯವನ್ನು ಕೇಳುವತನಕ, ದಂಡಾಧಿಕಾರಿಯು ಅವನನ್ನು ಪ್ರಶ್ನಿಸುವುದಿಲ್ಲ. ಸಾಂಪ್ರದಾಯಿಕವಾದ ಆರೋಪಗಳ ಪಟ್ಟಿಯನ್ನು ಸಿದ್ಧಪಡಿಸಿ, ಆಪಾದಿತನಿಗೆ ಓದಿಹೇಳಿ, ತಪ್ಪುಮಾಡಿದ್ದೇನೆಂದು ಒಪ್ಪಿಕೊಳ್ಳುತ್ತಿಯೋ ಇಲ್ಲವೋ ಎಂದು ಅವನನ್ನು ಕೇಳಲಾಗುತ್ತದೆ. ವಿವರವಾದ ಪ್ರಕ್ರಿಯೆಗೆ ಒಳಪಡಿಸಬೇಕಾದ ಆರೋಪವಾದುದರಿಂದ, ಅದನ್ನು ನಿರಾಕರಿಸಲು ಅಥವಾ ಒಪ್ಪಲು ಆಪಾದಿತನಿಗೆ ಸಂಪೂರ್ಣ ಅವಕಾಶವನ್ನು ಕೊಡುವುದೇ, ಇದರ ಉದ್ದೇಶ. ಇದಲ್ಲದೆ, ತನ್ನ ವಿರುದ್ಧದ ಸಾಕ್ಷಿಗಳನ್ನು ಪಾಟೀಸವಾಲುಮಾಡಲು ಅವನಿಗೆ ಎರಡು ಅವಕಾಶಗಳಿರುತ್ತವೆ. ಪ್ರಕರಣಗಳನ್ನು ಶೋಧಿಸಿ ವಿಚಾರಣೆಗೆ ಅರ್ಹವಾದುದೇ ಎಂದು ದಂಡಾಧಿಕಾರಿಯು ನಿರ್ಧರಿಸಿ, ಸತ್ರ ನ್ಯಾಯಾಲಯಕ್ಕೆ ಒಪ್ಪಿಸಿದ ಮೇಲೆಯೇ ವಿಚಾರಣೆ ಪ್ರಾರಂಭವಾಗುತ್ತದೆ. ಸಾಮಾನ್ಯವಾಗಿ, ಸಾರವಿಲ್ಲದ ಪ್ರಕರಣವನ್ನೂ ವಜಾಮಾಡಲು ದಂಡಾಧಿಕಾರಿ ಹಿಂಜರಿಯುವುದರಿಂದ, ಸತ್ರ ನ್ಯಾಯಾಲಯಕ್ಕೆ ವಿಚಾರಣೆ ವಹಿಸಿಕೊಡುವುದರೊಂದಿಗೆ ಪೂರ್ವಭಾವಿ ವಿಚಾರಣೆಯು ಕೊನೆಮುಟ್ಟುತ್ತದೆ. ಸತ್ರ ನ್ಯಾಯಾಧೀಶರು ಸತ್ರ ಪ್ರಕರಣದ ವಿಚಾರಣೆಯನ್ನು ಮಾಡುತ್ತಾರೆ. ಪ್ರಕರಣದಲ್ಲಿ ಸಾಕ್ಷ್ಯವನ್ನು ದಾಖಲಿಸಿದ ಮೇಲೆ, ವಾದವಿವಾದಗಳನ್ನು ಕೇಳಿದನಂತರ, ಸತ್ರ ನ್ಯಾಯಾಧೀಶನು ಆಪಾದಿತನನ್ನು ಉದ್ದೇಶಿಸಿ ಮಾತನಾಡುತ್ತಾನೆ. ಆಪಾದಿತನ ವಿರುದ್ಧದ ಆಪಾದನೆಯನ್ನು ಅವನಿಗೆ ವಿವರಿಸಿ, ಪ್ರಾಸಿಕ್ಯೂಷನ್ ಒದಗಿಸಿದ ಸಾಕ್ಷ್ಯದ ಬಗ್ಗೆ ತಿಳಿಯಹೇಳಿ, ನಂತರ ಆಪಾದಿತನನ್ನು ಕೆಲವು ಪ್ರಶ್ನೆಗಳನ್ನು ಕೇಳುತ್ತಾನೆ. ಪಕ್ಷಗಾರರನ್ನು ಅಥವಾ ಅವರ ವಕೀಲರುಗಳು ಹೇಳುವುದನ್ನು ಕೇಳಿದನಂತರ, ಆಪಾದಿತನನ್ನು ತಪ್ಪಿತಸ್ತನೇ ಅಲ್ಲವೇ ಎಂದು ನಿರ್ಧರಿಸುತ್ತಾನೆ. ಅವನು ತಪ್ಪಿತಸ್ತನಲ್ಲವೆಂದು ಕಂಡುಬಂದರೆ ಅವನನ್ನು ಬಿಡುಗಡೆ ಮಾಡಲಾಗುತ್ತದೆ. ತಪ್ಪಿತಸ್ಥನೆಂದಾದರೆ, ಕಾನೂನಿನಲ್ಲಿ ವಿಧಿಸಿರುವ ನಿರ್ದಿಷ್ಟವಾದ ಶಿಕ್ಷೆಯನ್ನು ಏಕೆ ಕೊಡಬಾರದೆಂದು ಕಾರಣವನ್ನು ಅವನನ್ನು ಕೇಳಲಾಗುತ್ತದೆ.

## ಖರ್ಚುಗಳು

ಪ್ರಾಸಿಕ್ಯೂಷನ್ ಖರ್ಚನ್ನು ಕೊಡುವಂತೆ ಶಿಕ್ಷೆಗೊಳಗಾದ ವ್ಯಕ್ತಿಗೆ ನ್ಯಾಯಾಲಯ ಆದೇಶಿಸುವುದಿಲ್ಲ. ಸರ್ಕಾರವೋ ಇಲ್ಲವೇ ಫಿರ್ಯಾದುದಾರನೋ ಖರ್ಚನ್ನು ಭರಿಸುತ್ತಾರೆ. ಹೇಗಾದರೂ ದಂಡವನ್ನು ವಿಧಿಸುವಾಗ ದಂಡದ ಒಂದು ಭಾಗವನ್ನು

ಹಾನಿಗೊಳಗಾದ ವ್ಯಕ್ತಿಗೆ ಪರಿಹಾರ ರೂಪವಾಗಿ ಕೊಡಬೇಕೆಂದು ನ್ಯಾಯಾಲಯ ನಿರ್ದೇಶಿಸಬಹುದು. ಇದಲ್ಲದೆ, ವಿಚಾರಣೆಗೆ ಹಾಜರಾಗುವ ಫಿರ್ಯಾದುದಾರನ ಅಥವಾ ಸಾಕ್ಷಿಗೆ ತಗಲುವ ಯುಕ್ತವಾದ ಖರ್ಚನ್ನು ಕೊಡುವಂತೆ ಸೂಕ್ತಕಂಡರೆ ಆದೇಶಿಸಬಹುದು. ವಿಚಾರಣೆಯ ಮುಂದೂಡಿಕೆಯನ್ನು ಬೇಡಿದಾಗ, ಖರ್ಚನ್ನು ಕೊಡುವಂತೆ ಪ್ರಾಸಿಕ್ಯೂಷನ್ನಿಗೋ ಅಥವಾ ಆಪಾತದಿತನಿಗೋ ಸಂದರ್ಭೋಚಿತವಾಗಿ ನ್ಯಾಯಾಲಯ ಆದೇಶಿಸಬಹುದು.

## ಅನುಕ್ರಮವಾದ ಮತ್ತು ಸಮವರ್ತಿಯಾದ ಶಿಕ್ಷೆಗಳು

ಒಂದೇ ಪ್ರಕರಣದಲ್ಲಿ ಬೇರೆ ಬೇರೆ ಅಪರಾಧಗಳಿಗೆ ಬೇರೆ ಬೇರೆ ಶಿಕ್ಷೆಗಳನ್ನು ವಿಧಿಸಿದಾಗ, ನ್ಯಾಯಾಲಯವು ಎಲ್ಲಾ ಶಿಕ್ಷೆಗಳನ್ನೂ ಏಕಕಾಲಕ್ಕೆ ಅನುಭವಿಸಬೇಕೆಂದು ಆದೇಶಿಸಬಹುದು. ಆಗ ಆಪಾದಿತನು ಎಲ್ಲಾ ಶಿಕ್ಷೆಗಳಲ್ಲಿ ಹೆಚ್ಚಿನ ಅವಧಿಯ ಶಿಕ್ಷೆಯನ್ನು ಮಾತ್ರ ಅನುಭವಿಸಬೇಕು. ಇಂಥ ನಿರ್ದೇಶನವಿಲ್ಲದಿದ್ದರೆ, ಕೊಟ್ಟ ಶಿಕ್ಷೆಗಳೆಲ್ಲವನ್ನೂ ಒಂದರ ಅವಧಿ ಮುಗಿದ ನಂತರ ಇನ್ನೊಂದನ್ನು ಅನುಭವಿಸಬೇಕು.

ಬೇರೆ ಬೇರೆ ಪಂಗಡದ ಅಪರಾಧಿಕ ನ್ಯಾಯಾಲಯಗಳಿಂದ ಮೇಲ್ಮನವಿ ಸಲ್ಲಿಸಬೇಕಾದ ಆಯಾ ಸ್ಥಳಗಳು ಯಾವುವೆಂದು ತೋರಿಸುವ ಪದಕವನ್ನು ಕೆಳಗೆ ಕೊಟ್ಟಿದೆ:

| | ವಿಚಾರಣಾ ನ್ಯಾಯಾಲಯ | | ಮೇಲ್ಮನವಿ ನ್ಯಾಯಾಲಯ |
|---|---|---|---|
| i | ಉಚ್ಚ ನ್ಯಾಯಾಲಯ | ಅ) | ಅತಿ ವಿಶೇಷ ಅಪರಾಧಿಕ ಅಧಿಕಾರ ವ್ಯಾಪ್ತಿಯಿಂದ ಕೊಟ್ಟ ಶಿಕ್ಷೆಯಿಂದ, ಸರ್ವೋಚ್ಚ ನ್ಯಾಯಾಲಯ |
| | | ಆ) | ಕೆಳಗಿನ ನ್ಯಾಯಾಲಯದಿಂದ ತನಗೇ ವರ್ಗಾಯಿಸಿಕೊಂಡು ಮರಣದಂಡನೆ ವಿಧಿಸಿದ ಪ್ರಕರಣಗಳಲ್ಲಿ ಸರ್ವೋಚ್ಚ ನ್ಯಾಯಾಲಯ (ಸಂವಿಧಾನ ಅನುಚ್ಛೇದ 134(b) ಕೆಳಗೆ) ಬಾಕಿ ಪ್ರಕರಣಗಳಲ್ಲಿ ಸರ್ವೋಚ್ಚ ನ್ಯಾಯಾಲಯ ಸರ್ವೋಚ್ಚ ನ್ಯಾಯಾಲಯದ (ಅಧಿಕಾರ ವ್ಯಾಪ್ತಿಯ ವಿಸ್ತರಣ) ಅಧಿನಿಯಮದ ಅನುಸಾರ |

| | | |
|---|---|---|
| | | ಇ) ಇತರ ಪ್ರಕರಣಗಳು - ಸರ್ವೋಚ್ಚ ನ್ಯಾಯಾಲಯ (ಸಂವಿದಾನದ ಅನುಚ್ಛೇ 134(1)(c)ಯ ಕೆಳಗೆ ಉಚ್ಚನ್ಯಾಯಾಲಯದ ಅನುಮತಿಯಿಂದ, ಇಲ್ಲವೇ ಅನುಚ್ಛೇದ 136ರ ಅನ್ವಯ ಸರ್ವೋಚ್ಚ ನ್ಯಾಯಾಲಯದ ವಿಶೇಷ ಅನುಮತಿಯಿಂದ (ಖಂಡ 375 (b) ಮತ್ತು 376(a) ಗಳಲ್ಲಿನ ಅಪವಾಧಕ್ಕೊಳಪಟ್ಟು) |
| ii | ಸತ್ರ ನ್ಯಾಯಾಧೀಶರು ಮತ್ತು ಅಪರ ಸತ್ರ ನ್ಯಾಯಾಧೀಶರು | ಉಚ್ಚ ನ್ಯಾಯಾಲಯ. ಅಪರಾಧ ನಿರ್ಣಯವಾಗಿ ಏಳು ವರ್ಷಕ್ಕಿಂತ ಹೆಚ್ಚು ಸಜೆ ವಿಧಿಸಿದಾಗ |
| iii | ಸಹಾಯಕ ಸತ್ರ ನ್ಯಾಯಾಧೀಶ | ಸತ್ರ ನ್ಯಾಯಾಧೀಶರು - ಸಂಹಿತೆಯಲ್ಲಿ ಕೊಟ್ಟಿರುವ ಅಪವಾದಗಳಿಗೊಳಪಟ್ಟು |
| iv | ಯಾವುದೇ ನ್ಯಾಯಿಕ ಅಥವಾ ಮಹಾನಗರ ದಂಡಾಧಿಕಾರಿ | ಸತ್ರ ನ್ಯಾಯಾಧೀಶರು – ಯಾವುದೇ ಶಿಕ್ಷೆಯಿಂದ ಸಂಹಿತೆಯಲ್ಲಿ ಕೊಟ್ಟಿರುವ ಅಪವಾದಗಳಿಗೊಳಪಟ್ಟು |

**ಪುನರ್ವಿಮರ್ಶೆ:**

ದಂಡಪ್ರಕ್ರಿಯ ಸಂಹಿತೆಯ 397(1)ನೇ ಖಂಡದ ಕೆಳಗೆ ಕಾರ್ಯ ನಿರ್ವಾಹಕ ಮತ್ತು ನ್ಯಾಯಿಕ ದಂಡಾಧಿಕಾರಿಗಳ ನ್ಯಾಯಾಲಯ ಹಾಗೂ ಸತ್ರ ನ್ಯಾಯಾಲಯಗಳ ಆಜ್ಞೆ/ಆದೇಶವನ್ನು ಉಚ್ಚ ನ್ಯಾಯಾಲಯ ಪುನರ್ವಿಮರ್ಶೆ ಮಾಡುವ ಅಧಿಕಾರವಿದೆ. ಸಹಾಯಕ ಸತ್ರ ನ್ಯಾಯಾಧೀಶ ಹಾಗೂ ಎಲ್ಲ ಕಾರ್ಯ ನಿರ್ವಾಹಕ ಮತ್ತು ನ್ಯಾಯಿಕ ದಂಡಾಧಿಕಾರಿಗಳ ನ್ಯಾಯಾಲಯದಿಂದ ಸತ್ರ ನ್ಯಾಯಾಲಯಕ್ಕೆ ಪುನರ್ವಿಮರ್ಶೆ ಅಧಿಕಾರವಿದೆ.

ಈಗಿನ ವ್ಯವಸ್ಥೆಯಲ್ಲಿ ನ್ಯಾಯಿಕ ದಂಡಾಧಿಕಾರಿಗಳ ಅಥವಾ ಮಹಾನಗರ ದಂಡಾಧಿಕಾರಿಗಳ ಕಾರ್ಯವ್ಯಾಪ್ತಿ ಈ ಕೆಳಗೆ ಕಂಡಂತೆ ಇದೆ:

i. ***ಅಪರಾಧಗಳಾಗದಂತೆ ತಡೆಗಟ್ಟುವುದು:*** ಆಪಾದಿತನನ್ನು ತಪ್ಪಿತಸ್ತನೆಂದು ತೀರ್ಮಾನಿಸಿದ ಮೇಲೆ, ಅವನಿಂದ ಶಾಂತಿಯನ್ನು ಕಾಪಾಡಿಕೊಂಡುಬರುತ್ತೇನೆಂದು ಮುಚ್ಚಳಿಕೆ ಬರೆಸಿಕೊಳ್ಳುವ ಅಧಿಕಾರ; ಕೆಲವು ನಿರ್ದಿಷ್ಟ ಪ್ರಕರಣಗಳಲ್ಲಿ, ಮುಚ್ಚಳಿಕೆ ಬರೆದು ಕೊಡದಿದ್ದಲ್ಲಿ ಜೈಲು ಶಿಕ್ಷೆ ಕೊಡುವ ಅಧಿಕಾರ.

ii. ***ಆದೇಶ:*** ಪೋಷಣೆಯನ್ನು ಮಾಡಿಕೊಳ್ಳುವ ಸ್ಥಿತಿಯಲ್ಲಿಲ್ಲದ ಹೆಂಡತಿ,

ಮಕ್ಕಳು ಮತ್ತು ತಾಯಿ/ತಂದೆಯರನ್ನು ಪೋಷಿಸುವಂತೆ ನಿರ್ದೇಶಿಸುವ ಆದೇಶ.

iii. ***ತನಿಖೆಗೆ ಸಂಬಂಧಿಸಿದ ಹಾಗೆ ಅಧಿಕಾರಗಳು:***

ಅ) ಪರಿಗಣನೆಗೆ ತೆಗೆದುಕೊಳ್ಳಬೇಕಾಗಿಲ್ಲದ ಪ್ರಕರಣ, ಅಥವಾ ಪರಿಗಣಿಸಬಹುದಾದ ಅಪರಾಧಗಳನ್ನು ಪರಿಗಣನೆಗೆ ತೆಗೆದುಕೊಂಡು ತನಿಖೆ ಮಾಡುವಂತೆ ಪೊಲೀಸ್ ಅಧಿಕಾರಿಗೆ ಆದೇಶಕೊಡುವ ಅಧಿಕಾರ.

ಆ) ದಂಡಪ್ರಕ್ರಿಯಾ ಸಂಹಿತೆ 157ನೇ ಖಂಡದ ಕೆಳಗೆ ಪೊಲೀಸ್ ಅಧಿಕಾರಿಯ ವರದಿಯು ಕೈಸೇರಿದ ಮೇಲೆ, ಪೂರ್ವಭಾವಿ ವಿಚಾರಣೆ ಅಥವಾ ತನಿಖೆ ನಡೆಸುವ ಅಧಿಕಾರ.

ಇ) ತನಿಖೆ ನಡೆಯುತ್ತಿದ್ದಾಗ ಆಪಾದಿತ ಮಾಡಿದ ತಪ್ಪೊಪ್ಪಿಗೆ ಮತ್ತು ಹೇಳಿಕೆಗಳನ್ನು ದಾಖಲಿಸುವ ಅಧಿಕಾರ.

ಈ) ಬಂಧನಕ್ಕೊಳಗಾದ ವ್ಯಕ್ತಿಗಳನ್ನು ತನಿಖೆ ಮುಗಿಯುವ ವರೆಗೆ ಸ್ಥಾನ ಬದ್ಧತೆಯಲ್ಲಿ ಇಟ್ಟುಕೊಳ್ಳುವ ಅಧಿಕಾರವನ್ನು ಕೊಡಲು ಆದೇಶ ಮಾಡುವ ಅಧಿಕಾರ.

ಉ) ಆರು ತಿಂಗಳ ಒಳಗೆ ತನಿಖೆ ಪೂರೈಸದಿದ್ದರೆ, ಅದನ್ನು ನಿಲ್ಲಿಸುವ ಅಧಿಕಾರ.

ಊ) ಪೊಲೀಸ್ ವರದಿಗಳು ಬಂದಮೇಲೆ ಆಪಾದಿತನನ್ನು ವಿಚಾರಣೆಮಾಡುವ ಅಧಿಕಾರ.

iv. ***ಅಪರಾಧಗಳನ್ನು ಸಂಜ್ಞಾನಕ್ಕೆ ತೆಗೆದುಕೊಳ್ಳಬಹುದಾದ ಅಧಿಕಾರ:*** ನ್ಯಾಯಿಕ ದಂಡಾಧಿಕಾರಿಯು ಅಪರಾಧವನ್ನು ಪರಿಗಣನೆಗೆ ತೆಗೆದುಕೊಳ್ಳದ ಹೊರತು ವಿಚಾರಣೆ ಪ್ರಾರಂಭವಾಗುವ ಹಾಗಿಲ್ಲ; ಸ್ಥೂಲವಾಗಿ ಹೇಳುವುದಾದರೆ, ಪ್ರಕರಣವೊಂದನ್ನು ವಿಚಾರಣೆ ಮಾಡಲು ಅಥವಾ ಸತ್ರ ನ್ಯಾಯಾಲಯಕ್ಕೆ ವಿಚಾರಣೆಗಾಗಿ ವಹಿಸಲು ಅಧಿಕಾರವಿಲ್ಲದ ದಂಡಾಧಿಕಾರಿಗೆ, ಪರಿಗಣನೆಗೆ ತೆಗೆದುಕೊಳ್ಳುವ ಅಧಿಕಾರವಿಲ್ಲ.

v. ***ಸತ್ರ ನ್ಯಾಯಾಲಯಕ್ಕೆ ಪ್ರಕರಣವೊಂದನ್ನು ವಿಚಾರಣೆಗಾಗಿ ವಹಿಸಿಕೊಡುವ ಅಧಿಕಾರ:*** ದಂಡಾಧಿಕಾರಿಯು ಸಂಜ್ಞಾನಕ್ಕೆ ತೆಗೆದುಕೊಂಡ ಅಪರಾಧವು ಸತ್ರ ನ್ಯಾಯಾಲಯ ಮಾತ್ರ ವಿಚಾರಣೆ ಮಾಡುವಂಥದ್ದಾದರೆ ದಂಡಾಧಿಕಾರಿಯು ಆ ಪ್ರಕರಣವನ್ನು ಆ ನ್ಯಾಯಾಲಯಕ್ಕೆ ವಿಚಾರಣೆಗಾಗಿ ವಹಿಸಿಕೊಡಬೇಕು.

vi. ***ಪ್ರಕರಣವೊಂದನ್ನು ವಿಚಾರಣೆ ಮಾಡುವ ಅಧಿಕಾರ:*** ಸತ್ರ ನ್ಯಾಯಾಲಯ ಮಾತ್ರ ವಿಚಾರಣೆ ಮಾಡಬಹುದಾದ ಪ್ರಕರಣಗಳನ್ನು ಹೊರತುಪಡಿಸಿ, ಮಿಕ್ಕೆಲ್ಲ ಪ್ರಕರಣಗಳನ್ನು ನ್ಯಾಯಿಕ ದಂಡಾಧಿಕಾರಿ ವಿಚಾರಣೆ ಮಾಡಬಹುದು. ಅಪರಾಧದ ತೀವ್ರತೆಗನುಸಾರವಾಗಿ, ಅ) ವಾರಂಟ್ ಪ್ರಕರಣ ಆ) ಸಮನ್ಸ್ ಪ್ರಕರಣ ಇ) ಸಂಕ್ಷಿಪ್ತ ನಡವಳಿಕೆ ಪ್ರಕರಣ, ಎಂದು ವಿಂಗಡಿಸಲಾಗಿದ್ದು,

ಅವುಗಳಿಗೆ ಅನ್ವಯವಾಗುವ ಬೇರೆ ಬೇರೆ ಕ್ರಮಗಳಂತೆ ವಿಚಾರಣೆ ಮಾಡಲಾಗುತ್ತದೆ.

ಅಪರಾಧವೊಂದನ್ನು ಮೊದಲನೆ ದರ್ಜೆಯ ದಂಡಾಧಿಕಾರಿ ವಿಚಾರಣೆ ಮಾಡಬೇಕೇ ಇಲ್ಲವೆ ಎರಡನೆ ದರ್ಜೆ ದಂಡಾಧಿಕಾರಿ ವಿಚಾರಣೆ ಮಾಡಬೇಕೆ ಎಂಬುದನ್ನು ದಂಡಪ್ರಕ್ರಿಯಾ ಸಂಹಿತೆಯ ಮೊದಲನೆ ಅನುಸೂಚಿಯಲ್ಲಿ ಕೊಟ್ಟಿರುವಂತೆ ನಿರ್ಧರಿಸಲಾಗುತ್ತದೆ. ಮೊದಲನೆಯ ಅನುಸೂಚಿಯಲ್ಲಿ ಕೆಲವು ಅಪರಾಧಗಳಿಗೆದುರಾಗಿ ಉದಾ: ಭಾರತ ದಂಡಸಂಹಿತೆಯ 461,462ನೇ ಖಂಡಗಳು - ಹೇಳಿರುವ 'ದಂಡಾಧಿಕಾರಿ' ಎಂಬ ಪದವನ್ನು ಮೊದಲನೆ ಅಥವಾ ಎರಡನೆ ದರ್ಜೆಯ ದಂಡಾಧಿಕಾರಿ, ಎಂಬ ಅರ್ಥದಲ್ಲಿ ಉಪಯೋಗಿಸಲಾಗಿದೆ. ಹೊಸಸಂಹಿತೆಯಲ್ಲಿ ಕಾರ್ಯ ನಿರ್ವಾಹಕ ದಂಡಾಧಿಕಾರಿಗಳಿಗೆ ವಿಚಾರಣೆ ನಡೆಸುವ ಅಧಿಕಾರವಿಲ್ಲ:

## ಮುಖ್ಯ ನ್ಯಾಯಿಕ ದಂಡಾಧಿಕಾರಿ ಮತ್ತು ಮುಖ್ಯ ಮಹಾನಗರ ದಂಡಾಧಿಕಾರಿಯ ಅಧಿಕಾರಗಳು:

ಮೇಲೆ ತಿಳಿಸಿರುವ ಅಧಿಕಾರಗಳಲ್ಲದೆ, ಈ ಕೆಳಗಿನ ಅಧಿಕಾರಗಳೂ ಇವರಿಗೆ ಇವೆ:

i. ನ್ಯಾಯಿಕ ದಂಡಾಧಿಕಾರಿಗಳ ಸ್ಥಳೀಯ ಅಧಿಕಾರ ವ್ಯಾಪ್ತಿಯನ್ನು ನಿಗದಿ ಮಾಡುವುದು.

ii. ತನಗೆ ಅಧೀನರಾದ ನ್ಯಾಯಿಕ ದಂಡಾಧಿಕಾರಿಗಳ ಕೆಲಸದ ನಿಯಂತ್ರಣ ಮತ್ತು ಮೇಲ್ವಿಚಾರಣೆ ಹಾಗೂ ಅವರುಗಳಿಗೆ ಕೆಲಸಗಳ ಹಂಚಿಕೆ.

iii. ಜಪ್ತಿಯಾದ ಆಸ್ತಿಯ ಬಗ್ಗೆ ಕ್ಲೇಮುಗಳನ್ನೂ ಅಥವಾ ಆಕ್ಷೇಪಣೆಗಳನ್ನು ತೀರ್ಮಾನಿಸುವುದು, ಇಲ್ಲವೇ ಅದನ್ನು ವಿಲೇಮಾಡಲು ಬೇರೊಬ್ಬ ದಂಡಾಧಿಕಾರಿಗೆ ವಹಿಸುವುದು.

iv. ತನಿಖೆ ಇತ್ಯಾದಿಗಳಿಗೆ ಬೇಕಾದ ಅಂಚೆ ವಸ್ತುಗಳನ್ನು ಅಧೀನಪಡಿಸುವಂತೆ ಅಂಚೆ ಅಧಿಕಾರಿಗಳಿಗೆ ಕಡ್ಡಾಯ ಮಾಡುವುದು ಮತ್ತು ಅವುಗಳ ತಪಾಸಣೆಗಾಗಿ ವಾರಂಟ್ ಹೊರಡಿಸುವುದು.

v. ಭದ್ರತೆಯನ್ನು ಕೊಡಲಾಗದೆ ಬಂಧನಕ್ಕೊಳಗಾದ ವ್ಯಕ್ತಿಗಳನ್ನು ಬಿಡುಗಡೆಮಾಡುವುದು.

vi. ತಾನು ಪರಿಗಣನೆಗೆ ತೆಗೆದುಕೊಂಡ ಪ್ರಕರಣವನ್ನು ಅಧೀನ ದಂಡಾಧಿಕಾರಿಗೆ ವಿಚಾರಣೆ ಮಾಡಲು ವಹಿಸುವುದು, ಅಥವಾ ಆಪಾದಿತನ ಕೋರಿಕೆಯ ಮೇಲೆ ಪ್ರಕರಣವನ್ನು ಒಬ್ಬ ದಂಢಾಧಿಕಾರಿಯಿಂದ ಇನ್ನೊಬ್ಬ ದಂಡಾಧಿಕಾರಿಗೆ ವರ್ಗಾಯಿಸುವುದು.

vii. ತನ್ನ ಅಧಿಕಾರ ವ್ಯಾಪ್ತಿಯಲ್ಲಿ ಸಾಕ್ಷಿಗಳ ವಿಚಾರಣೆ ಮಾಡಲು ಬೇರೆ

ನ್ಯಾಯಾಲಯ ಅಥವಾ ದಂಡಾಧಿಕಾರಿಯಿಂದ ಆಯೋಗವನ್ನು ಪಡೆದುಕೊಳ್ಳುವುದು.

viii. ಸಾಕ್ಷ್ಯ ತೆಗೆದುಕೊಂಡಾದ ಮೇಲೆ ಪ್ರಕರಣವು ಮುಖ್ಯ ನ್ಯಾಯಿಕ ದಂಡಾಧಿಕಾರಿಯಿಂದ ವಿಚಾರಣೆಗೆ ಒಳಪಡಬೇಕೆಂದು ದಂಡಾಧಿಕಾರಿ ಅಭಿಪ್ರಾಯ ಪಟ್ಟರೆ, ಅಥವಾ ಸಾಕಷ್ಟು ತೀವ್ರವಾದ ಶಿಕ್ಷೆಯನ್ನು ಆ ದಂಧಾಧಿಕಾರಿ ಕೊಡಲಾಗದಿದ್ದರೆ, ಆ ಪ್ರಕರಣಗಳನ್ನು ತಾನೇ ವಹಿಸಿಕೊಳ್ಳುವುದು.

ix. ಅಧೀನ ದಂಡಾಧಿಕಾರಿಗೆ ವಹಿಸಿಕೊಟ್ಟ ಯಾವುದೇ ಪ್ರಕರಣವನ್ನು ಹಿಂದೆ ತೆಗೆದುಕೊಳ್ಳುವುದು.

### *ಬೇರೆ ಬೇರೆ ದರ್ಜೆಯ ನ್ಯಾಯಾಲಯಗಳು ವಿಧಿಸಬಹುದಾದ ಗರಿಷ್ಠ ಶಿಕ್ಷೆಗಳು*

| | ನ್ಯಾಯಾಲಯಗಳು | ಗರಿಷ್ಠ ಶಿಕ್ಷೆ |
|---|---|---|
| i. | ಉಚ್ಚ ನ್ಯಾಯಾಲಯ | ಕಾನೂನು ನಿಗದಿಪಡಿಸಿರುವ ಯಾವುದೇ ಶಿಕ್ಷೆ (28(1)ನೇ ಖಂಡ) |
| ii. | ಸತ್ರ ನ್ಯಾಯಾಧೀಶ ಅಥವಾ ಅಪರ ಸತ್ರ ನ್ಯಾಯಾಧೀಶ | ಕಾನೂನು ನಿಗದಿಪಡಿಸಿರುವ ಯಾವುದೇ ಶಿಕ್ಷೆ. ಆದರೆ ಮರಣ ದಂಡನೆ ಶಿಕ್ಷೆಯನ್ನು ಉಚ್ಚ ನ್ಯಾಯಾಲಯ ಸ್ಥಿರೀಕರಿಸಬೇಕು. |
| iii. | ಸಹಾಯಕ ಸತ್ರ ನ್ಯಾಯಾಧೀಶ | ಮರಣ ದಂಡನೆ, ಜೀವಾವಧಿ ಸಜೆ, ಅಥವಾ ಹತ್ತು ವರ್ಷಕ್ಕೆ ಮೀರಿದ ಸಜೆ ಇವುಗಳನ್ನು ಹೊರತುಪಡಿಸಿ, ಕಾನೂನು ನಿಗದಿಪಡಿಸಿರುವ ಯಾವುದೇ ಶಿಕ್ಷೆ. |
| iv. | ಮುಖ್ಯ ನ್ಯಾಯಿಕ ದಂಡಾಧಿಕಾರಿ ಮತ್ತು ಮುಖ್ಯ ಮಹಾನಗರ ದಂಡಾಧಿಕಾರಿ | ಮರಣ ದಂಡನೆ, ಜೀವಾವಧಿ ಸಜೆ, ಅಥವಾ ಏಳು ವರ್ಷಕ್ಕೆ ಮೀರಿದ ಸಜೆ ಇವುಗಳನ್ನು ಹೊರತುಪಡಿಸಿ ಕಾನೂನು ನಿಗದಿಪಡಿಸಿರುವ ಯಾವುದೇ ಶಿಕ್ಷೆ. |
| v. | ಮಹಾನಗರ ದಂಡಾಧಿಕಾರಿ ಅಥವಾ ಮೊದಲನೆ ದರ್ಜೆಯ ದಂಡಾಧಿಕಾರಿ | ಮೂರು ವರ್ಷಗಳಿಗೆ ಮೀರದ ಸಜೆ, 5,000.00 ರೂ.ಗಳಿಗೆ ಮೀರದ ದಂಡ. |
| vi. | ಎರಡನೆ ದರ್ಜೆಯ ದಂಡಾಧಿಕಾರಿ ಅಥವಾ ವಿಶೇಷ ನ್ಯಾಯಿಕ ದಂಡಾಧಿಕಾರಿ | ಒಂದು ವರ್ಷಕ್ಕೆ ಮೀರದ ಸಜೆ ಮತ್ತು ಒಂದು ಸಾವಿರ ರೂ.ಗೆ ಮೀರದ ದಂಡ |

## ಕಾರ್ಯ ನಿರ್ವಾಹಕ ದಂಡಾಧಿಕಾರಿಗಳ ಅಧಿಕಾರಗಳು

ನ್ಯಾಯಿಕ ಮತ್ತು ಕಾರ್ಯ ನಿರ್ವಾಹಕ ದಂಡಾಧಿಕಾರಿಗಳ ನಡುವಣ ಪ್ರಾಥಮಿಕ ವ್ಯತ್ಯಾಸವೆಂದರೆ ಅವರುಗಳು ನೇಮಕ ಹೊಂದುವ ರೀತಿ ಮತ್ತು ಅವರ ಹೊಣೆಗಾರಿಕೆ ಇವುಗಳಲ್ಲಿದೆ:

i. ನ್ಯಾಯಿಕ ದಂಡಾಧಿಕಾರಿಗಳನ್ನು ಉಚ್ಚ ನ್ಯಾಯಾಲಯ ನೇಮಕ ಮಾಡುತ್ತದೆ. ಕಾರ್ಯ ನಿರ್ವಾಹಕ ದಂಡಾಧಿಕಾರಿಗಳ ನೇಮಕವನ್ನು ರಾಜ್ಯ ಸರ್ಕಾರ ಉಚ್ಚ ನ್ಯಾಯಾಲಯದೊಡನೆ ಸಮಾಲೋಚಿಸಿ ಮಾಡುತ್ತದೆ.

ii. ಎಲ್ಲ ನ್ಯಾಯಿಕ ದಂಡಾಧಿಕಾರಿಗಳೂ ಮುಖ್ಯ ನ್ಯಾಯಿಕ ದಂಡಾಧಿಕಾರಿಯ ಮೂಲಕ ಸತ್ರ ನ್ಯಾಯಾಧೀಶರಿಗೆ ಅಧೀನರಾಗಿದ್ದು ಅವರ ನಿಯಂತ್ರಣಕ್ಕೆ ಮತ್ತು ಅಂತಿಮವಾಗಿ ಉಚ್ಚ ನ್ಯಾಯಾಲಯದ ನಿಯಂತ್ರಣ ಮತ್ತು ಮೇಲ್ವಿಚಾರಣೆಗೆ ಒಳಪಟ್ಟಿದ್ದಾರೆ. ಕಾರ್ಯ ನಿರ್ವಾಹಕ ದಂಡಾಧಿಕಾರಿಗಳಾದರೋ ಜಿಲ್ಲಾ ದಂಡಾಧಿಕಾರಿಯವರಿಗೆ ಅಧೀನರಾಗಿದ್ದು, ಜಿಲ್ಲಾ ದಂಡಾಧಿಕಾರಿಯವರು ರಾಜ್ಯ ಸರ್ಕಾರದ ಆಡಳಿತಾತ್ಮಕ ನಿಯಂತ್ರಣಕ್ಕೆ ಒಳಪಟ್ಟಿದ್ದಾರೆ.

ಹೇಗಾದರೂ ಕಾರ್ಯ ನಿರ್ವಾಹಕ ದಂಡಾಧಿಕಾರಿಯವರು ಮಾಡಿದ ಯಾವುದೇ ಆದೇಶವು ಉಚ್ಚ ನ್ಯಾಯಾಲಯ ಅಥವಾ ಸತ್ರ ನ್ಯಾಯಾಧೀಶರ ಪುನರ್ವಿಮರ್ಶೆ ಅಧಿಕಾರಕ್ಕೆ ಒಳಪಟ್ಟಿದೆ.

ಹೊಸ ಸಂಹಿತೆಯ ದ್ವಾರಾ ಕಾರ್ಯನಿರ್ವಾಹಕ ದಂಡಾಧಿಕಾರಿಯವರಲ್ಲಿ ನಿಹಿತಗೊಳಿಸಲ್ಪಟ್ಟ ಅಧಿಕಾರವು ಆಡಳಿತಾತ್ಮಕವಾಗಿದ್ದು, ಹೆಚ್ಚೆಂದರೆ ನ್ಯಾಯಿಕ ಸ್ವರೂಪ ಹೊಂದಿರುವಂಥದ್ದಾಗಿದೆ. ಉದಾ:

i. ತನ್ನೆದುರಿನಲ್ಲಿ ಮಾಡಿದ ಅಪರಾಧಕ್ಕೆ ಬಂಧನ

ii. ವಾರಂಟ್ ಇಲ್ಲದೆ ಪೊಲೀಸರಿಂದ ಬಂಧಿಸಲ್ಪಟ್ಟ ವ್ಯಕ್ತಿಗಳ ಮೇಲಿನ ಹತೋಟಿ.

iii. ನ್ಯಾಯಾಲಯದ ಆಜ್ಞೆಯ ಅನುಸಾರ ಬಂಧನದ ವಾರಂಟ್‌ಗಳ ಜಾರಿ.

iv. ಯಾವುದೇ ದಸ್ತಾವೇಜನ್ನು ಸ್ವಾಧೀನಪಡಿಸುವಂತೆ ಅಂಚೆ ಅಧಿಕಾರಿಗಳಿಗೆ ಕಡ್ಡಾಯ ಮಾಡುವುದು.

v. ತಪಾಸಣೆ ವಾರಂಟ್‌ಗಳನ್ನು ಹೊರಡಿಸುವುದು ಮತ್ತು ತನ್ನೆದುರಿನಲ್ಲಿ ತಪಾಸಣೆ ಮಾಡುವಂತೆ ನಿರ್ದೇಶಿಸುವುದು.

vi. ಅಪಹರಿಸಲ್ಪಟ್ಟ ಸ್ತ್ರೀಯರನ್ನು ಹಿಂದಿರುಗಿಸಲು ಒತ್ತಾಯ ಮಾಡುವುದು.

vii. ಅಪರಾಧಿಯೆಂದು ತೀರ್ಮಾನಿಸಲಾದ ಪ್ರಕರಣಗಳನ್ನು ಬಿಟ್ಟು ಇತರ ಪ್ರಕರಣಗಳಲ್ಲಿ ಶಾಂತಿ ಕಾಪಾಡಲು ಭದ್ರತಾ ಪತ್ರ ಕೊಡುವಂತೆ ಆದೇಶ ಮಾಡುವುದು, ಹಾಗೆ ಕೊಡದಿದ್ದರೆ ಬಂಧನಕ್ಕೆ ಆದೇಶ ಮಾಡುವುದು.

viii. ಸ್ಥಿರ ಆಸ್ತಿಯ ಸಂಬಂಧವಾಗಿ ಅಪಾಯ ಅಥವಾ ಜಗಳ ಉಂಟಾಗಬಹುದೆಂಬ

ಶಂಕೆ ಇದ್ದಾಗ ಅಥವಾ ಪೀಡೆಯ ಪ್ರಕರಣಗಳಲ್ಲಿ ನಿಷೇಧಾಜ್ಞೆಯನ್ನು ಹೊರಡಿಸುವುದು.

ix. ಆತ್ಮಹತ್ಯೆ, ಅಪಘಾತದಿಂದ ಸಾವು ಮತ್ತು ಸಂಶಯಾಸ್ಪದ ಸಾವು ಈ ಪ್ರಕರಣಗಳಲ್ಲಿ ಮಹಜರ್ ನಡೆಸುವುದು.

x. ಸಾಕ್ಷಿಗಳ ಹೇಳಿಕೆಯನ್ನು ಪಡೆಯಲು ಆಯೋಗವನ್ನು ನೇಮಕ ಮಾಡುವ ಅಧಿಕಾರ.

xi. ದೂರುಗಳನ್ನು ಮಾಡುವುದು.

xii. ಯಾವುದೇ ನ್ಯಾಯಾಧೀಶ ಅಥವಾ ದಂಡಾಧಿಕಾರಿಯ ಮುಂದೆ ಪ್ರಮಾಣಪತ್ರವನ್ನು ಪ್ರಮಾಣೀಕರಿಸುವುದು.

xiii. ಸ್ಥಳ ತನಿಖೆಯನ್ನು ಮಾಡುವ ಅಧಿಕಾರ.

xiv. ಸಂಹಿತೆಯ 411ನೇ ಖಂಡದ ಕೆಳಗೆ ಯಾವುದೇ ಪ್ರಕರಣವನ್ನು ವರ್ಗಾವಣೆ ಮಾಡುವುದು ಅಥವಾ ಹಿಂದಕ್ಕೆ ತೆಗೆದುಕೊಳ್ಳುವುದು.

xv. ಅಪರಾಧಿಕ ನ್ಯಾಯಾಲಯದ ಮುಂದೆ ಹಾಜರುಪಡಿಸದೇ ಇದ್ದ, ಪೊಲೀಸರು ವಶಪಡಿಸಿಕೊಂಡ ಆಸ್ತಿಯ ವಿಲೇವಾರಿ.

xvi. ದಂಡ ಪ್ರಕ್ರಿಯಾಸಂಹಿತೆಯ (1973) 444ನೇ ಖಂಡದ ಕೆಳಗೆ ಜಾಮೀನುದಾರನನ್ನು ವಿಮೋಚಿಸುವುದು.

xvii. ದಂಡಪ್ರಕ್ರಿಯಾ ಸಂಹಿತೆಯ, (1973) ಖಂಡ 107ರೊಂದಿಗೆ ಓದಿಕೊಂಡು ಖಂಡ 446(1) ಎರಡನೇ ಪ್ಯಾರಾದಡಿ ಬಾಂಡುಗಳನ್ನು ಮುಟ್ಟುಗೋಲು ಹಾಕಿಕೊಂಡು ಜುಲ್ಮಾನೆಯನ್ನು ವಿಧಿಸುವ ಅಧಿಕಾರ.

## ಅಪರಾಧಿಕ ನ್ಯಾಯಾಲಯಗಳ ಅಧಿಕಾರಿಗಳು

**ಸಾರ್ವಜನಿಕ ಅಭಿಯೋಜಕರುಗಳು** (ಪಬ್ಲಿಕ್ ಪ್ರಾಸಿಕ್ಯೂಟರುಗಳು): ಅಧೀನ ನ್ಯಾಯಾಲಯಗಳಿಂದ ಹಿಡಿದು ಉಚ್ಚ ನ್ಯಾಯಾಲಯದವರೆಗೆ ಎಲ್ಲಾ ಅಪರಾಧಿಕ ನ್ಯಾಯಾಲಯಗಳಲ್ಲಿನ ಅಭಿಯೋಜನೆಯನ್ನು ರಾಜ್ಯ ಮತ್ತು ಕೇಂದ್ರ ಸರ್ಕಾರದ ಪರವಾಗಿ ಸಾರ್ವಜನಿಕ ಅಭಿಯೋಜಕರುಗಳು ನಡೆಸುತ್ತಾರೆ. ಈ ಅಭಿಯೋಜಕರುಗಳು ಅರ್ಹತೆ ಇದ್ದ ವಕೀಲರುಗಳಾಗಿದ್ದು ಇವರನ್ನು ರಾಜ್ಯ ಮತ್ತು/ಅಥವಾ ಕೇಂದ್ರ ಸರ್ಕಾರ, ಹಾಗೂ ನ್ಯಾಯಾಲಯಗಳು ನೇಮಿಸುತ್ತವೆ.

ಅಭಿಯೋಜಕರುಗಳಲ್ಲಿ ಕೆಳಕಂಡ ದರ್ಜೆಯವರು ಇರುತ್ತಾರೆ:

i. ಕೇಂದ್ರ ಸರ್ಕಾರ ನೇಮಿಸಿದ ಅಭಿಯೋಜಕರುಗಳು.

ii. ರಾಜ್ಯ ಸರ್ಕಾರ ನೇಮಿಸಿದ ಅಭಿಯೋಜಕರುಗಳು.

iii. ರಾಜ್ಯ ಅಥವಾ ಕೇಂದ್ರ ಸರ್ಕಾರಗಳು ನೇಮಿಸಿದ ಹೆಚ್ಚುವರಿ ಅಭಿಯೋಜಕರುಗಳು.

iv. ಕೇಂದ್ರ ಸರ್ಕಾರದಿಂದ ನೇಮಿಸಲ್ಪಟ್ಟ ವಿಶೇಷ ಅಭಿಯೋಜಕರುಗಳು.

v. ರಾಜ್ಯ ಸರ್ಕಾರದಿಂದ, ವಿಶೇಷ ಪ್ರಕರಣಗಳಿಗಾಗಿ ನಿರ್ದಿಷ್ಟ ಸಮಯದವರೆಗೆ ನೇಮಿಸಲ್ಪಟ್ಟ ವಿಶೇಷ ಅಭಿಯೋಜಕರುಗಳು.

ದಂಡಾಧಿಕಾರಿಗಳ ನ್ಯಾಯಾಲಯಗಳಲ್ಲಿ ಅಭಿಯೋಜನೆಗಳನ್ನು ನಿರ್ವಹಿಸಲು, ಯಾವುದೇ ಜಿಲ್ಲೆಯಲ್ಲಿ ಒಂದು ಅಥವಾ ಒಂದಕ್ಕಿಂತ ಹೆಚ್ಚು ಸಹಾಯಕ ಅಭಿಯೋಜಕರುಗಳನ್ನು ಸಹ ರಾಜ್ಯ ಅಥವಾ ಕೇಂದ್ರ ಸರ್ಕಾರ ನೇಮಿಸುತ್ತದೆ. ಇವರುಗಳ ಸಂಬಳ ಮತ್ತು ಎಲ್ಲಾ ಭತ್ಯೆಗಳನ್ನು ಈ ಸರ್ಕಾರಗಳೇ ಕೊಡುತ್ತವೆ. ಈ ಅಭಿಯೋಜಕರುಗಳಿಗಿರಬೇಕಾದ ವಿದ್ಯಾರ್ಹತೆ/ಅನುಭವ, ಮತ್ತು ಅವರನ್ನು ನೇಮಿಸುವ ವಿಧಾನವನ್ನು ದಂಡ ಪ್ರಕ್ರಿಯಾ ಸಂಹಿತೆಯಲ್ಲಿ ಹೇಳಲಾಗಿದೆ. ಅವರುಗಳನ್ನು ಗೊತ್ತಾದ ಅವಧಿಗೆ ನೇಮಿಸಬಹುದು, ಅವರ ಅಧಿಕಾರಾವಧಿಯನ್ನು ನವೀಕರಿಸಬಹುದು, ಅವಧಿಯ ಕೊನೆಯಲ್ಲಿ, ಅಥವಾ ಮುಂಚೆಯೇ ಇಲ್ಲ, ನಂತರ, ನಿಯಮಗಳಿಗನುಸಾರ ಅವರುಗಳನ್ನು ತೆಗೆಯಬಹುದು. ಸಾರ್ವಜನಿಕ ಅಭಿಯೋಜಕರುಗಳು ರಾಜ್ಯದ ಪರವಾಗಿ ನಿಂತುಕೊಂಡು ರಾಜ್ಯದ ಹೆಸರಿನಲ್ಲಿ ಎಲ್ಲಾ ನಡವಳಿಕೆಗಳನ್ನು ನಡೆಸಿಕೊಡುತ್ತಾರೆಯೇ ವಿನಾ, ಅವರು ಪೀಡಕರಲ್ಲ. ತಮ್ಮ ಸ್ಥಾನದ ಹೊಣೆಯರಿತು, ತಮ್ಮ ಕರ್ತವ್ಯಗಳನ್ನು ನ್ಯಾಯಯುತವಾಗಿ, ನಿರ್ಭೀತಿಯಿಂದ ನಿರ್ವಹಿಸುತ್ತಾರೆಂದು ನಿರೀಕ್ಷಿಸಲ್ಪಟ್ಟಿದೆ. ಸತ್ಯವನ್ನು ಕಂಡುಹಿಡಿಯುವಲ್ಲಿ ನ್ಯಾಯಾಲಯಕ್ಕೆ ನೆರವು ನೀಡುವುದೇ ಅವರ ಉದ್ದೇಶವಾಗಿರಬೇಕು. ಶಿಕ್ಷೆಗಳನ್ನು ಕೊಡಿಸುವುದೇ ಆಗಲೀ, ಅಥವಾ ತಾನು ಪ್ರತಿನಿಧಿಸುವ ಸರ್ಕಾರಿ ಇಲಾಖೆಗಳನ್ನು ತೃಪ್ತಿಪಡಿಸುವುದೇ ಆಗಲೀ ಒಬ್ಬ ಆದರ್ಶಪ್ರಾಯ ಅಭಿಯೋಜಕನ ಆಸಕ್ತಿಯಾಗಿರಬಾರದು. ಪರಂತು, ಅವರು ನ್ಯಾಯ ದೊರಕಿಸುವ ಮಧ್ಯವರ್ತಿಗಳು. ಶಿಕ್ಷೆಗಳನ್ನು ಕೊಡಿಸುವುದರಲ್ಲಿ ಸಭ್ಯತೆಯೆನಿಸಲಾಗದ ತೀವ್ರಾಸಕ್ತಿ ಅವರಲ್ಲಿರಬಾರದು. ಏನೇ ಆಗಲಿ ಶಿಕ್ಷೆಗಳನ್ನು ಕೊಡಿಸುವುದು ಮಾತ್ರ ಅಭಿಯೋಜಕರುಗಳ ಕರ್ತವ್ಯವಲ್ಲ: ಪರಂತು, ತಮ್ಮ ವಶದಲ್ಲಿರುವ ಎಲ್ಲಾ ಸಾಕ್ಷ್ಯಗಳನ್ನು - ಅವು ಆಪಾದಿತನ ವಿರುದ್ಧವಾಗಿರಲಿ, ಪರವಾಗಿರಲಿ - ನ್ಯಾಯಾಲಯದ ಮುಂದಿಟ್ಟು, ಆಪಾದಿತನು ತನ್ನ ಮೇಲೆ ಆರೋಪ ಮಾಡಲಾದ ಅಪರಾಧವನ್ನು ಮಾಡಿದ್ದಾನೋ, ಮಾಡಿಲ್ಲವೋ ಎಂಬುದನ್ನು ನ್ಯಾಯಾಲಯದ ವಿವೇಚನೆಗೆ ಬಿಡಬೇಕು. ಸಾರ್ವಜನಿಕ ಅಭಿಯೋಜಕರುಗಳು ನ್ಯಾಯಾಲಯದ ಅಧಿಕಾರಿಗಳು. ನ್ಯಾಯಾಲಯದ ಮುಂದೆ ವೃತ್ತಿ ನಡೆಸುವ ಬೇರೆ ಯಾವ ವಕೀಲನಂತೆ, ನಿಷ್ಪಕ್ಷಪಾತವಾಗಿಯೂ ನ್ಯಾಯಯುತವಾಗಿಯೂ ನಡೆದುಕೊಳ್ಳಬೇಕು. ಅವರು ಶ್ರದ್ಧೆ ಮತ್ತು ಹುರುಪಿನಿಂದ ಅಭಿಯೋಜನೆಯನ್ನು ನಡೆಸುವುದೆಂದು ನಿರೀಕ್ಷಿಸಲಾಗಿದ್ದು ಯುಕ್ತಾಯುಕ್ತ ವಿವೇಚನೆ ಮತ್ತು ಪರ್ಯಾಲೋಚಿಸಿದ ದೃಷ್ಟಿಯಿಂದ ನ್ಯಾಯಾಲಯಕ್ಕೆ ನೆರವು ನೀಡಲು ಬದ್ಧರಾಗಿದ್ದಾರೆ.

# ವ್ಯವಹಾರ ನ್ಯಾಯಾಲಯಗಳು ಶ್ರೇಣಿ ಮತ್ತು ಪ್ರಕ್ರಿಯೆ

ವ್ಯಾಜ್ಯಗಳನ್ನು ತೀರ್ಮಾನ ಮಾಡಲು ಪ್ರತಿ ರಾಜ್ಯದಲ್ಲೂ ಇರುವ ಅತ್ಯುನ್ನತ ನ್ಯಾಯಾಲಯವೆಂದರೆ ಉಚ್ಚ ನ್ಯಾಯಾಲಯ. ಉಚ್ಚ ನ್ಯಾಯಾಲಯಗಳಿಗೆ ವ್ಯಾಪಹಾರಿಕ, ಅಪರಾಧಿಕ ಎರಡರಲ್ಲೂ ಮೂಲ ಹಾಗೂ ಮೇಲ್ಮನವಿ ಅಧಿಕಾರ ವ್ಯಾಪ್ತಿ ಇದೆ. ಉಚ್ಚ ನ್ಯಾಯಾಲಯಕ್ಕೆ ಮೂಲ ಅಧಿಕಾರ ವ್ಯಾಪ್ತಿ ಇಲ್ಲದಿರುವ ದಾವೆಗಳನ್ನು ಜಿಲ್ಲಾ ನ್ಯಾಯಾಲಯಗಳಲ್ಲಿ ದಾಖಲು ಮಾಡಬೇಕು. ವ್ಯವಹಾರ ಪ್ರಕ್ರಿಯೆ ಸಂಹಿತೆಯ ಕೆಳಗೆ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲೂ ಈ ನ್ಯಾಯಾಲಯಗಳು ಸ್ಥಾಪಿಸಲ್ಪಟ್ಟಿವೆ.

ಪ್ರತಿ ರಾಜ್ಯದಲ್ಲೂ ಮೂರು ಹಂತದ ವ್ಯವಹಾರ ನ್ಯಾಯಾಲಯಗಳು ವ್ಯವಸ್ಥೆ ಇದೆ.

ಕೆಳಗಿನ ಹಂತ (i) ಸಬ್ ಜಡ್ಜಿ/ಅಧೀನ ನ್ಯಾಯಾಧೀಶ (ಮೂರನೆಯ ದರ್ಜೆ), ಮತ್ತು ಸಬ್ ಜಡ್ಜಿ, (ಎರಡನೆಯ ದರ್ಜೆ)

ಎರಡನೆಯ ಹಂತ (ii) ಅಧೀನ ಸಿವಿಲ್ ನ್ಯಾಯಾಧೀಶ, (ಮೊದಲನೆ ದರ್ಜೆ)

ಮೂರನೆಯ ಹಂತ (iii) ಜಿಲ್ಲಾ ನ್ಯಾಯಾಧೀಶ ಮತ್ತು ಅಪರ ಜಿಲ್ಲಾ ನ್ಯಾಯಾಧೀಶ

ಕೆಳಗಿನ ಹಂತದ, ಮೂರನೆ ದರ್ಜೆಯ ಮತ್ತು ಎರಡನೆಯ ದರ್ಜೆಯ ನ್ಯಾಯಾಧೀಶರುಗಳು ವಾಸ್ತವವಾಗಿ ಒಂದೇ ದರ್ಜೆಯಲ್ಲಿ ಬರುತ್ತಾರೆ. ಆದರೆ ದಾವೆಯ ಮೌಲ್ಯದ ಬಗ್ಗೆ ಅವರುಗಳಿಗೆ ಇರುವ ಅಧಿಕಾರ ವ್ಯಾಪ್ತಿಯಲ್ಲಿ ವ್ಯತ್ಯಾಸ ಇದೆ. ಎರಡನೆಯ ಹಂತದ ಮೊದಲನೆ ದರ್ಜೆಯ ಸಿವಿಲ್ ನ್ಯಾಯಾಧೀಶರಿಗೆ ಇರುವ ಅಧಿಕಾರ ವ್ಯಾಪ್ತಿ ದಾವೆಯ ಮೌಲ್ಯದಿಂದ ಸೀಮಿತಗೊಂಡಿಲ್ಲ. ಅರ್ಥಾತ್ ದಾವೆಯ ಮೌಲ್ಯ ಎಷ್ಟಿದ್ದರೂ ಈ ನ್ಯಾಯಾಲಯದಲ್ಲಿ ದಾವೆಯನ್ನು ದಾಖಲು ಮಾಡಬಹುದು. ಕೆಲವು ಪ್ರಕರಣಗಳಲ್ಲಿ ಈ ನ್ಯಾಯಾಧೀಶರುಗಳಿಗೆ ಮೇಲ್ಮನವಿ ಅಧಿಕಾರ ವ್ಯಾಪ್ತಿಯೂ ಇದೆ. ಮೂರನೆಯ ಹಂತದ ನ್ಯಾಯಾಧೀಶರುಗಳಿಗೆ ಕೆಳಗಿನ ಹಂತಗಳ ನ್ಯಾಯಾಧೀಶರು ಕೊಟ್ಟ ಯಾವುದೇ ತೀರ್ಪು ಅಥವಾ ಆದೇಶಗಳ ಮೇಲೆ ಮೇಲ್ಮನವಿ ಅಧಿಕಾರ ವ್ಯಾಪ್ತಿ ಇದೆ. ರಾಜ್ಯದಲ್ಲಿರುವ ಎಲ್ಲಾ ನ್ಯಾಯಾಲಯಗಳೂ ಉಚ್ಚ ನ್ಯಾಯಾಲಯಕ್ಕೆ ಅಧೀನವಾಗಿದ್ದು ಪ್ರತಿ ಜಿಲ್ಲೆಯಲ್ಲೂ ಜಿಲ್ಲಾ ನ್ಯಾಯಾಲಯವೇ ಉನ್ನತ ನ್ಯಾಯಾಲಯವಾಗಿರುತ್ತವೆ.

ಜಿಲ್ಲಾ ನ್ಯಾಯಾಧೀಶರು, ಅಪರ ಜಿಲ್ಲಾ ನ್ಯಾಯಾಧೀಶರು ಮತ್ತು ಮೊದಲನೆ ದರ್ಜೆಯ ಸಿವಿಲ್ (ವ್ಯವಹಾರ) ನ್ಯಾಯಾಧೀಶರು ಇವರುಗಳಿಗೆ ಮೌಲ್ಯದ ಮಿತಿಯಿಲ್ಲದೆ ದಾವೆಗಳನ್ನು ವಿಚಾರಣೆ ಮಾಡುವ ಅಧಿಕಾರ ವ್ಯಾಪ್ತಿ ಇದೆ.

ಅಧೀನ ಕೆಳ ನ್ಯಾಯಾಲಯಗಳ ಅಧಿಕಾರ ವ್ಯಾಪ್ತಿ ದಾವೆಗಳ ಮೌಲ್ಯದ ಮೇಲೆಯೇ ಸಂಪೂರ್ಣವಾಗಿ ಅವಲಂಬಿತವಾಗಿರುತ್ತದೆ. ಇದನ್ನು ದಾವೆಗಳ ಮೌಲ್ಯಮಾಪನ ಅಧಿನಿಯಮ ಮತ್ತು ನಿಯಮಗಳ ರೀತ್ಯಾ ಲೆಕ್ಕ ಹಾಕಿ ಅಧಿಕಾರ

ವ್ಯಾಪ್ತಿಯನ್ನು ನಿರ್ಧರಿಸಲಾಗುತ್ತದೆ. ತೆರಿಗೆಗಳ ಅಧಿನಿಯಮ, ಭಾರತ ವಿಚ್ಛೇದನ ಅಧಿನಿಯಮ ಮತ್ತು ಭಾರತ ವಾರಸಾ ಅಧಿನಿಯಮ ಇವುಗಳ ಕೆಳಗಡೆ ಬರುವ ನಡವಳಿಕೆಗಳು, ಜಿಲ್ಲಾ ನ್ಯಾಯಾಲಯಗಳಿಗೆ ಮಾತ್ರ ಸೀಮಿತವಾಗಿದೆ. ಆದಾಗ್ಯೂ ರಾಜ್ಯ ಸರ್ಕಾರ ಅಧಿಸೂಚನೆಗಳನ್ನು ಹೊರಡಿಸಿ ಅಧೀನ ನ್ಯಾಯಾಧೀಶರುಗಳಿಗೆ ನಿರ್ದಿಷ್ಟವಾಗಿ ಅಧಿಕಾರ ಕೊಟ್ಟರೆ, ಆಗ ಅವರು ಈ ನಡವಳಿಕೆಗಳನ್ನು ವಿಚಾರಣೆ ಮಾಡಬಹುದಾಗಿದೆ.

ವ್ಯಾಜ್ಯಕಾರಣ ಉಂಟಾಗಿರುವ ಸ್ಥಳ ಯಾವ ನ್ಯಾಯಾಲಯದ ಅಧಿಕಾರ ವ್ಯಾಪ್ತಿಯಲ್ಲಿ ಬರುತ್ತದೆಯೋ ಅಲ್ಲಿ ದಾವೆಯನ್ನು ದಾಖಲಿಸಬೇಕು ಎಂದು ವ್ಯವಹಾರ ಪ್ರಕ್ರಿಯಾ ಸಂಹಿತೆಯಲ್ಲಿ ಉಕ್ತವಾಗಿದೆ. ಯಾವ ನ್ಯಾಯಾಲಯದ ಅಧಿಕಾರ ವ್ಯಾಪ್ತಿಯಲ್ಲಿ

ಅ) ಯಾರಾದರೊಬ್ಬ ಅಥವಾ ಹೆಚ್ಚಿನ ಪ್ರತಿವಾದಿಗಳು ವಾಸ್ತವವಾಗಿ ಮತ್ತು ಸ್ವಇಚ್ಛೆಯಿಂದ ವಾಸಿಸುತ್ತಿದ್ದರೆ, ಅಥವಾ

ಆ) ವ್ಯಾಪಾರ ಮಾಡುತ್ತಿದ್ದರೆ, ಅಥವಾ

ಇ) ಸಂಪಾದನೆ ಮಾಡುವುದಕ್ಕೆ ಕೆಲಸಮಾಡುತ್ತಿದ್ದರೆ, ಅಥವಾ

ಈ) ಪೂರ್ತಿ ಇಲ್ಲ ಭಾಗಶಃ ವ್ಯಾಜ್ಯಕಾರಣ ಸಂಭವಿಸಿದೆಯೋ ಅಲ್ಲಿ ದಾವೆಗಳನ್ನು ದಾಖಲಿಸಬೇಕು.

## ಲಘು ವ್ಯವಹಾರಗಳ ನ್ಯಾಯಾಲಯಗಳು

ಲಘು ವ್ಯವಹಾರ ನ್ಯಾಯಾಲಯಗಳೆಂಬ ನ್ಯಾಯಾಲಯಗಳು ಅಸ್ತಿತ್ವದಲ್ಲಿವೆ. ಬೊಂಬಾಯಿ, ಕಲ್ಕತ್ತ, ಮದರಾಸು ಈ ಪ್ರೆಸಿಡೆನ್ಸಿ ಪಟ್ಟಣಗಳಲ್ಲಿ ಈ ನ್ಯಾಯಾಲಯಗಳು, 'ಪ್ರೆಸಿಡೆನ್ಸಿ ಲಘು ವ್ಯವಹಾರ ನ್ಯಾಯಾಲಯಗಳ ಅಧಿನಿಯಮ 1887'ರ ಕೆಳಗೆ ಸ್ಥಾಪಿತವಾಗಿವೆ. ದಾವೆಯ ವಿಷಯ ಸಣ್ಣದಿರುವ ಯಾವುದೇ ಕ್ಷೇತ್ರದಲ್ಲಿ ಲಘು ವ್ಯವಹಾರ ನ್ಯಾಯಾಲಯಗಳಿಗೆ ಅಧಿಕಾರ ವ್ಯಾಪ್ತಿ ಇದೆ. ಉದಾಹರಣೆಗೆ, ದೆಹಲಿಯಲ್ಲಿ ರೂ.1,000.00ದ ವರೆಗಿನ ಮೌಲ್ಯದ ದಾವೆಗಳನ್ನು, ಬೊಂಬಾಯಿಯಲ್ಲಿ ರೂ. 10,000.00ದ ವರೆಗಿನ ಮೌಲ್ಯದ ದಾವೆಗಳನ್ನು ಇಂಥ ನ್ಯಾಯಾಲಯಗಳು ವಿಚಾರಣೆ ಮಾಡುತ್ತವೆ. ಈ ಮೌಲ್ಯಗಳನ್ನು ಆಗಿಂದಾಗ್ಯೆ ರಾಜ್ಯ ಸರ್ಕಾರ ನಿರ್ಧರಿಸುತ್ತದೆ.

ತನ್ನ ಅಧಿಕಾರ ವ್ಯಾಪ್ತಿಯೊಳಗೆ ಬರುವ ಎಲ್ಲಾ ವ್ಯವಹಾರ ನ್ಯಾಯಾಲಯಗಳ ಮೇಲೆ, ಜಿಲ್ಲಾ ನ್ಯಾಯಾಧೀಶರಿಗೆ ಆಡಳಿತಾತ್ಮಕ ನಿಯಂತ್ರಣ ಇದೆ. ಅವರು, ಅಧೀನ ನ್ಯಾಯಾಧೀಶರುಗಳು ಕೊಟ್ಟ ತೀರ್ಪು ಮತ್ತು ಆದೇಶ ಇವುಗಳಿಂದ ಬಂದ ಮೇಲ್ಮನವಿಗಳನ್ನು ವಿಚಾರಣೆ ಮಾಡುತ್ತಾರೆ. ಆದರೆ, ಕೈಗಾರಿಕಾ ವಿವಾದ ಅಧಿನಿಯಮ, ಕೆಲಸಗಾರರ ಪರಿಹಾರ ಅಧಿನಿಯಮ, ಮೋಟಾರು ವಾಹನಗಳ ಅಧಿನಿಯಮ ಮುಂತಾದ ಕಾಯಿದೆಗಳ ಕೆಳಗೆ ಬರುವ ವ್ಯಾಜ್ಯಗಳನ್ನು ಶಾಸನ ಸಭೆಗಳು ಸಿವಿಲ್ ನ್ಯಾಯಾಲಯಗಳ ವ್ಯಾಪ್ತಿಯಿಂದ ಹೊರತುಪಡಿಸಿರುವ ಕಾರಣ

ಈ ನ್ಯಾಯಾಲಯಗಳು ಈ ವಿಷಯಗಳಿಗೆ ಸಂಬಂಧಿಸಿದ ವ್ಯಾಜ್ಯಗಳನ್ನು ವಿಚಾರಣೆ ಮಾಡುವುದಿಲ್ಲ. ರಾಜಸ್ವ ನ್ಯಾಯಾಲಯಗಳೇ ವಿಚಾರಣೆ ಮಾಡಬೇಕಾದ ಭೂ ಸಂಬಂಧದ ವಿಷಯಗಳನ್ನು ಹಾಗೂ ವಿವಿಧ ರಾಜ್ಯಗಳ ಭೂ ಕಂದಾಯ ಸಂಹಿತೆಯಡಿ ಬರುವ ದಾವೆಗಳು ಮತ್ತು ವ್ಯಾಜ್ಯಗಳೂ ಸಹ ಸಿವಿಲ್ ನ್ಯಾಯಾಲಯದ ವ್ಯಾಪ್ತಿಯಿಂದ ಹೊರಗಿವೆ.

## ಮೇಲ್ಮನವಿಗಳು

ಕೆಳಗಿನ ಸಂದರ್ಭಗಳಲ್ಲಿ ಮೊದಲನೆ ದರ್ಜೆಯ ಹಿರಿಯ ಸಬ್ ಜಡ್ಜಿಗಳಿಗೆ ಮೇಲ್ಮನವಿ ಅಧಿಕಾರವನ್ನು ಕೊಡಲಾಗಿದೆ:

i. ಒಂದು ಸಾವಿರ ರೂ.ಗಳಿಗೆ ಮೀರದ ಮೌಲ್ಯದ ವಿಷಯದಲ್ಲಿ ಲಘು ವ್ಯವಹಾರ ನ್ಯಾಯಾಲಯ ಕೊಟ್ಟ ತೀರ್ಪು ಅಥವಾ ಆದೇಶ.

ii. ಇನ್ನೂರ ಐವತ್ತು ರೂ.ಗಳಿಗೆ ಮೀರದ ಭೂ ಸಂಬಂಧದ ದಾವೆಗಳು. ಈ ಮೇಲ್ಮನವಿಯನ್ನು ವಿಚಾರಣೆ ಮಾಡುವ ಹಿರಿಯ ಸಬ್ ಜಡ್ಜಿಯವರ ನ್ಯಾಯಾಲಯವನ್ನು ಜಿಲ್ಲಾ ನ್ಯಾಯಾಲಯವೆಂದು ಪರಿಗಣಿಸಲಾಗುವುದು ಮತ್ತು ಇಲ್ಲಿಂದ ಎರಡನೆಯ ಮೇಲ್ಮನವಿಯನ್ನು ಉಚ್ಚ ನ್ಯಾಯಾಲಯಕ್ಕೆ ಮಾತ್ರ ತೆಗೆದುಕೊಂಡು ಹೋಗಬಹುದು.

ಇತರ ಎಲ್ಲಾ ಪ್ರಕರಣಗಳಲ್ಲಿ, ಅಧೀನ ನ್ಯಾಯಾಲಯಗಳ ಯಾವುದೇ ತೀರ್ಪು ಅಥವಾ ಆದೇಶಗಳ ಮೇಲೆ, ಸಾಧಾರಣವಾಗಿ ಜಿಲ್ಲಾ ನ್ಯಾಯಾಲಯಕ್ಕೆ ಮಾತ್ರ ಮೇಲ್ಮನವಿ ಅಧಿಕಾರವಿದೆ. ಆದರೆ ಜಿಲ್ಲಾ ನ್ಯಾಯಾಲಯದ ಮೇಲ್ಮನವಿ ಅಧಿಕಾರ ವ್ಯಾಪ್ತಿಗೆ ಮೀರಿದ ಮೌಲ್ಯವಿದ್ದಲ್ಲಿ, ಉಚ್ಚ ನ್ಯಾಯಾಲಯಕ್ಕೆ ನೇರವಾಗಿ ಮೊದಲನೆ ಮೇಲ್ಮನವಿಯನ್ನು ಸಲ್ಲಿಸಬೇಕು. ಮೊದಲನೆ ದರ್ಜೆಯ ಹಿರಿಯ ಸಬ್ ಜಡ್ಜಿಯವರಿಂದ ಉಚ್ಚ ನ್ಯಾಯಾಲಯಕ್ಕೆ ಮೇಲ್ಮನವಿ ಮಾಡಬೇಕು. ಹೀಗೆಯೇ, ಜಿಲ್ಲಾ ನ್ಯಾಯಾಲಯಗಳು ಮತ್ತು ಅಪರ ಜಿಲ್ಲಾ ನ್ಯಾಯಾಲಯಗಳು ಕೊಟ್ಟ ಮೂಲ ತೀರ್ಪು ಮತ್ತು ಆದೇಶಗಳಿಂದ ಉಚ್ಚ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಬೇಕು.*

---

*ಭಾಷಾಂತರಕಾರನ ಟಿಪ್ಪಣಿ: ಕರ್ನಾಟಕದಲ್ಲಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಮತ್ತು ಜಿಲ್ಲಾ ನ್ಯಾಯಾಧೀಶರುಗಳು ಎಂಬ ಮೂರು ಹಂತದ ನ್ಯಾಯಾಲಯಗಳಿದ್ದು, ಕಿರಿಯ ವಿಭಾಗದ ನ್ಯಾಯಾಲಯಗಳ ವ್ಯಾಜ್ಯಗಳ ಮೌಲ್ಯದ ಮಿತಿ ರೂ.50,000.00 ಸಿವಿಲ್ ನ್ಯಾಯಾಲಯಗಳಿಗೆ (ಹಿರಿಯ ವಿಭಾಗ) ಮೌಲ್ಯದ ಮಿತಿಯಿಲ್ಲ. ಕಿರಿಯ ವಿಭಾಗದ ಸಿವಿಲ್ ನ್ಯಾಯಾಲಯದಿಂದ ಮೇಲ್ಮನವಿಯನ್ನು ಸಿವಿಲ್ ನ್ಯಾಯಾಲಯಕ್ಕೆ (ಹಿರಿಯ ವಿಭಾಗ) ಮತ್ತು ಸಿವಿಲ್ ನ್ಯಾಯಾಲಯದಿಂದ (ಹಿರಿಯ ವಿಭಾಗ) ಮೇಲ್ಮನವಿಯನ್ನು ಜಿಲ್ಲಾ ನ್ಯಾಯಾಲಯಕ್ಕೆ ಸಲ್ಲಿಸಬೇಕು. (ಮೌಲ್ಯ ಮೂರು ಲಕ್ಷ ರೂ.ಗಳ ಒಳಗಿದ್ದರೆ) ಇಲ್ಲದಿದ್ದರೆ, ನೇರವಾಗಿ ಉಚ್ಚ ನ್ಯಾಯಾಲಯಕ್ಕೆ ಹೋಗಬೇಕು. ಜಿಲ್ಲಾ ನ್ಯಾಯಾಲಯದಿಂದ ಎರಡನೇ ಮೇಲ್ಮನವಿ ಉಚ್ಚ ನ್ಯಾಯಾಲಯಕ್ಕೆ ಇದೆ. ಅಧಿಕಾರ ವ್ಯಾಪ್ತಿಯಲ್ಲಿ, ಮುಖ್ಯ ಜಿಲ್ಲಾ ನ್ಯಾಯಾಲಯಕ್ಕೂ ಅಪರ ಜಿಲ್ಲಾ ನ್ಯಾಯಾಲಯಕ್ಕೂ ವ್ಯತ್ಯಾಸವಿಲ್ಲ.

ಜಿಲ್ಲಾ ನ್ಯಾಯಾಲಯಗಳ ತೀರ್ಪುಗಳು ಮತ್ತು ಆದೇಶಗಳಿಂದ ಎರಡನೆ ಮೇಲ್ಮನವಿಯನ್ನು ಉಚ್ಚ ನ್ಯಾಯಾಲಯಕ್ಕೆ ಸಲ್ಲಿಸಬಹುದು. ಮೊದಲನೆ ಮೇಲ್ಮನವಿ ಡಿಕ್ರಿಯನ್ನು ಏಕ ಪಕ್ಷೀಯವಾಗಿ ಮಾಡಿದ್ದರೆ, ಅಥವಾ ಪ್ರಕರಣದಲ್ಲಿ ಸಾರಭೂತವಾದ ಕಾನೂನಿನ ಪ್ರಶ್ನೆ ಇದ್ದಲ್ಲಿ ಮಾತ್ರ, ಎರಡನೆಯ ಮೇಲ್ಮನವಿಯನ್ನು ಉಚ್ಚ ನ್ಯಾಯಾಲಯ ವಿಚಾರಣೆಗೆ ಸ್ವೀಕಾರ ಮಾಡುತ್ತದೆ.

ಮೇಲ್ಮನವಿಯ ವಿವರಣ ಪತ್ರದಲ್ಲಿ, ಮೇಲ್ಮನವಿಯಲ್ಲಿ ಉತ್ತರಿಸಬೇಕಾಗಿರುವ ಸಾರಭೂತವಾದ ಕಾನೂನಿನ ಪ್ರಶ್ನೆ ಯಾವುದೆಂದು ನಿಖರವಾಗಿ ವಿಷದೀಕರಿಸಬೇಕು. ಅಂಥ ಪ್ರಶ್ನೆ ಇದೆಯೆಂದು ಉಚ್ಚ ನ್ಯಾಯಾಲಯಕ್ಕೆ ತೃಪ್ತಿಯಾದರೆ ಮಾತ್ರ ಅದು ಎರಡನೆಯ ಮೇಲ್ಮನವಿಯನ್ನು ಸ್ವೀಕರಿಸುತ್ತದೆ.

## ಉಚ್ಚ ನ್ಯಾಯಾಲಯದಲ್ಲಿ ಒಂದೇ ಮೇಲ್ಮನವಿ

ಉಚ್ಚ ನ್ಯಾಯಾಲಯದ ಏಕ ಸದಸ್ಯ ಪೀಠ ಯಾವುದೇ ಮೇಲ್ಮನವಿಯಲ್ಲಿ ಕೊಟ್ಟ ತೀರ್ಪಿನಿಂದ ಅಥವಾ ಆದೇಶದಿಂದ ಮುಂದಿನ ಮೇಲ್ಮನವಿಗೆ ಅದೇ ನ್ಯಾಯಾಲಯದಲ್ಲಿ ಅವಕಾಶವಿಲ್ಲ. ಆದರೆ ಸಂವಿಧಾನದ 136ನೇ ಅನುಚ್ಛೇದದ ಕೆಳಗಡೆ ಸರ್ವೋಚ್ಚ ನ್ಯಾಯಾಲಯದ ಮೊರೆ ಹೋಗಬಹುದು.

## ಪುನರ್ವೀಕ್ಷಣೆ

ಯಾವುದೇ ಪ್ರಕರಣದಲ್ಲಿ, ಅಧೀನ ನ್ಯಾಯಾಲಯವೊಂದು ಕೊಟ್ಟ ತೀರ್ಮಾನದಿಂದ ಮೇಲ್ಮನವಿಗೆ ಅವಕಾಶವಿಲ್ಲದಿದ್ದಾಗ, ಅಂಥ ಪ್ರಕರಣದ ದಾಖಲೆಗಳನ್ನು ತರಿಸಿಕೊಂಡು, ಆ ಅಧೀನ ನ್ಯಾಯಾಲಯವು

i. ಕಾನೂನಿನಲ್ಲಿ ದತ್ತವಾಗಿಲ್ಲದ ಅಧಿಕಾರ ವ್ಯಾಪ್ತಿಯನ್ನು ಚಲಾಯಿಸಿದ್ದರೆ

ಅಥವಾ

ii. ದತ್ತವಾದ ಅಧಿಕಾರ ವ್ಯಾಪ್ತಿಯನ್ನು ಚಲಾಯಿಸದೇ ಹೋಗಿದ್ದರೆ

ಅಥವಾ

iii. ಅಧಿಕಾರ ವ್ಯಾಪ್ತಿಯನ್ನು ಚಲಾಯಿಸುವಲ್ಲಿ ಕಾನೂನಿಗೆ ವಿರುದ್ಧವಾಗಿ ವರ್ತಿಸಿದ್ದರೆ ಅಥವಾ ಗಣ್ಯವಾದ ನಿಯಮೋಲ್ಲಂಘನೆಯನ್ನು ಮಾಡಿದ್ದರೆ

ಅಂಥ ಸಂದರ್ಭದಲ್ಲಿ ವ್ಯವಹಾರ ಪ್ರಕ್ರಿಯಾ ಸಂಹಿತೆಯ 115ನೇ ಖಂಡದ ಅನುಸಾರ, ಉಚ್ಚ ನ್ಯಾಯಾಲಯ ತನಗೆ ಸೂಕ್ತ ಕಂಡ ಆದೇಶವನ್ನು ಮಾಡಬಹುದು.

## ಅಧೀನ ನ್ಯಾಯಾಲಯ

ಸಿವಿಲ್ ನ್ಯಾಯಾಲಯವೊಂದು ಪ್ರಕರಣವನ್ನು ಇತ್ಯರ್ಥ ಮಾಡದೇ ಉಚ್ಚ ನ್ಯಾಯಾಲಯಕ್ಕೆ ಈ ಖಂಡದ ಕೆಳಗೆ (115ನೇ ಖಂಡ) ಪುನರ್ವೀಕ್ಷಣೆ ಅಧಿಕಾರ ಬರುವುದಿಲ್ಲ, ಅಲ್ಲದೆ, ಅಂಥ ನ್ಯಾಯಾಲಯ ಅದಕ್ಕೆ ಅಧೀನ ನ್ಯಾಯಾಲಯವೂ

ಆಗಿರಬೇಕು. ಉಚ್ಚ ನ್ಯಾಯಾಲಯದ ಏಕ ಸದಸ್ಯ ನ್ಯಾಯಾಲಯವೊಂದು, ಅದೇ ನ್ಯಾಯಾಲಯದ ಅಧೀನ ನ್ಯಾಯಾಲಯವಾಗುವುದಿಲ್ಲ. ಆದರೆ, ಆ ಏಕ ಸದಸ್ಯ ನ್ಯಾಯಾಲಯ ತನಗೆ ನಿಯೋಜಿಸಲ್ಪಟ್ಟ ಕರ್ತವ್ಯವನ್ನು ಮಾತ್ರ ಮಾಡುತ್ತದೆ. ಆದುದರಿಂದ ಈ ಏಕ ಸದಸ್ಯ ಪೀಠ ಕೊಟ್ಟ ತೀರ್ಮಾನದ ಮೇಲೆ ಪುನರ್ವೀಕ್ಷಣೆ ಇಲ್ಲ, ಆದರೆ ಏಕಸ್ವ ಪತ್ರದ ದ್ವಾರಾ ಖಂಡಪೀಠವೊಂದು ಮೇಲ್ಮನವಿಯನ್ನು ವಿಚಾರಣೆ ಮಾಡುವಾಗ ಏಕ ಸದಸ್ಯ ನ್ಯಾಯಾಲಯವು 'ಕೆಳಗಿನ ನ್ಯಾಯಾಲಯ'ವೆಂದು ಭಾವಿಸಲ್ಪಟ್ಟ ರೂ, 115ನೇ ಖಂಡದ ಕೆಳಗೆ ಅದು, ಅಂದರೆ ಏಕಸದಸ್ಯ ನ್ಯಾಯಾಲಯ, ಅಧೀನ ನ್ಯಾಯಾಲಯವಾಗುವುದಿಲ್ಲ.

ಮೇಲ್ಮನವಿ ಮತ್ತು ಪುನರ್ವೀಕ್ಷಣೆಯ ಅವಕಾಶಗಳಲ್ಲದೆ ತೀರ್ಪು ಅಥವಾ ಡಿಕ್ರಿಯ ಪುನರಾವಲೋಕನಕ್ಕೂ ಸಂಹಿತೆಯಲ್ಲಿ ಅವಕಾಶಗಳಿವೆ. ಖಂಡ 114ಮತ್ತು ಆದೇಶ 47ರಲ್ಲಿ, ಸಂಹಿತೆಯಲ್ಲಿ ವಿವರಿಸಿರುವ ಸಂದರ್ಭಗಳು ಯಾವುವೆಂದರೆ:

i. ಯಾವುದೇ ತೀರ್ಪು ಯಾ ಆದೇಶದಿಂದ ಮೇಲ್ಮನವಿಗೆ ಅವಕಾಶವಿದ್ದು ಮೇಲ್ಮನವಿ ಮಾಡದೇ ಇದ್ದಾಗ

ii. ಯಾವುದೇ ತೀರ್ಪು ಯಾ ಆದೇಶದಿಂದ ಮೇಲ್ಮನವಿಗೆ ಅವಕಾಶವೇ ಇಲ್ಲದಿದ್ದಾಗ

iii. ಲಘು ವ್ಯವಹಾರ ನ್ಯಾಯಾಲಯವೊಂದರಿಂದ ಬಂದ ಪರಾಮರ್ಶೆಯ ಮೇಲಿನ ತೀರ್ಮಾನದಿಂದ

ನ್ಯಾಯಾಲಯದ ಪುನರ್ ಅವಲೋಕನದ ಅಧಿಕಾರ ವ್ಯಾಪ್ತಿಯು ಸಂಹಿತೆಯ ಆದೇಶ 47ರಲ್ಲಿ ಕೊಟ್ಟಿರುವ ಕಾರಣಗಳಿಗೆ ಮಾತ್ರ ಒಳಪಟ್ಟಿದ್ದು, ಬಹಳ ಸೀಮಿತವಾಗಿದೆ. ಅವು ಯಾವುವೆಂದರೆ:

ಅ) ಪಕ್ಷಕಾರನು ಎಷ್ಟೇ ಜಾಗ್ರತನಾಗಿದ್ದರೂ ಅವನ ಗಮನಕ್ಕೆ ಬಾರದಿದ್ದ, ಹೊಸದಾದ ಮುಖ್ಯವಾದ ಮತ್ತು ಅದೇ ತಾನೇ ಬೆಳಕಿಗೆ ಬಂದ ಸಾಕ್ಷ್ಯ; ಅಥವಾ ಡಿಕ್ರಿ ಅಥವಾ ತೀರ್ಪು ಕೊಡುವ ಮುಂಚೆ ಇಂಥ ಸಂಗತಿ ಮತ್ತು ಸಾಕ್ಷ್ಯವನ್ನು ನ್ಯಾಯಾಲಯದ ಮುಂದೆ ಹಾಜರುಪಡಿಸಲು ಸಾಧ್ಯವಾಗದಿದ್ದಾಗ:

ಆ) ತಪ್ಪು ಗ್ರಹಿಕೆ ಅಥವಾ ದಾಖಲೆಯಲ್ಲಿರುವ ಮೇಲು ನೋಟಕ್ಕೇ ಗೋಚರಿಸುವ ತಪ್ಪು ಉದಾ: ಅಧಿನಿಯಮವೊಂದರ ಅಸ್ತಿತ್ವವೇ ಗಮನಕ್ಕೆ ಬಾರದಿರುವ; ಕಡ್ಡಾಯವಾಗಿ ಅನುಸರಿಸಬೇಕಾದ ಮೇಲಿನ ನ್ಯಾಯಾಲಯದ ತೀರ್ಪೊಂದು ಗಮನಕ್ಕೆ ಬಾರದಿರುವ; ಅಥವಾ ಸಾರ್ವಜನಿಕ ದಸ್ತಾವೇಜೊಂದು ಗಮನಕ್ಕೆ ಬಾರದಿರುವ ಸಂದರ್ಭಗಳು.

ಸಂಹಿತೆಯ 109ನೇ ಖಂಡದಡಿ ಸರ್ವೋಚ್ಚ ನ್ಯಾಯಾಲಯಕ್ಕೆ ಮೇಲ್ಮನವಿ ಮಾಡಲು ಈ ಕೆಳಗಿನ ಸಂದರ್ಭಗಳಲ್ಲಿ ಅವಕಾಶ ಕಲ್ಪಿಸಲಾಗಿದೆ: ಯಾವುದೇ ಸಿವಿಲ್ ಪ್ರಕರಣದಲ್ಲಿ ಉಚ್ಚನ್ಯಾಯಾಲಯ ಕೊಟ್ಟ ತೀರ್ಪು, ಡಿಕ್ರಿ ಅಥವಾ ಅಂತಿಮ

ಆದೇಶದಿಂದ ಸರ್ವೋಚ್ಚ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಬಹುದು. ಆದರೆ ಹಾಗೆ ಮೇಲ್ಮನವಿ ಮಾಡಲು ಉಚ್ಚ ನ್ಯಾಯಾಲಯ ಈ ಕೆಳಗಿನಂತೆ ಶಿಫಾರಸು ಪತ್ರವನ್ನು ಕೊಡಬೇಕು:

i. ಸಾರ್ವತ್ರಿಕವಾಗಿ ಮುಖ್ಯವಾದ ಸಾರಭೂತವಾದ ಕಾನೂನಿನ ಪ್ರಶ್ನೆಯೊಂದು ಪ್ರಕರಣದಲ್ಲಿ ಎದ್ದಿದೆಯೆಂದೂ ಮತ್ತು

ii. ಉಚ್ಚ ನ್ಯಾಯಾಲಯದ ಅಭಿಪ್ರಾಯದಂತೆ ಮೇಲ್ಕಂಡ ಪ್ರಶ್ನೆಗೆ ಸರ್ವೋಚ್ಚ ನ್ಯಾಯಾಲಯ ಉತ್ತರಿಸಬೇಕಾದ ಅವಶ್ಯಕತೆ ಇದೆ ಎಂದು.

ಈ ಅವಕಾಶ ಸಂವಿಧಾನದ ಅನುಚ್ಛೇದ 132,133ಮತ್ತು 136ರಲ್ಲಿ ಒದಗಿಸಿರುವ ಅವಕಾಶಗಳಿಂದ ಬೇರೆಯಾದ ಅವಕಾಶವಾಗಿದೆ.

## ನ್ಯಾಯಾಲಯಗಳಲ್ಲಿ ಬಳಸಬೇಕಾದ ಭಾಷೆ

ಉಚ್ಚ ನ್ಯಾಯಾಲಯಗಳಲ್ಲಿ ಮತ್ತು ಸರ್ವೋಚ್ಚ ನ್ಯಾಯಾಲಯದಲ್ಲಿ ಇಂಗ್ಲಿಷ್ ಭಾಷೆಯನ್ನು ಬಳಸಬೇಕೆಂದು ಸಂವಿಧಾನದಲ್ಲಿ ಹೇಳಲಾಗಿದೆ. ಆದಾಗ್ಯೂ, ಇದಕ್ಕೆ ತಿದ್ದುಪಡಿ ತಂದು ಅಧಿಸೂಚನೆಯನ್ನು ಹೊರಡಿಸುವುದರ ಮೂಲಕ, ರಾಜ್ಯಗಳು ಉಚ್ಚ ನ್ಯಾಯಾಲಯಗಳಲ್ಲಿ ಸ್ಥಳೀಯ ಭಾಷೆಯನ್ನೇ ಈಗ ಬಳಸಬಹುದಾಗಿದೆ. ಹೀಗೆಯೇ ಅಧೀನ ನ್ಯಾಯಾಲಯಗಳೂ ಕೂಡ ತಮ್ಮ ನಡವಳಿಕೆಗಳಲ್ಲಿ ಹಾಗೂ ತೀರ್ಪುಗಳಲ್ಲಿ ಸ್ಥಳೀಯ ಭಾಷೆಯನ್ನೇ ಬಳಸಬಹುದು.

## ಸಿವಿಲ್ (ವ್ಯವಹಾರ) ಪ್ರಕ್ರಿಯಾ ಸಂಹಿತೆ, 1908

ಸಿವಿಲ್ ಪ್ರಕ್ರಿಯಾ ಸಂಹಿತೆಯೆಂಬ ಸವಿಸ್ತಾರವಾದ ಶಾಸನವೊಂದು ಸಿವಿಲ್ ನ್ಯಾಯಾಲಯಗಳ ನಡವಳಿಕೆಗಳನ್ನು ವ್ಯವಸ್ಥೆಗೊಳಿಸಿದೆ. ಇದರ ಪ್ರಕಾರ, ಸಿವಿಲ್ ನ್ಯಾಯಾಲಯಗಳಿಗೆ ಎರಡು ಮುಖದ ಅಂದರೆ ಮೌಲ್ಯಾಧಾರಿತ ಹಾಗೂ ಪ್ರಾದೇಶಿಕ - ಅಧಿಕಾರ ವ್ಯಾಪ್ತಿ ಇದೆ. ವ್ಯಾಜ್ಯಗಳನ್ನು ಸೂಕ್ತವಾದ ಅಧಿಕಾರ ವ್ಯಾಪ್ತಿಯುಳ್ಳ ನ್ಯಾಯಾಲಯದಲ್ಲಿ ಹೂಡಬೇಕು. ಕೆಲವೊಮ್ಮೆ ಈ ಅಧಿಕಾರವನ್ನು ಮೊಟಕುಮಾಡುವ ಇಲ್ಲವೇ ಸಂಪೂರ್ಣವಾಗಿ ತೊಡೆದು ಹಾಕುವ ಸಂದರ್ಭಗಳು ಇವೆ. ಉದಾ: ವಿಶೇಷ ಕಾನೂನು: ಇಂಥ ಸಂದರ್ಭಗಳನ್ನು ವಿನಾಯಿಸಿ, ಉಳಿದಂತೆ ಎಲ್ಲ ಬಗೆಯ ಸಿವಿಲ್ ವ್ಯಾಜ್ಯಗಳನ್ನು ತೀರ್ಮಾನ ಮಾಡಲು ಇರುವ ವೇದಿಕೆಗಳು ಸಿವಿಲ್ ನ್ಯಾಯಾಲಯಗಳೇ ಆಗಿವೆ. ವ್ಯಾಜ್ಯಗಳೆಂದರೆ, ವ್ಯಕ್ತಿಗಳಿಬ್ಬರ ನಡುವಿನ ವ್ಯಾಜ್ಯಗಳಿರಬಹುದು. ಅಥವಾ ವ್ಯಕ್ತಿ ಮತ್ತು ಸಾರ್ವಜನಿಕ ಪ್ರಾಧಿಕಾರದ ನಡುವಿನ ಅಥವಾ ಕೇಂದ್ರ ಸರ್ಕಾರ/ರಾಜ್ಯ ಸರ್ಕಾರಗಳ ವ್ಯಾಜ್ಯಗಳು, ಅಥವಾ ಶಾಸನಬದ್ಧ ಪ್ರಾಧಿಕಾರದ ವ್ಯಾಜ್ಯಗಳಾಗಿರಬಹುದು. ಎಲ್ಲ ಸಿವಿಲ್ ಪ್ರಕರಣಗಳಲ್ಲಿ, ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರಗಳೂ ಕೂಡ ಸಿವಿಲ್ ನ್ಯಾಯಾಲಯಗಳ ಅಧಿಕಾರ ವ್ಯಾಪ್ತಿಗೆ ಒಳಪಟ್ಟಿವೆ. ಸಿವಿಲ್ ನ್ಯಾಯಾಲಯದಲ್ಲಿ ಸಿವಿಲ್ ದಾವೆಯನ್ನು ಪ್ರಾರಂಭಿಸಲು ದಾಖಲು ಮಾಡಬೇಕಾದ ವಾದ ಪತ್ರದ ಸ್ವರೂಪ ಮತ್ತು ಒಕ್ಕಣೆ,

ಹೇಗಿರಬೇಕೆಂದು ಸಿವಿಲ್ ಪ್ರಕ್ರಿಯಾ ಸಂಹಿತೆಯಲ್ಲಿ ಸುದೀರ್ಘವಾಗಿ ವಿವರಿಸಲಾಗಿದೆ. ಬೇರೆ ಬೇರೆ ವಿಧದ ದಾವೆಗಳಿಗೆ ಸಂಬಂಧಿಸಿದ ಹಾಗೆ, ವ್ಯವಹಾರ ನ್ಯಾಯಾಲಯಗಳ ಅಧಿಕಾರ ವ್ಯಾಪ್ತಿಯನ್ನು ಸಿವಿಲ್ ಪ್ರಕ್ರಿಯಾ ಸಂಹಿತೆ ವಿಷದೀಕರಿಸಿದೆ. ಉದಾ: ಸರ್ಕಾರದ ಅಥವಾ ಸರ್ಕಾರದ ವಿರುದ್ಧವಾದ ದಾವೆಗಳು: ಸರ್ಕಾರಿ ಅಧಿಕಾರಿಗಳ (ಅವರ ಅಧಿಕಾರಕ್ಕೆ ಸಂಬಂಧಿಸಿದ) ದಾವೆಗಳು, ಅಥವಾ ಅವರ ವಿರುದ್ಧವಾದ ದಾವೆಗಳು: ವಿದೇಶೀಯರ ದಾವೆಗಳು; ವಿದೇಶೀ ರಾಜರುಗಳ ಅಥವಾ ಅವರ ವಿರುದ್ಧವಾದ ದಾವೆಗಳು; ರಾಯಭಾರಿ/ವಿದೇಶೀ ಪ್ರತಿನಿಧಿಗಳ ದಾವೆಗಳು ಅಥವಾ ಅವರ ವಿರುದ್ಧವಾದ ದಾವೆಗಳು, ಸಾರ್ವಜನಿಕ ಪೀಡೆ ಮತ್ತು ಸಾರ್ವಜನಿಕರಿಗೆ ಹಿಂಸೆ ಉಂಟುಮಾಡುವ ಇತರ ಅಕೃತ್ಯಗಳು, ಇವುಗಳಿಗೆ ಸಂಬಂಧಿಸಿದ ದಾವೆಗಳು, ಸಾರ್ವಜನಿಕ ನ್ಯಾಸಕ್ಕೆ ಸಂಬಂಧಿಸಿದ ದಾವೆಗಳು ಇವುಗಳನ್ನು ವಿಶೇಷವಾಗಿ ವಿವರಿಸಲಾಗಿದೆ.

ವಾದಪತ್ರದಲ್ಲಿ ಪ್ರಸಕ್ತ ಸಂಗತಿಗಳನ್ನು ಮತ್ತು ವ್ಯಾಜ್ಯಕಾರಣವನ್ನು ಸಂಕ್ಷಿಪ್ತವಾಗಿ ವಿವರಿಸಿರಬೇಕು. ಈ ವಾದಪತ್ರ ದಾಖಲಾದ ಮೇಲೆ, ಅದರ ಬಗ್ಗೆ ತಿಳುವಳಿಕೆಯನ್ನು ನ್ಯಾಯಾಲಯದ ಪ್ರೋಸೆಸ್ ಮೂಲಕ ಪ್ರತಿವಾದಿ ಅಥವಾ ಪ್ರತಿವಾದಿಗಳಿಗೆ ಕೊಡಲಾಗುತ್ತದೆ. ನಂತರ ಅವರಿಗೆ ಉತ್ತರ ಕೊಡಲು ಸಾಕಷ್ಟು ಸಮಯ ಮತ್ತು ಅವಕಾಶ ಕೊಡಲಾಗುತ್ತದೆ. ಅವರು ಕೊಡುವ ಉತ್ತರವೇ ಪ್ರತಿವಾದ ಪತ್ರ. ವಾದಪತ್ರದಲ್ಲಿ ಮಾಡಿದ ಕ್ಲೇಮನ್ನು ಪೂರ್ಣವಾಗಿ ಇಲ್ಲ ಭಾಗಶಃ, ಪ್ರತಿವಾದ ಪತ್ರದಲ್ಲಿ ಒಪ್ಪಿಕೊಂಡರೆ, ಅಷ್ಟರಮಟ್ಟಿಗೆ ಡಿಕ್ರಿಯನ್ನು ತತ್‌ಕ್ಷಣವೇ ಕೊಡಬಹುದು; ಇಲ್ಲವಾದಲ್ಲಿ, ವಿವಾದಾಂಶಗಳನ್ನು ನ್ಯಾಯಾಲಯ ಗುರುತಿಸಬೇಕು. ಅಂದರೆ, ವಾದಿ ಮತ್ತು ಪ್ರತಿವಾದಿಗಳ ನಡುವಿನ ವಾದವಿವಾದವನ್ನು ಚಿಕ್ಕದಾದ ಪ್ರಶ್ನೆಗಳಿಗೆ ಸಂಕ್ಷಿಪ್ತಗೊಳಿಸಿ, ವಿಚಾರಣೆಯ ಕೊನೆಯಲ್ಲಿ ಅವುಗಳನ್ನು ನ್ಯಾಯಾಧೀಶ ಉತ್ತರಿಸಬೇಕು.

ಪ್ರಕರಣವೊಂದು ಸಾಗುವ ಮುಖ್ಯ ಮಜಲುಗಳನ್ನು ಸಿವಿಲ್ ಪ್ರಕ್ರಿಯಾ ಸಂಹಿತೆಯಲ್ಲಿ ಹೀಗೆ ವಿವರಿಸಲಾಗಿದೆ:

i. ವಾದ ಪತ್ರ ಅಥವಾ ಅರ್ಜಿಯನ್ನು ದಾಖಲು ಮಾಡುವುದರೊಂದಿಗೆ ನಡವಳಿಕೆಯ ಪ್ರಾರಂಭ.

ii. ಪ್ರತಿವಾದಿ ಅಥವಾ ಪ್ರತ್ಯರ್ಜಿದಾರನಿಗೆ ನ್ಯಾಯಾಲಯದಿಂದ ಸಮನ್ಸ್ ಅಥವಾ ತಿಳುವಳಿಕೆಯ ಜಾರಿ; ಪ್ರತಿವಾದಿ ಅಥವಾ ಪ್ರತ್ಯರ್ಜಿದಾರನ ಹಾಜರಿ; ಪ್ರತಿವಾದ ಪತ್ರ ಅಥವಾ ಉತ್ತರವನ್ನು ದಾಖಲು ಮಾಡುವುದು.

iii. ಪಕ್ಷಗಾರರ ನಡುವಿನ ವಿವಾದದ ಅಂಶಗಳನ್ನು ರೂಪಿಸುವುದು

iv. ವಾದಿಯ/ಅರ್ಜಿದಾರನ, ಪ್ರತಿವಾದಿಯ/ಪ್ರತ್ಯರ್ಜಿದಾರನ ಸಾಕ್ಷ್ಯದ ಅಭಿಲೇಖವನ್ನು ಮಾಡುವುದು, ಮತ್ತು ಅಂತಿಮವಾಗಿ

v. ನ್ಯಾಯಾಲಯ ತೀರ್ಪುಕೊಡುವುದು

ಈ ಮುಖ್ಯ ಮಜಲುಗಳಲ್ಲಿ, ವಿಚಾರಣೆ ವಾಸ್ತವವಾಗಿ ಪ್ರಾರಂಭವಾಗುವುದು ಎಂದರೆ, ವಿವಾದಾಂಶಗಳನ್ನು ರೂಪಿಸಿದ ಮೇಲೆಯೇ. ಆ ಹಂತಕ್ಕೆ ಮುಂಚೆ ಅನೇಕ ಮಧ್ಯವರ್ತಿ ಕ್ರಮಗಳು, ಅಂದರೆ ವಿಚಾರಣಾ ಪೂರ್ವ ಕ್ರಮಗಳು ತೆಗೆದುಕೊಳ್ಳಲ್ಪಡುತ್ತವೆ. ವಿಚಾರಣಾ ಪೂರ್ವ ಎಂದರೆ ವಿಚಾರಣೆಗೆ ಮುನ್ನ ಮಾಡುವ ಸಿದ್ಧತೆಗಳು. ಇದರ ಉದ್ದೇಶ ವಿವಾದದ ಕ್ಷೇತ್ರವನ್ನು ಸಂಕ್ಷಿಪ್ತಗೊಳಿಸುವುದು. ನ್ಯಾಯಾಲಯದಿಂದ ಈ ಕೆಳಕಂಡ ಆದೇಶಗಳನ್ನು ಪಡೆಯುವುದಕ್ಕೆ ಈ ಮಧ್ಯವರ್ತಿ ನಡವಳಿಕೆಗಳು ಸಂಬಂಧಿಸಿವೆ:

i. ಪರಿಪ್ರಶ್ನೆಗಳನ್ನು ಕೊಡುವುದು ಮತ್ತು ಅವುಗಳಿಗೆ ಉತ್ತರಿಸುವುದು.

ii. ದಸ್ತಾವೇಜುಗಳ ಮತ್ತು ಸಂಗತಿಗಳ ಸ್ವೀಕಾರ ಮತ್ತು ನಿರಾಕರಣೆ.

iii. ದಸ್ತಾವೇಜುಗಳನ್ನು ಕಂಡುಹಿಡಿಯುವುದು, ಪರಿಶೀಲನೆ ಮತ್ತು ಹಾಜರು ಪಡಿಸುವುದು.

iv. ತಾತ್ಕಾಲಿಕ ಪ್ರತಿಬಂಧಕಾಜ್ಞೆ, ರಿಸೀವರುಗಳ ಮತ್ತು ಕಮಿಷನರುಗಳ ನೇಮಕ.

ಹೀಗೆ, ನ್ಯಾಯಾಂಗಣದ ಒಳಗೆ ಜರುಗುವ ನಡವಳಿಕೆಗಳ ಜೊತೆಗೆ ಹೊರಗೂ ಕೂಡ ಕಮಿಷನರ್ ಅಂದರೆ ಆಯುಕ್ತರ ಮೂಲಕ ನ್ಯಾಯಾಲಯದ ಕಾರ್ಯದ ಕೊಂಚ ಭಾಗ ನಡೆಯಬಹುದಾಗಿದೆ. ಈ ಆಯುಕ್ತನನ್ನು ನ್ಯಾಯಾಲಯ ನೇಮಿಸುತ್ತದೆ. ಆಯುಕ್ತನ ಕೆಲಸ, ಸಾಕ್ಷ್ಯದ ಅಭಿಲೇಖವನ್ನು ಮಾಡುವುದು, ಸ್ಥಳ ತನಿಖೆ ಮಾಡುವುದು, ಲೆಖ್ಖಗಳ ಪರಿಶೀಲನೆ ಅಥವಾ ಹೊಂದಾಣಿಕೆ, ವಿಭಾಗ ಮಾಡುವುದು, ತಾಂತ್ರಿಕ, ವೈಜ್ಞಾನಿಕ ಹಾಗೂ ತಜ್ಞ ಪರೀಕ್ಷೆ/ತನಿಖೆಗಳನ್ನು ಮಾಡುವುದು, ಶೀಘ್ರ ಹಾಗೂ ಸ್ವಾಭಾವಿಕವಾಗಿ ಕೊಳೆತು ಹೋಗುವ ವಸ್ತುಗಳ ಮಾರಾಟ, ಮತ್ತು ಇತರ ಯಾವುದೇ ಸಹಾಯಕವಾದ ಕೆಲಸಗಳನ್ನು ಮಾಡುವುದು ಇತ್ಯಾದಿ. ದೇಶದೊಳಗಿನ ಯಾವುದೇ ನ್ಯಾಯಾಲಯಕ್ಕೆ ಆಯೋಗ ಕಳಿಸುವುದು ಮತ್ತು ಭಾರತದ ಹೊರಗಿನ ನ್ಯಾಯಾಲಯಕ್ಕೆ ವಿಜ್ಞಾಪನಾ ಪತ್ರವನ್ನು ಕಳಿಸುವುದು, ಇವು ಕೂಡ ನ್ಯಾಯಾಲಯದ ನಡವಳಿಕೆಯ ವ್ಯಾಪ್ತಿಯಲ್ಲಿ ಬರುತ್ತದೆ. ಇದಲ್ಲದೆ, ನ್ಯಾಯಾಲಯದ ಆಜ್ಞೆಗೆ ಅವಿಧೇಯತೆಯನ್ನು ತೋರುವ ಯಾವುದೇ ವ್ಯಕ್ತಿ ಅಥವಾ ಪ್ರತಿವಾದಿಯನ್ನು ಬಂಧಿಸಲು ವಾರೆಂಟ್ ಹೊರಡಿಸಿ ಮತ್ತು/ಅಥವಾ ಅವನನ್ನು ಭದ್ರತಾ ಪತ್ರವನ್ನು ಕೊಡುವಂತೆ ಆದೇಶಿಸುವುದು ಕೂಡ ನ್ಯಾಯಾಲಯದ ನಡವಳಿಕೆಗಳಲ್ಲಿ ಸೇರಿದೆ. ಈ ನಡವಳಿಕೆಗಳನ್ನು ಜರುಗಿಸುವುದು ಮತ್ತು ಅಧಿಕಾರವನ್ನು ಚಲಾಯಿಸುವುದು ಆ ನ್ಯಾಯಾಲಯದ ಮುಂದಿರುವ ದಾವೆಗೋಸ್ಕರ ಮಾತ್ರವಲ್ಲದೆ, ಮಧ್ಯಸ್ತಗಾರಿಕೆ ನಡವಳಿಕೆಗಳಲ್ಲಿ ಮಧ್ಯಸ್ಥಗಾರನ ನೆರವಿಗೆ ಬರುವುದೂ ಆಗಿದೆ. ಏಕೆಂದರೆ ಮಧ್ಯಸ್ಥಗಾರನು ನ್ಯಾಯಾಲಯುವಲ್ಲವಾದ್ದರಿಂದ ಅವನಿಗೆ ಈ ಅಧಿಕಾರ ಲಭ್ಯವಿಲ್ಲ, ಆದ ಕಾರಣ, ಮಧ್ಯವರ್ತಿ ಆದೇಶಗಳನ್ನು ಪಡೆಯುವುದಕ್ಕಾಗಿ, ಸಿವಿಲ್ ನ್ಯಾಯಾಲಯವನ್ನು ಸಂಪರ್ಕಿಸಲು, 'ಮಧ್ಯಸ್ಥಗಾರಿಕೆ ಅಧಿನಿಯಮ' ನಿರ್ದಿಷ್ಟವಾಗಿ ಅವಕಾಶವನ್ನು ಕಲ್ಪಿಸಿದೆ. ವಾದಪತ್ರದಲ್ಲಿ ಅಥವಾ ಪ್ರತಿವಾದ ಪತ್ರದಲ್ಲಿ ಆಪಾದಿಸಿರುವ

ಸಂಗತಿಗಳಲ್ಲಿ, ಪ್ರತ್ಯಕ್ಷವಾಗಿಯಾಗಲೀ, ಪರೋಕ್ಷವಾಗಿಯಾಗಲೀ, ಒಪ್ಪಿಕೊಂಡಿರುವುದನ್ನು ಅಥವಾ ನಿರಾಕರಿಸುವುದನ್ನು ಬಿಟ್ಟು, ಮಿಕ್ಕ ಸಂಗತಿಯನ್ನು ಒಪ್ಪುತ್ತಾನೆಯೋ ಅಥವಾ ನಿರಾಕರಿಸುತ್ತಾನೆಯೋ ಎಂದು ಪ್ರತಿಯೊಬ್ಬ ಪಕ್ಷಕಾರ ಅಥವಾ ಅವನ ವಕೀಲನಿಂದ, ದಾವೆಯ ಮೊದಲನೆಯ ಹಿಯರಿಂಗ್‌ನಲ್ಲಿ ನ್ಯಾಯಾಲಯ ದೃಢಪಡಿಸಿಕೊಳ್ಳಬೇಕು. ಇದರಿಂದ ನಮಗೆ ಕಂಡುಬರುವುದೇನೆಂದರೆ, ವಿಚಾರಣೆ ಪ್ರಾರಂಭವಾಗುವ ಮುಂಚೆ, ಅಂದರೆ ಸಾಕ್ಷ್ಯವನ್ನು ದಾಖಲಿಸಿಕೊಳ್ಳುವುದನ್ನು ಪ್ರಾರಂಭಿಸುವ ಮುಂಚೆ, ಮಧ್ಯವರ್ತಿ ಆದೇಶಗಳಿಗೋಸ್ಕರ ನ್ಯಾಯಾಲಯವನ್ನು ಕೇಳಿಕೊಳ್ಳಬಹುದು; ಈ ಮಧ್ಯವರ್ತಿ ಆದೇಶಗಳನ್ನು ಏಕಪಕ್ಷೀಯವಾಗಲೀ ಅಥವಾ ಎದುರು ಪಕ್ಷದವರಿಗೆ ತಿಳುವಳಿಕೆ ಕೊಟ್ಟ ನಂತರವಾಗಲೀ ಕೊಡಬಹುದಾಗಿದೆ. ವಾದ ಪ್ರತಿವಾದ ಪತ್ರಗಳ ರೂಪದಲ್ಲಿಯಾಗಲೀ ಅಥವಾ ಸಾಕ್ಷರೂಪದಲ್ಲಿಯಾಗಲೀ ಆಧಾರಗಳನ್ನು ಒದಗಿಸಲಾಗುತ್ತದೆ. ದೇಶದ ಎಲ್ಲೆಡೆಯ ವ್ಯವಹಾರ ನ್ಯಾಯಾಲಯಗಳಲ್ಲಿ ಈ ಪ್ರಕ್ರಿಯೆಯನ್ನೇ ಏಕ ರೀತಿಯಲ್ಲಿ ಅನುಸರಿಸಲಾಗುತ್ತಿದೆ. ದಾವವನ್ನೋ ಇಲ್ಲ ಅರ್ಜಿಯನ್ನೋ ದಾಖಲು ಮಾಡುವುದರೊಂದಿಗೆ ವಿಚಾರಣೆ ಪ್ರಾರಭವಾಗುತ್ತದೆ. (ಉದಾಹರಣೆಗೆ, ಮಧ್ಯಸ್ಥಗಾರಿಕೆ ಅಧಿನಿಯಮದ ಕೆಳಗೆ, ಮಧ್ಯಸ್ಥಗಾರಿಕೆ ಒಪ್ಪಂದವನ್ನು ದಾಖಲು ಮಾಡುವುದಕ್ಕಾಗಲೀ ಮತ್ತು/ಅಥವಾ ಮಧ್ಯಸ್ಥಗಾರನನ್ನು ನೇಮಕಮಾಡುವುದಕ್ಕಾಗಲೀ, ಅರ್ಜಿಯನ್ನು ಸಲ್ಲಿಸುವುದು). ವಿಚಾರಣೆ ಕೊನೆಗೊಳ್ಳುವುದು ತೆರೆದ ನ್ಯಾಯಾಲಯದಲ್ಲಿ ಅಂತಿಮ ತೀರ್ಮಾನವನ್ನು ಕೊಟ್ಟಾಗ. ನ್ಯಾಯಾಧೀಶನ ಪಾತ್ರ, ನಿಷ್ಪಕ್ಷಪಾತಿಯಾದ ವೀಕ್ಷಕನಾಗಿರುವುದೂ ಅಲ್ಲದೆ, ವಿಚಾರಣೆಯ ನಡವಳಿಕೆಗಳು, ನಿಯಮಗಳಿಗನುಸಾರವಾಗಿ ನಡೆಯುವಂತೆ ಮಾಡುವ ಸಕ್ರಿಯ ಸಾಧನವೂ ಆಗಿದೆ. ಆದರೆ ಈ ವರ್ತುಲದಲ್ಲಿ ಒಂದು ಗಂಭೀರವಾದ ವಾಗ್ವಾದವೇ ನಡೆದಿದೆ. ಕೆಲವು ನ್ಯಾಯಾಧೀಶರುಗಳು 'ಸಕ್ರಿಯ ನ್ಯಾಯಾಧೀಶರುಗಳಾಗಿರಲು' ಬಯಸಿದರೆ ಇನ್ನು ಕೆಲವರು ವಿವಾದದ ಸುಳಿಯಿಂದ ಹೊರಗಿರಲು ಬಯಸುತ್ತಾರೆ. ಪಕ್ಷಗಾರರ ನಡುವೆ ಸಕಾರಾತ್ಮಕವಾದ ಹಾಗೂ ಪರಿಣಾಮಕಾರಿಯಾದ ನ್ಯಾಯಪ್ರದಾನ ಮಾಡಲು, ತಮಗಿರುವ ಶಕ್ತಿ, ಅಧಿಕಾರ ಬಲ ಮತ್ತು ಪ್ರಭಾವವನ್ನು ತೊಡಗಿಸುವುದರಲ್ಲಿ ಕೆಲವು ನ್ಯಾಯಾಧೀಶರುಗಳಿಗೆ ನಂಬಿಕೆ. ಈ ಉದ್ದೇಶಕ್ಕಾಗಿ ಅವರು ಸಾಕ್ಷಿಗಳನ್ನು ತಾವೂ ಪ್ರಶ್ನೆ ಮಾಡುವ ಮೂಲಕ, ಅಥವಾ ವಕೀಲರುಗಳಿಗೆ ಈ ರೀತಿ ಎದುರಿಸಿ ಎಂದೋ, ಸಮರ್ಥಿಸಿಕೊಳ್ಳಿ ಎಂದೋ ಸಲಹೆಗಳನ್ನು ಕೊಡುವುದರ ಮೂಲಕವೋ, ವಿವಾದ ಕ್ಷೇತ್ರದ ಒಳಹೋಗುತ್ತಾರೆ, ಹಾಗೆ ಮಾಡುವುದು ಕಾನೂನುಯುಕ್ತವೂ, ನ್ಯಾಯಯುತವೂ ಮತ್ತು ಸಾಧುವಾದುದೂ ಎಂದು ಅವರು ನಂಬುತ್ತಾರೆ. ವ್ಯಾಜ್ಯವನ್ನು ಅನ್ಯೋನ್ಯವಾಗಿ ಪರಿಹರಿಸಿಕೊಳ್ಳಿ ಎಂದು ಅವರು ಪಕ್ಷಕಾರರನ್ನು ಪ್ರೇರೇಪಿಸಲೂಬಹುದು.

ವಿವಾದಾಂಶಗಳನ್ನು ರೂಪಿಸಿದ ಮೇಲೆ, ಮತ್ತು ವಿಚಾರಣೆ ಪ್ರಾರಂಭವಾಗುವ ಮುಂಚೆ, ಸಾಕ್ಷಿಗಳ ಹೆಸರು ವಿಳಾಸಗಳನ್ನು ಸಾಮಾನ್ಯವಾಗಿ ಸಾಕಷ್ಟು ಪೂರ್ವದಲ್ಲಿಯೇ ಕೊಟ್ಟು ಬಿಡಬೇಕು. ಸಾಕ್ಷಿಗಳ ಹಾಜರಿಯನ್ನು ಒತ್ತಾಯಿಸುವುದಕ್ಕೆ

ಸಮನುಗಳನ್ನು ಹೊರಡಿಸಲೂ, ಸಮನನ್ನು ನಿರ್ಲಕ್ಷಿಸಿದ ಸಾಕ್ಷಿಯನ್ನು ಬಂಧಿಸಲು ವಾರಂಟ್ ಅನ್ನು ಹೊರಡಿಸಲೂ, ನ್ಯಾಯಾಲಯಗಳಿಗೆ ಅಧಿಕಾರವಿದೆ. ಪಕ್ಷಗಾರನು ಕರೆಸಿದ ಸಾಕ್ಷಿಯನ್ನು ಅವನ ಪರವಾಗಿ 'ಮುಖ್ಯ ಪರೀಕ್ಷೆ' ಮಾಡಿದ ನಂತರ, ಎದುರು ಪಕ್ಷದವರಿಗೆ ಅವನನ್ನು ಪಾಟೀ ಸವಾಲು ಮಾಡುವ ಹಕ್ಕಿದೆ. ವಿಚಾರಣೆಯ ಅಂಗವಾದ ಈ ವಿಧಾನವನ್ನು ಭಾರತ ಸಾಕ್ಷ್ಯ ಅಧಿನಿಯಮದ ವಿಧಿಗಳು ನಿಯಂತ್ರಿಸುತ್ತವೆ. ಕೇಳುವ ಪ್ರಶ್ನೆಗಳು ಪ್ರಸಕ್ತವೇ ಮತ್ತು ಆಕ್ಷೇಪಣೆ ಇಲ್ಲದೆ ಕೇಳಬಹುದಾದವುಗಳೇ ಎಂಬುದನ್ನು ನಿರ್ಧರಿಸಲು ಕಟ್ಟುನಿಟ್ಟಾದ ನಿಯಮಗಳಿವೆ. ಮೇಲೆ ಸೂಚಿಸಿದಂತೆ, ಕೆಲವು ನ್ಯಾಯಾಧೀಶರುಗಳು, ಕೆಲವು ವೇಳೆ, ನ್ಯಾಯ ದೊರಕಿಸುವ ದೃಷ್ಟಿಯಿಂದ ಸಾಕ್ಷಿಗಳನ್ನು ಪ್ರಶ್ನೆ ಮಾಡುವ ಕ್ರಮವೂ ಇದೆ. ಸಾಕ್ಷಿಯೊಬ್ಬ ತನ್ನನ್ನು ಕರೆಸಿಕೊಂಡ ಪಕ್ಷಗಾರನ ವಿರುದ್ಧವೇ ಸಾಕ್ಷಿ ಹೇಳಿದರೆ ಅವನನ್ನು 'ಪ್ರತಿಕೂಲ ಸಾಕ್ಷಿ' ಎಂದು ಘೋಷಿಸಬಹುದಾಗಿದೆ. ಇಂಥ ಸಾಕ್ಷಿಯನ್ನೂ, ಮತ್ತು 'ನ್ಯಾಯಾಲಯದ ಸಾಕ್ಷಿ' ಎಂದು ನ್ಯಾಯಾಲಯ ಕರೆಸಿದ ಸಾಕ್ಷಿಯನ್ನೂ, ಇಬ್ಬರು ಪಕ್ಷಗಾರರೂ ಪಾಟೀಸವಾಲು ಮಾಡಬಹುದಾಗಿದೆ. ಸಾಕ್ಷ್ಯದ ಅಭಿಲೇಖವನ್ನು ಯಥಾವತ್ತಾಗಿಯಾಗಲೀ, ಇಲ್ಲವೇ ಸಂಕ್ಷಿಪ್ತವಾಗಿಯಾಗಲೀ, ನಡವಳಿಕೆಯ ಸ್ವರೂಪವನ್ನನುಸರಿಸಿ ದಾಖಲು ಮಾಡಲಾಗುತ್ತದೆ. ಸಾಧಾರಣವಾಗಿ, ಶೀಘ್ರಲಿಪಿಯಲ್ಲಿ ಬರೆದುಕೊಳ್ಳುವ ಸೌಲಭ್ಯ ಉಪಲಬ್ಧವಿದ್ದರೆ, ಆ ಲಿಪಿಯಲ್ಲಿ, ಇಲ್ಲದಿದ್ದರೆ ಸಾಮಾನ್ಯ ಲಿಪಿಯಲ್ಲಿ ಸಾಕ್ಷ್ಯವನ್ನು ಬರೆದುಕೊಳ್ಳಲಾಗುತ್ತದೆ. ಸಾಮಾನ್ಯವಾಗಿ ಸಾಕ್ಷಿಯ ಭಾಷೆಯಲ್ಲೇ ಸಾಕ್ಷ್ಯವನ್ನು ಬರೆದುಕೊಳ್ಳಲಾಗುತ್ತದೆ. ಆದರೆ ಕೆಲವು ವೇಳೆ, ಅದರ ಭಾಷಾಂತರವನ್ನು ಇಂಗ್ಲಿಷ್‌ನಲ್ಲಾಗಲೀ ಅಥವಾ ನ್ಯಾಯಾಲಯದ ಭಾಷೆಯಲ್ಲಾಗಲೀ ಬರೆದುಕೊಳ್ಳಲಾಗುತ್ತದೆ. ಸಾಕ್ಷ್ಯವನ್ನು ಟೇಪ್ ಮುದ್ರಣ ಮಾಡುವ ಸೌಲಭ್ಯವಾಗಲೀ ಅಥವಾ ಕ್ಯಾಮರಾ ಹಾಗೂ ಇತರ ಧ್ವನಿ/ದೃಶ್ಯ ಮುದ್ರಣದ ಸೌಲಭ್ಯವಾಗಲೀ ನ್ಯಾಯಾಲಯಗಳಿಗೆ ಇನ್ನೂ ಬಂದಿಲ್ಲ. ಅವುಗಳಿಗೆ ಪರವಾನಿಗೆಯೂ ಇಲ್ಲ. ವಾದವನ್ನು ಮಂಡಿಸುವಲ್ಲಿ ಸಹಾಯವಾಗಲು, ಸಾಕ್ಷ್ಯದ ಅಭಿಲೇಖದ ನಕಲನ್ನು, ಪಕ್ಷಗಾರರು ಸಾಮಾನ್ಯವಾಗಿ ಪಡೆದುಕೊಳ್ಳುತ್ತಾರೆ. ವಾದ ವಿವಾದಗಳನ್ನು ಆಲಿಸಿದ ಮೇಲೆ (ಒಮ್ಮೊಮ್ಮೆ ಇವು ದಿನಗಟ್ಟಲೆ ಜರುಗುವುದೂ ಉಂಟು) ನ್ಯಾಯಾಧೀಶರು ತೆರೆದ ನ್ಯಾಯಾಲಯದಲ್ಲೇ ತೀರ್ಪನ್ನು ಹೇಳಿ ಬರೆಸುತ್ತಾರೆ ಇಲ್ಲವೇ ತೀರ್ಪನ್ನು ಕಾದಿರಿಸಿ, ನಂತರ ತೆರೆದ ನ್ಯಾಯಾಲಯದಲ್ಲಿ, ವಕೀಲರುಗಳಿಗೆ ತಿಳುವಳಿಕೆಯನ್ನು ಕೊಟ್ಟು, ಘೋಷಿಸುತ್ತಾರೆ. ಆ ದಿನದ ಪ್ರಕರಣಗಳ ಪಟ್ಟಿಯಲ್ಲಿ ತೀರ್ಪುಕೊಡಲಿರುವ ಪ್ರಕರಣವನ್ನು ಸೇರಿಸುವುದೇ ಸಾಮಾನ್ಯವಾಗಿ ವಕೀಲರುಗಳಿಗೆ ಕೊಡುವ ತಿಳುವಳಿಕೆಯಾಗುತ್ತದೆ. ತೀರ್ಪೆಂದರೆ ಪ್ರತಿಯೊಂದು ವಿವಾದಾಂಶದ ಮೇಲೆ ನ್ಯಾಯಾಲಯ ಕೊಟ್ಟ ನಿರ್ಣಯ; ತೀರ್ಪಿನ ಉಪಸಂಹಾರವೇ ಡಿಕ್ರಿ. ಸಾಮಾನ್ಯವಾಗಿ ಪ್ರತಿ ತೀರ್ಪಿನ ಮೇಲೂ ಮೂರು ನಾಲ್ಕು ಮೇಲ್ಮನವಿಗಳು ಇರುತ್ತವೆ. ಇವು ಅಧೀನ ನ್ಯಾಯಾಲಯಗಳ ಒಳಗೇ ಇರುವ ಮೇಲ್ಮನವಿಗಳಾಗಿರಬಹುದು, ಇಲ್ಲ ಉಚ್ಚ ನ್ಯಾಯಾಲಯದ ಒಳಗಿನ ಮೇಲ್ಮನವಿಗಳಾಗಿರಬಹುದು, ಮತ್ತು ಅಂತಿಮವಾಗಿ, ಸರ್ವೋಚ್ಚ ನ್ಯಾಯಾಲಯಕ್ಕೆ

ಸಲ್ಲಿಸುವ ಹಕ್ಕಿನ ಮೇಲ್ಮನವಿ ಆಗಿರಬಹುದು, ಇಲ್ಲ ಸರ್ವೋಚ್ಚ ನ್ಯಾಯಾಲಯದ ವಿಶೇಷ ಅನುಮತಿ ಪಡೆದುಕೊಂಡು ಸಲ್ಲಿಸಬಹುದಾದ ಮೇಲ್ಮನವಿ ಇರಬಹುದು. ನ್ಯಾಯಾಲಯದ ಆವರಣವು ಸಾರ್ವಜನಿಕ ಸ್ಥಳ. ಸಾರ್ವಜನಿಕರು ನ್ಯಾಯಾಲಯದಲ್ಲಿ ಶಿಸ್ತಿನಿಂದ ಮತ್ತು ವ್ಯವಸ್ಥಿತವಾಗಿ ಕುಳಿತು ನ್ಯಾಯಾಲಯದ ನಡವಳಿಕೆಗಳನ್ನು ವೀಕ್ಷಿಸಬಹುದು. ಕೆಲವು ವೇಳೆ, ಸಂದರ್ಭಾನುಸಾರ, ವೈವಾಹಿಕ ಪ್ರಕರಣಗಳು ಅಥವಾ ಗೂಢಚರ್ಯೆ ಪ್ರಕರಣಗಳಂಥ ಪ್ರಕರಣಗಳಲ್ಲಿ, ನ್ಯಾಯಾಧೀಶರ ಪ್ರತ್ಯೇಕ ಕೋಣೆಯಲ್ಲಿ ವಿಚಾರಣೆ ನಡೆಯಬಹುದು.

## ವಿದೇಶಗಳು ಮತ್ತು ವಿದೇಶೀ ಸರ್ಕಾರಗಳ ವಿರುದ್ಧದ ದಾವೆಗಳು (ಸಾರ್ವಭೌಮ ಉನ್ಮುಕ್ತಿಯ ನೆಲೆಯಲ್ಲಿ ವಿನಾಯಿತಿ)

ಎಲ್ಲಿ ವ್ಯಾಜ್ಯವಿಷಯವು ನ್ಯಾಯಾಲಯದ ವ್ಯಾಪ್ತಿಯೊಳಗೆ ಬರುತ್ತದೆಯೋ, ಅಂತಲ್ಲಿ, ಭಾರತದಲ್ಲಿ ವಾಸಿಸುತ್ತಿರುವ ಯಾವುದೇ ವ್ಯಕ್ತಿಯ ಮೇಲೆ ಭಾರತದ ವ್ಯವಹಾರ ನ್ಯಾಯಾಲಯಗಳಿಗೆ ಅಧಿಕಾರ ವ್ಯಾಪ್ತಿ ಇದೆ. ಆದರೆ ಕೆಲವು ವರ್ಗಗಳ ವ್ಯಕ್ತಿಗಳು, ಅಂದರೆ, ವಿದೇಶೀ ಆಳರಸರು, ರಾಯಭಾರಿಗಳು ಮತ್ತು ಇತರ ಅಧಿಕಾರಿಗಳು, ಇವರುಗಳ ಮೇಲೆ ದಾವೆ ಹೂಡುವ ಹಾಗಿಲ್ಲ; ಆದರೆ ಕೇಂದ್ರ ಸರ್ಕಾರದ ಕಾರ್ಯದರ್ಶಿಯವರಿಂದ ಬರವಣಿಗೆಯಲ್ಲಿ ಪ್ರಮಾಣಿಸಲ್ಪಟ್ಟಂತೆ, ಕೇಂದ್ರ ಸರ್ಕಾರದ ಒಪ್ಪಿಗೆಯನ್ನು ಪಡೆದುಕೊಂಡು, ಇಲ್ಲವೆ, ಈ ವ್ಯಕ್ತಿಗಳು ತಾವೇ ಸ್ವಇಚ್ಛೆಯಿಂದ ನ್ಯಾಯಾಲಯದ ಅಧಿಕಾರ ವ್ಯಾಪ್ತಿಗೆ ಒಳಗಾದಲ್ಲಿ, ದಾವೆಗಳನ್ನು ಈ ವರ್ಗಗಳ ಜನರ ಮೇಲೂ ಹೂಡಬಹುದು. ವ್ಯವಹಾರ ಪ್ರಕ್ರಿಯಾ ಸಂಹಿತೆಯ 86ನೇ ಖಂಡದ ಅನ್ವಯ ಯಾವುದೇ ವಿದೇಶೀ ರಾಜ್ಯದ ಮೇಲೆ, ಯಾವುದೇ ನ್ಯಾಯಾಲಯದಲ್ಲಿ (ಅದಕ್ಕೆ ಇತರ ರೀತಿಯಲ್ಲಿ ವ್ಯಾಜ್ಯ ನಡೆಸಲು ಸಕ್ಷಮತೆ ಇದ್ದರೂ) ವ್ಯಾಜ್ಯ ಹೂಡುವ ಹಾಗಿಲ್ಲ. ಆದರೆ ಕೇಂದ್ರ ಸರ್ಕಾರದ ಕಾರ್ಯದರ್ಶಿಯವರಿಂದ ಬರವಣಿಗೆಯಲ್ಲಿ ಪ್ರಮಾಣಿಸಲ್ಪಟ್ಟಂತೆ, ಕೇಂದ್ರ ಸರ್ಕಾರದ ಅನುಮತಿ ಪಡೆದುಕೊಂಡಲ್ಲಿ ಮಾತ್ರ ಇಂಥ ದಾವೆಗಳನ್ನು ಹೂಡಬಹುದು.

## ನ್ಯಾಯಾಲಯದ ಖರ್ಚುಗಳು

ವ್ಯವಹಾರ ಪ್ರಕರಣಗಳಲ್ಲಿ, ಯಾವುದೇ ಆದೇಶ ಮತ್ತು ಡಿಕ್ರಿಯನ್ನು ಕೊಡುವಾಗ ನ್ಯಾಯಾಲಯದ ಖರ್ಚನ್ನೂ ಪ್ರದಾನ ಮಾಡುವ ವಿವೇಚನೆ ನ್ಯಾಯಾಲಯಕ್ಕೆ ಇದೆ. ಸಂಹಿತೆಯ 35ನೇ ಖಂಡದ ಅನ್ವಯ, ವ್ಯಾಜ್ಯ ಹಾಗೂ ವ್ಯಾಜ್ಯಕ್ಕೆ ಸಂಬಂಧಿಸಿದ ಎಲ್ಲ ಖರ್ಚುಗಳೂ, ತತ್ಕಾಲದಲ್ಲಿ ಜಾರಿಯಲ್ಲಿರುವ ಕಾನೂನಿನ ವಿಧಿಗಳಿಗೆ ಹಾಗೂ ನಿಗದಿಮಾಡಿದ ನಿಬಂಧನೆಗಳು ಮತ್ತು ಇತಿಮಿತಿಗೆ ಒಳಪಟ್ಟು, ನ್ಯಾಯಾಲಯದ ವಿವೇಚನೆಗೆ ಸೇರಿದ್ದಾಗಿದೆ. ಈ ಖರ್ಚನ್ನು ಯಾರು ಕೊಡಬೇಕು, ಯಾವ ಆಸ್ತಿಯಿಂದ ಕೊಡಬೇಕು ಅಥವಾ ಎಷ್ಟರಮಟ್ಟಿಗೆ ಈ ಖರ್ಚನ್ನು ಕೊಡಬೇಕು, ಎಂಬುದನ್ನು ನಿರ್ಧರಿಸಲು ಹಾಗೂ ಈ ಸಂಬಂಧ ಅವಶ್ಯಕವಾದ ನಿರ್ದೇಶನಗಳನ್ನು ಕೊಡಲೂ ನ್ಯಾಯಾಲಯಕ್ಕೆ ಪೂರ್ಣ ಅಧಿಕಾರವಿದೆ.

'ವ್ಯಾಜ್ಯದ ಖರ್ಚುಗಳು' ಎಂಬ ಮಾತುಗಳು, ವ್ಯಾಜ್ಯದಲ್ಲಿ ಮಾಡಿದ ಎಲ್ಲಾ ಖರ್ಚುಗಳೆಂದು ಅರ್ಥವಾಗುತ್ತದೆ. ಆದ ಕಾರಣ, ವಾದಿಗೆ ತಗಲಿದ ವ್ಯಾಜ್ಯದ ಖರ್ಚನ್ನು, ಯಾವುದಾದರೊಬ್ಬನೇ ಪ್ರತಿವಾದಿಯು ಕೊಡಬೇಕೆಂದು ಆದೇಶ ಮಾಡಿದ್ದು, ಆ ಆದೇಶದಲ್ಲಿ ಪರಿಮಿತಿಗೊಳಿಸಿದ ಯಾವ ವಿಶೇಷಣಗಳೂ ಇಲ್ಲದಿದ್ದರೆ, ಇನ್ನೊಬ್ಬ ಪ್ರತಿವಾದಿಯ ವಿರುದ್ಧ ಖರ್ಚು ಸಹಿತ ವ್ಯಾಜ್ಯ ವಜಾ ಆಗಿದ್ದರೂ, ಆ ಪ್ರತಿವಾದಿಯನ್ನು ದಾವಾದಲ್ಲಿ ಸೇರಿಸಲು ವಾದಿಗೆ ತಗಲಿದ ಖರ್ಚನ್ನೂ ಸಹ ಮೊದಲಿನ ಪ್ರತಿವಾದಿಯೇ ಕೊಡಬೇಕು. ಹೀಗಾಗಿ 'ಖರ್ಚು' ಎಂಬ ಪದ ವ್ಯಾಜ್ಯಕ್ಕೆ ಸಂಬಂಧಿಸಿದ ಎಲ್ಲ ಖರ್ಚುಗಳೂ ಎಂಬ ಅರ್ಥವನ್ನು ಒಳಗೊಂಡಿದೆ.

ಈ ಕೆಳಕಂಡ ಸಂದರ್ಭಗಳಲ್ಲಿ, ಪಕ್ಷಗಾರರು ಖರ್ಚನ್ನು ತಾವೇ ಭರಿಸಬೇಕೆಂದು ನ್ಯಾಯಾಲಯ ನಿರ್ದೇಶಿಸಬಹುದು:

ಅ) ಪ್ರಕರಣದಲ್ಲಿ ಉದ್ಭವಿಸಿದ ಕಾನೂನಿನ ಪ್ರಶ್ನೆಯನ್ನು ಮೊಟ್ಟಮೊದಲ ಬಾರಿಗೆ ಉತ್ತರಿಸಿದಾಗ.

ಆ) ಶಾಸನದಲ್ಲಿನ ಅನಿಶ್ಚಯಾರ್ಥದಿಂದಾಗಿಯೇ ದಾವೆ ಉದ್ಭವಿಸಿದಾಗ.

ಇ) ನ್ಯಾಯಾಲಯ ತಾನೇ ತಪ್ಪು ಮಾಡಿದಾಗ.

ಈ) ಮೇಲ್ಮನವಿದಾರ ತನ್ನ ಕ್ಲೇಮನ್ನು ಭಾಗಶಃ ಒತ್ತಾಯಿಸದಿದ್ದಾಗ.

ಉ) ಪ್ರಕರಣದಲ್ಲಿ ಅತಿ ಮುಖ್ಯವಾದ ಕಾನೂನಿನ ಪ್ರಶ್ನೆಗಳನ್ನು ನಿರ್ಣಯಿಸಬೇಕಾದಾಗ.

ಊ) ಪ್ರಕರಣವು ಪ್ರಾಯೋಗಿಕ ಪ್ರಕರಣವಾಗಿದ್ದು, ಅದರಲ್ಲಿ ಇತ್ತೀಚಿನ ಶಾಸನಗಳ ನಿರ್ವಚನ (ವ್ಯಾಖ್ಯಾನ) ಮಾಡಬೇಕಾಗಿದ್ದು, ಪರಾಜಯ ಹೊಂದಿದ ಪ್ರತಿವಾದಿಯೇ ಹೆಚ್ಚಿನ ಹೊರೆಯನ್ನು ಹೊತ್ತಿದ್ದಾಗ.

ಎ) ನ್ಯಾಯಾಲಯ ಗೊಂದಲಮಯವಾದ ನ್ಯಾಯಿಕ ಪರಿಸ್ಥಿತಿಯನ್ನು ಸ್ಪಷ್ಟಪಡಿಸಿದ ಸಂದರ್ಭದಲ್ಲಿ

ವ್ಯಾಜ್ಯದ ಪರಿಣಾಮವನ್ನು ಖರ್ಚು ಅನುಸರಿಸುತ್ತದೆ ಎಂಬುದು ಸೂತ್ರ; ಅಂದರೆ ಜಯಶೀಲನಾದ ಪಕ್ಷಗಾರ ಖರ್ಚನ್ನು ಪಡೆದುಕೊಳ್ಳಲು ಬಾಧ್ಯನಾಗುತ್ತಾನೆ. ಹೇಗಾದರೂ, ಗೆದ್ದ ಪಕ್ಷಗಾರನಿಗೆ ಖರ್ಚನ್ನು ಮಾನ್ಯ ಮಾಡುವಾಗ, ನ್ಯಾಯಾಲಯ ತನಗೆ ತಾನೇ ವಿಧಿಸಿಕೊಳ್ಳುವ ಇತಿಮಿತಿಗಳಿಗೂ ನಿರ್ಬಂಧಗಳಿಗೂ ಇದು ಒಳಪಟ್ಟಿದೆ. ನ್ಯಾಯಾಲಯ ಮಾನ್ಯಮಾಡಿದ ಖರ್ಚನ್ನು ಜಯಶೀಲನಾದ ಪಕ್ಷಗಾರನು ಪಡೆದುಕೊಳ್ಳುತ್ತಾನಾದರೂ, ಅವನಿಗೆ ವಾಸ್ತವವಾಗಿ ತಗುಲಿದ ಖರ್ಚು ಸಾಮಾನ್ಯವಾಗಿ ಅಧಿಕವಾಗಿಯೇ ಇರುವುದರಿಂದ ಅವನ ನಷ್ಟ ಪೂರ್ಣವಾಗಿ ಭರ್ತಿಯಾಗುವುದಿಲ್ಲ. ಉಚ್ಚನ್ಯಾಯಾಲಯ ರೂಪಿಸಿದ ನಿಯಮಗಳಿಗನುಸಾರವಾಗಿ ಖರ್ಚನ್ನು ಹೊರೆಸಲಾಗುತ್ತದೆ. ಪ್ರತಿ ನಡವಳಿಕೆ/ವ್ಯಾಜ್ಯದ ಖರ್ಚನ್ನು ಆ ನಡವಳಿಕೆಯಲ್ಲೇ ನ್ಯಾಯಾಲಯ ಇಷ್ಟೆಂದು ಮೊತ್ತ ಮಾಡುತ್ತದೆ; ಇಲ್ಲದೇ

ಹೋದರೆ, ಖರ್ಚು ನಿರ್ಧಾರಮಾಡುವ ಅಧಿಕಾರಿ, ಉಚ್ಚ ನ್ಯಾಯಾಲಯ ರೂಪಿಸಿದ ನಿಯಮಗಳಿಗನುಗುಣವಾಗಿ ಮಾನ್ಯಮಾಡಿದ ಖರ್ಚನ್ನು ಮೊತ್ತ ಮಾಡುತ್ತಾನೆ. ಇದನ್ನು 'ಖರ್ಚು ಗೊತ್ತು ಮಾಡುವುದು' ಎನ್ನುತ್ತಾರೆ. ನ್ಯಾಯಾಲಯ ತಾನು ಆದೇಶ ಮಾಡುವಾಗಲೇ ಖರ್ಚನ್ನು ಮೊತ್ತ ಮಾಡದೇ ಇರುವ ಸಂದರ್ಭದಲ್ಲಿ, ಖರ್ಚು ಲೆಖ್ಖ ಹಾಕಲು ಒಬ್ಬ ಅಧಿಕಾರಿ ಪ್ರತಿ ನ್ಯಾಯಾಲಯದಲ್ಲೂ ಇರುತ್ತಾನೆ.

# ಉಚ್ಚ ನ್ಯಾಯಾಲಯ

ರಾಜ್ಯಾಂಗದ ಅನುಚ್ಛೇದ 215ರಲ್ಲಿ 'ಉಚ್ಚ ನ್ಯಾಯಾಲಯ' ಎಂದರೆ ಏನು ಎಂದು ವಿಶದೀಕರಿಸಲಾಗಿದೆ. ಈ ಉಚ್ಚ ನ್ಯಾಯಾಲಯವನ್ನು ರಾಜ್ಯಾಂಗದ ಮೊದಲನೆ ಅನುಸೂಚಿಯಲ್ಲಿ ಕಾಣಿಸಲ್ಪಟ್ಟಿರುವ ಪ್ರತಿ ರಾಜ್ಯದಲ್ಲೂ ಸ್ಥಾಪಿಸಲಾಗಿದೆ. ಒಂದು ರಾಜ್ಯದ ಉಚ್ಚ ನ್ಯಾಯಾಲಯದ ಅಧಿಕಾರ ವ್ಯಾಪ್ತಿ, ಆ ರಾಜ್ಯದ ಸೀಮಾ ರೇಖೆಯವರೆಗೆ ಮಾತ್ರ ಇರುತ್ತದೆ. ಕೆಲಸಲ ಒಂದು ಉಚ್ಚನ್ಯಾಯಾಲಯದ ವ್ಯಾಪ್ತಿ ಇತರ ರಾಜ್ಯಗಳವರೆಗೂ ಇರಬಹುದು. ಉದಾ: ಅಸ್ಸಾಂ ಉಚ್ಚನ್ಯಾಯಾಲಯದ ವ್ಯಾಪ್ತಿ ಅಸ್ಸಾಂ ಜೊತೆಗೆ, ನಾಗಾಲ್ಯಾಂಡ್, ತ್ರಿಪುರ, ಮಣಿಪುರ ಮುಂತಾದ ರಾಜ್ಯಗಳನ್ನೂ ಒಳಗೊಂಡಿದೆ. ಎಲ್ಲ ಉಚ್ಚ ನ್ಯಾಯಾಲಯಗಳ ಪ್ರಾದೇಶಿಕ ಅಧಿಕಾರ ವ್ಯಾಪ್ತಿಯನ್ನು ವಿಶದೀಕರಿಸಲಾಗಿದ್ದರೂ, ಅಂಗರಚನೆಯಲ್ಲಿ ಅವುಗಳು ಒಂದು ಏಕೈಕ ವ್ಯವಸ್ಥೆಯ ಸಮಗ್ರ ಭಾಗಗಳಾಗಿವೆ. ಯಾವುದೇ ಉಚ್ಚ ನ್ಯಾಯಾಲಯವು ಇನ್ನೊಂದು ಉಚ್ಚನ್ಯಾಯಾಲಯಕ್ಕಿಂತ ಶ್ರೇಷ್ಠವಾದುದೇನೂ ಅಲ್ಲ. ರಾಜ್ಯಾಂಗದ ಕೆಳಗೆ ಎಲ್ಲ ಉಚ್ಚನ್ಯಾಯಾಲಯಗಳಿಗೂ ಸಮಾನ ಅಂತಸ್ತು ಇದೆ. ಬೇರೆ ಬೇರೆ ಉಚ್ಚನ್ಯಾಯಾಲಯಗಳ ನ್ಯಾಯಾಧೀಶರುಗಳು, ಅವರ ನೇಮಕಾತಿಯಲ್ಲಿ ಅಲ್ಪಸ್ವಲ್ಪ ವ್ಯತ್ಯಾಸವಿದ್ದಿರಬಹುದಾದರೂ, ಒಂದೇ ಕುಟುಂಬ ವರ್ಗಕ್ಕೆ ಸೇರಿದವರ ಹಾಗೆ. ಹೇಗಾದರೂ ಅವರುಗಳು ಅಖಿಲ ಭಾರತ ಉದ್ಯೋಗ ವೃಂದದ ಚೌಕಟ್ಟಿನೊಳಗೆ ಬರುವುದಿಲ್ಲ. ಪ್ರತಿಯೊಬ್ಬ ನ್ಯಾಯಾಧೀಶನನ್ನೂ, ನಿರ್ದಿಷ್ಟವಾದ ಉಚ್ಚ ನ್ಯಾಯಾಲಯವೊಂದಕ್ಕೆ ನೇಮಕ ಮಾಡಬಹುದಾಗಿದ್ದರೂ ಸಂವಿಧಾನದ 222ನೇ ಅನುಚ್ಛೇದದ ಅನ್ವಯ ಅವರನ್ನು ಬೇರೆ ಉಚ್ಚ ನ್ಯಾಯಾಲಯಕ್ಕೆ ವರ್ಗಮಾಡಬಹುದಾಗಿದೆ.

ಪ್ರತಿಯೊಂದು ಉಚ್ಚ ನ್ಯಾಯಾಲಯವೂ ಒಂದು ಅಭಿಲೇಖನ ನ್ಯಾಯಾಲಯ; ಅಂದರೆ, ತನ್ನ ಅಧಿಕಾರ ವ್ಯಾಪ್ತಿ ಹಾಗೂ ತನಗಾದ ನಿಂದನೆಗೆ ಶಿಕ್ಷೆ ವಿಧಿಸುವುದು ಈ ಪ್ರಶ್ನೆಗಳನ್ನು ತಾನೇ ನಿರ್ಣಯಿಸುವ ಅಧಿಕಾರ ಇದೆ ಎಂದು ಅರ್ಥ.

ಒಮ್ಮೆ ನೇಮಕ ಹೊಂದಿದರೆಂದರೆ, ಯಾವುದೇ ಪ್ರಕರಣವನ್ನು ತೀರ್ಮಾನಿಸುವ ವಿಭಾಗ ಪೀಠದ ಸದಸ್ಯನಾಗಿ ಕುಳಿತಾಗ, ಉಚ್ಚ ನ್ಯಾಯಾಲಯದ ನ್ಯಾಯಾಧೀಶರಿಗೆ - ಅವರು ಅಪರ ನ್ಯಾಯಾಧೀಶರಾಗಲೀ, ತಾತ್ಕಾಲಿಕ ನ್ಯಾಯಾಧೀಶರಾಗಲೀ, ತತ್ಪೂರ್ತ ನ್ಯಾಯಾಧೀಶರಾಗಲೀ - (ಅನುಚ್ಛೇದ 224 - 224A) ಒಂದು 'ಮತ' (ವೋಟ್) ಇರುತ್ತದೆ. ವಿಭಾಗ ಪೀಠದಲ್ಲಿ ಮುಖ್ಯ ನ್ಯಾಯಾಧೀಶರು ಕುಳಿತಿದ್ದರೂ, ಅವರಿಗೇನು ಅಗ್ರಗಣ್ಯತೆ ಇರುವುದಿಲ್ಲ. ಪೀಠದಲ್ಲಿ ಕುಳಿತ ನ್ಯಾಯಾಧೀಶರುಗಳ ಬಹುಮತ ತೀರ್ಮಾನದಂತೆ ಪ್ರಕರಣವನ್ನು ಇತ್ಯರ್ಥಗೊಳಿಸಲಾಗುತ್ತದೆ. ನ್ಯಾಯಾಲಯದ ಇಬ್ಬರು ಅಥವಾ ಹೆಚ್ಚಿಗೆ ಕಿರಿಯ ನ್ಯಾಯಾಧೀಶರುಗಳ ಬಹುಮತ ಮುಖ್ಯ ನ್ಯಾಯಾಧೀಶರ ಅಭಿಪ್ರಾಯದ ಮೇಲೆ ಮೇಲುಗೈ ಆಗುವುದು ಅಸಾಧಾರಣವಾದುದೇನೂ ಅಲ್ಲ. ಆದರೆ ಆಡಳಿತಾತ್ಮಕವಾಗಿ, ಕಿರಿಯ

ನ್ಯಾಯಾಧೀಶರುಗಳಿಗೆ ಇಲ್ಲದ ಅಧಿಕಾರ ಮತ್ತು ವಿಶೇಷ ಕೆಲಸಗಳು ಮುಖ್ಯ ನ್ಯಾಯಾಧೀಶರಿಗೆ ಇರುತ್ತವೆ.

ಭಾರತದ ಸರ್ವೋಚ್ಚ ನ್ಯಾಯಾಲಯವು ದೇಶದ ಅಂತಿಮ ಮೇಲ್ಮನವಿ ನ್ಯಾಯಾಲಯವಾಗಿದೆ. ಹೀಗಾಗಿ, ಉಚ್ಚ ನ್ಯಾಯಾಲಯದ ಅಥವಾ ಅದರ ಯಾವುದೇ ನ್ಯಾಯಾಧೀಶರ ತೀರ್ಮಾನಗಳನ್ನು, ಸಂವಿಧಾನದ 132, 133, 134, 135 ಮತ್ತು 136ನೇ ಅನುಚ್ಛೇದಗಳ ಕೆಳಗೆ ತನಗಿರುವ ಮೇಲ್ಮನವಿ ಅಧಿಕಾರ ವ್ಯಾಪ್ತಿಯನ್ನು ಚಲಾಯಿಸಿ ಅದು ತಳ್ಳಿಹಾಕಬಹುದು. ಆದರೂ ಸಹ ಈ ಕಾರಣಕ್ಕಾಗಿ ಉಚ್ಚ ನ್ಯಾಯಾಲಯವು ಸರ್ವೋಚ್ಚ ನ್ಯಾಯಾಲಯದ ಅಧೀನ ನ್ಯಾಯಾಲಯ ವಾಗುವುದಿಲ್ಲ (ರಾಜ್ಯದ ಉಚ್ಚ ನ್ಯಾಯಾಲಯದ ಕೆಳಗಿನ ನ್ಯಾಯಾಲಯಗಳು ಉಚ್ಚ ನ್ಯಾಯಾಲಯದ ಅಧೀನ ನ್ಯಾಯಾಲಯಗಳಾಗಿರುವಂತೆ).

## ಉಚ್ಚನ್ಯಾಯಾಲಯದ ನ್ಯಾಯಾಧೀಶಸ್ಥಾನಕ್ಕೆ ನೇಮಕ ಮತ್ತು ನಿಬಂಧನೆಗಳು

ಉಚ್ಚನ್ಯಾಯಾಲಯದ ಪ್ರತಿಯೊಬ್ಬ ನ್ಯಾಯಾಧೀಶರನ್ನು ರಾಷ್ಟ್ರಪತಿಯವರು ತಮ್ಮ ಸಹಿ ಮತ್ತು ಮುದ್ರೆಯನ್ನೊಳಗೊಂಡ ವಾರಂಟ್ ದ್ವಾರಾ ನೇಮಕಮಾಡುತ್ತಾರೆ. ಹೀಗೆ ನೇಮಕ ಮಾಡುವುದಕ್ಕೆ ಮುನ್ನ ಸರ್ವೋಚ್ಚನ್ಯಾಯಾಲಯದ ಮುಖ್ಯ ನ್ಯಾಯಾಧೀಶರೊಂದಿಗೆ ಮತ್ತು ಸಂಬಂಧಿಸಿದ ರಾಜ್ಯದ ರಾಜ್ಯಪಾಲರೊಂದಿಗೆ ಸಮಾಲೋಚಿಸಲಾಗುತ್ತದೆ. ಉಚ್ಚನ್ಯಾಯಾಲಯದ ನ್ಯಾಯಾಧೀಶರು ತಮ್ಮ 62ನೇ ವರ್ಷ ವಯಸ್ಸಿನವರೆಗೆ ಅಧಿಕಾರದಲ್ಲಿರುತ್ತಾರೆ.

ಕಾನೂನಿನ ನಿರ್ವಚನಕ್ಕೆ ಸಂಬಂಧಪಟ್ಟಂತೆ, ಉಚ್ಚ ನ್ಯಾಯಾಲಯುವೇ ರಾಜ್ಯಮಟ್ಟದಲ್ಲಿ ಸರ್ವೋನ್ನತ ನ್ಯಾಯಾಲಯುವಾಗಿದೆ. ಸರ್ವೋಚ್ಚ ನ್ಯಾಯಾಲಯುವನ್ನು ಬಿಟ್ಟರೆ, ಸಂವಿಧಾನದ ನಿರ್ವಚನ ಮಾಡಲು ಅಧಿಕಾರ ವ್ಯಾಪ್ತಿಯುಳ್ಳ ಏಕೈಕ ನ್ಯಾಯಾಲಯ ಇದಾಗಿದೆ. ಉಚ್ಚ ನ್ಯಾಯಾಲಯಗಳಿಗೆ ಮೂಲ ಅಧಿಕಾರ ವ್ಯಾಪ್ತಿಯೂ ಅಲ್ಲದೆ ವ್ಯವಹಾರ ಪ್ರಕ್ರಿಯಾ ಸಂಹಿತೆಯಲ್ಲಿ ಉಕ್ತವಾಗಿರುವಂತೆ ಮೇಲ್ಮನವಿ ಅಧಿಕಾರ ವ್ಯಾಪ್ತಿಯೂ ಇದೆ. ಕೆಲವು ಆಧಾರಭೂತ ರಕ್ಷಣೆಗಳನ್ನು (ಇವನ್ನು ಮೂಲಭೂತ ಹಕ್ಕುಗಳೆನ್ನುತ್ತಾರೆ) ಅಳವಡಿಸಲ್ಪಟ್ಟಿರುವ ಸಂವಿಧಾನವು, ಈ ಹಕ್ಕುಗಳನ್ನು ಒತ್ತಾಯಿಸಲು ಶೀಘ್ರವಾದ ಹಾಗೂ ದುಬಾರಿಯಲ್ಲದ ಪರಿಹಾರವನ್ನೂ ಒಳಗೊಂಡಿದೆ. ರಾಜ್ಯ ವರ್ತುಲದಲ್ಲಿ ಉಚ್ಚ ನ್ಯಾಯಾಲಯಗಳಿಗೆ ಹೊಸತಾದ ಹಾಗೂ ವಿಸ್ತಾರವಾದ ಅಧಿಕಾರಗಳನ್ನು ಕೊಡಲಾಯಿತು. ಪ್ರಾಥಮಿಕವಾಗಿ, ಈ ಅಧಿಕಾರಗಳನ್ನು ಮೂಲಭೂತ ಹಕ್ಕುಗಳನ್ನು ಒತ್ತಾಯಿಸುವುದಕ್ಕಾಗಿ ನಿರ್ದೇಶನಗಳನ್ನು ಇಲ್ಲವೇ ರಿಟ್‌ಗಳನ್ನು ಹೊರಡಿಸಲು ಕೊಡಲಾಯಿತು. ಸಂವಿಧಾನದ 226ನೇ ಅನುಚ್ಛೇದದಡಿ, ಈ ನಿರ್ದೇಶನ/ರಿಟ್‌ಗಳನ್ನು ಹೊರಡಿಸಲು ಉಚ್ಚನ್ಯಾಯಾಲಯಗಳಿಗೆ ಕೊಡಲಾಗಿರುವ ಅಧಿಕಾರ, ಈ ನ್ಯಾಯಾಲಯುಗಳನ್ನು ಇಂಗ್ಲೆಂಡಿನ ರಾಜನ ನ್ಯಾಯ ಪೀಠದ ಮಟ್ಟಕ್ಕೆ ತರುವ ದೃಷ್ಟಿಯಿಂದಲೇ ಇರಬೇಕೆಂದು ತೋರುತ್ತದೆ. ಸಂವಿಧಾನದ 226ನೆ

ಅನುಚ್ಛೇದದಡಿ ರಿಟ್‌ಗಳನ್ನು ಮತ್ತು ಆದೇಶಗಳನ್ನು ಹೊರಡಿಸುವ ಅಧಿಕಾರ ಭಾರತದ ಎಲ್ಲಾ ಉಚ್ಚ ನ್ಯಾಯಾಲಯಗಳಿಗೂ ಇದೆ. ಉಚ್ಚ ನ್ಯಾಯಾಲಯದ ಮೂಲ ಅಧಿಕಾರ ವ್ಯಾಪ್ತಿ ಅಥವಾ ಮೇಲ್ಮನವಿ ಅಧಿಕಾರ ವ್ಯಾಪ್ತಿಯೊಳಗೆ ಬರುವ ಎಲ್ಲ ವ್ಯಕ್ತಿಗಳಿಗೂ, ಪ್ರಾಧಿಕಾರಗಳಿಗೂ, ಸರ್ಕಾರಗಳಿಗೂ, ಈ ಅಧಿಕಾರ ವಿಸ್ತರಿಸುತ್ತದೆ. ಅನುಚ್ಛೇದ 226ರ ಕೆಳಗೆ ಬರುವ ಈ ಅಧಿಕಾರವು ಸಂವಿಧಾನಾತ್ಮಕ ಅಧಿಕಾರವಾದುದರಿಂದ, ಯಾವುದೇ ಶಾಸನಾತ್ಮಕವಾದ ನಿಯಮ ಇದನ್ನು ನಿರ್ಬಂಧಗೊಳಿಸುವುಲ್ಲ. ಅನುಚ್ಛೇದ 226ರ ಕೆಳಗಿನ ಅಧಿಕಾರವು ರಿಟ್‌ಗಳನ್ನು ಹೊರಡಿಸಲೂ ಅಲ್ಲದೆ, ನಿರ್ದೇಶನಗಳನ್ನು, ಆದೇಶಗಳನ್ನು ಅಥವಾ ರಿಟ್ ಸ್ವಭಾವದ ಆಜ್ಞೆಗಳನ್ನು ಹೊರಡಿಸಲೂ ವಿಸ್ತರಿಸುತ್ತದೆ.

ಗೌರ್ನಮೆಂಟ್ ಆಫ್ ಇಂಡಿಯಾ ಅಧಿನಿಯಮ (ಭಾರತ ಸರ್ಕಾರ ಅಧಿನಿಯಮ) ದಂತಲ್ಲದೆ ಅನುಚ್ಛೇದ 226ರ ಕೆಳಗಿನ ಅಧಿಕಾರ ವ್ಯಾಪ್ತಿ ರಾಜಸ್ವ ವಿಷಯಗಳಿಗೂ ವಿಸ್ತರಿಸುತ್ತದೆ.

ಮೂಲಭೂತ ಹಕ್ಕುಗಳು ಮತ್ತು ಇತರ ಹಕ್ಕುಗಳನ್ನು ಒತ್ತಾಯಿಸಲು ಸದುದ್ದೇಶದಿಂದ ಒದಗಿಸಿರುವ ಈ ಚಿಕಿತ್ಸಾರೂಪದ ಅವಕಾಶ ಅತಿಯಾಗಿ ದುರುಪಯೋಗವಾಗುತ್ತಿದೆ. ಉಚ್ಚನ್ಯಾಯಾಲಯದಲ್ಲಿ ಪ್ರತಿನಿತ್ಯವೂ ಭಾರಿ ಸಂಖ್ಯೆಯಲ್ಲಿ ರಿಟ್‌ಗಳನ್ನು ದಾಖಲಿಸಲಾಗುತ್ತಿದೆ. ಕೆಲವು ಉಚ್ಚ ನ್ಯಾಯಾಲಯಗಳಲ್ಲಂತೂ ಒಂದು ರಿಟ್ ಅರ್ಜಿಯ ತೀರ್ಮಾನಕ್ಕೆ ಹತ್ತು ವರ್ಷಗಳಿಗಿಂತ ಹೆಚ್ಚಿಗೆ ಸಮಯ ಬೇಕಾಗುತ್ತಿದೆ.

ಪಾರ್ಲಿಮೆಂಟ್ ವಿಧಾಯಕಗೊಳಿಸಿದ ವಿವಿಧ ಅಧಿನಿಯಮಗಳ ಮೂಲಕ, ಹಾಗೂ ಅನುಚ್ಛೇದ 3,4ಮತ್ತು ಸಂವಿಧಾನದ ಇತರ ಅನುಚ್ಛೇದಗಳಡಿ ರೂಪಿಸಿದ ನಿಬಂಧನೆಗಳಿಗನುಸಾರ ರಾಜ್ಯಗಳ ಪುನರ್‌ರಚನೆಯಿಂದಾಗಿ ಸ್ಥಾಪಿತವಾದ ಉಚ್ಚ ನ್ಯಾಯಾಲಯಗಳ ಸಂಖ್ಯೆ, ಅವುಗಳ ಪ್ರಾದೇಶಿಕ ಅಧಿಕಾರ ವ್ಯಾಪ್ತಿ ಮತ್ತು ಯಾವ ಕಾನೂನಿನನ್ವಯ ಅವು ಅಸ್ತಿತ್ವಕ್ಕೆ ಬಂದವು ಎಂಬುದನ್ನು ಈ ಅಧ್ಯಾಯದ ಕೊನೆಯಲ್ಲಿ ಕೊಟ್ಟಿದೆ.

## ನ್ಯಾಯಿಕ ಆಯುಕ್ತರ ನ್ಯಾಯಾಲಯ

ಗೋವ, ಡಾಮನ್, ಡಯು ಹಾಗೂ ದಾದ್ರ ಮತ್ತು ನಾಗರ್‌ಹವೇಲಿ ಒಕ್ಕೂಟ ಪ್ರದೇಶಗಳಿಗೆ ಒಬ್ಬ ನ್ಯಾಯಿಕ ಆಯುಕ್ತರ ನ್ಯಾಯಾಲಯವನ್ನು ಗೋವ, ಡಾಮನ್ ಮತ್ತು ಡಯು (ನ್ಯಾಯಿಕ ಆಯುಕ್ತರ ನ್ಯಾಯಾಲಯ) ನಿಬಂಧನೆಗಳು 1963ರ ಕೆಳಗೆ ಸ್ಥಾಪಿಸಲಾಯಿತು. ಸಂವಿಧಾನದ ಅನುಚ್ಛೇದ 240ರ ಕೆಳಗೆ ರಾಷ್ಟ್ರಾಧ್ಯಕ್ಷರು ಈ ನ್ಯಾಯಾಲಯವನ್ನು ಸ್ಥಾಪಿಸಿದರು. ಹೇಗಾದರೂ, ಈ ನ್ಯಾಯಾಲಯವನ್ನು ಸಂವಿಧಾನದ ಉದ್ದೇಶಕ್ಕೋಸ್ಕರ ಉಚ್ಚನ್ಯಾಯಾಲಯವೆಂದು ನಂತರ ಘೋಷಿಸಲಾಯಿತು. ಈ ಘೋಷಣೆಯನ್ನು ಗೋವ, ಡಾಮನ್, ಡಯು, ನ್ಯಾಯಿಕ ಆಯುಕ್ತರ ನ್ಯಾಯಾಲಯ (ಉಚ್ಚ ನ್ಯಾಯಾಲಯವೆಂದು ಘೋಷಣೆಮಾಡುವ) ಅಧಿನಿಯಮ 1954ರ ಕೆಳಗೆ ಮಾಡಲಾಯಿತು. ಮುಂಬೈ ಉಚ್ಚನ್ಯಾಯಾಲಯದ

ಪೀಠವೊಂದನ್ನು ಪಣಜಿಯಲ್ಲಿ ಸ್ಥಾಪನೆಮಾಡಿದ ಮೇಲೆ, ನ್ಯಾಯಿಕ ಆಯುಕ್ತರ ನ್ಯಾಯಾಲಯುವನ್ನು ರದ್ದುಪಡಿಸಲಾಗಿದೆ.

## ಉಚ್ಚನ್ಯಾಯಾಲಯಕ್ಕೆ ಸಾರ್ವಜನಿಕ ಅಭಿಯೋಜಕರು

ಹೊಸ ಅಪರಾಧಿಕ ಪ್ರಕ್ರಿಯಾ ಸಂಹಿತೆಯು ಉಚ್ಚನ್ಯಾಯಾಲಯಕ್ಕಿದ್ದ ಮೂಲ ಅಪರಾಧಿಕ ಅಧಿಕಾರ ವ್ಯಾಪ್ತಿಯನ್ನು ರದ್ದುಗೊಳಿಸಿದ್ದರೂ, ಉಚ್ಚ ನ್ಯಾಯಾಲಯಕ್ಕೊಬ್ಬ ಸಾರ್ವಜನಿಕ ಅಭಿಯೋಜಕನನ್ನು ನಿಯುಕ್ತಗೊಳಿಸಲು ಸಂಹಿತೆ ಅವಕಾಶ ಮಾಡಿದೆ. ಈ ಅಭಿಯೋಜಕರು, ಉಚ್ಚನ್ಯಾಯಾಲಯದ ಮುಂದೆ ಬರುವ ಎಲ್ಲ ಪ್ರಕರಣಗಳನ್ನು ಮತ್ತು ಮೇಲ್ಮನವಿಗಳನ್ನು ಸಂಹಿತೆಯ ಕೆಳಗೆ ನಡೆಸುತ್ತಾರೆ. ಹೀಗಾಗಿ ಸಂಹಿತೆಯ ಸಾಧಾರಣ ನಿಯಮಗಳು ಈ ಅಭಿಯೋಜಕರುಗಳಿಗೂ ಅನ್ವಯವಾಗುತ್ತವೆ.

## ಅಡ್ವೊಕೇಟ್ ಜನರಲ್

ಕೇಂದ್ರದಲ್ಲಿ ಅಟಾರ್ನಿ ಜನರಲ್ ಹೇಗೋ, ಹಾಗೆ ರಾಜ್ಯ ಮಟ್ಟದಲ್ಲಿ ಅತ್ಯುನ್ನತ ಕಾನೂನಿನ ಅಧಿಕಾರಿಯೆಂದರೆ ಅಡ್ವೊಕೇಟ್ ಜನರಲ್ ಅವರು. ಇವರನ್ನು ರಾಜ್ಯ ಸರ್ಕಾರ ನೇಮಕ ಮಾಡುತ್ತದೆ. ಇವರ ಅಧಿಕಾರಾವಧಿ ರಾಜ್ಯ ಸರ್ಕಾರದ ಇಷ್ಟಪರ್ಯಂತ. ಅಡ್ವೊಕೇಟ್ ಜನರಲ್ ಅವರಲ್ಲದೆ, ಅಪರ ಅಡ್ವೊಕೇಟ್ ಜನರಲ್ ಅವರು ಮತ್ತು ಸರ್ಕಾರಿ ಅಡ್ವೊಕೇಟರುಗಳು ಕೂಡ, ಸರ್ಕಾರದ ಪರವಾಗಿ ರಾಜ್ಯದಲ್ಲಿನ ನ್ಯಾಯಾಲಯಗಳಲ್ಲಿ ಮೊಕದ್ದಮೆಗಳನ್ನು ನಡೆಸುತ್ತಾರೆ.

| *ಕ್ರಮ ಸಂಖ್ಯೆ* | *ಉಚ್ಚ ನ್ಯಾಯಾಲಯದ ಹೆಸರು* | *ಯಾವ ರಾಜ್ಯ ಅಥವಾ ರಾಜ್ಯಗಳಿಗಾಗಿ ಸ್ಥಾಪಿಸಲ್ಪಟ್ಟಿದೆ* | *ಯಾವ ಕಾನೂನಿನನ್ವಯ ಅದನ್ನು ಸ್ಥಾಪಿಸಲಾಗಿದೆ* | *ಸ್ಥಾಪಿಸಲಾದ ತಾರೀಖು* |
|---|---|---|---|---|
| 1 | 2 | 3 | 4 | 5 |
| i | ಅಲಹಾಬಾದ್ | ಉತ್ತರ ಪ್ರದೇಶ | ಸಂವಿಧಾನ 214(2)ನೇ ಅನುಚ್ಛೇದ (ಇದಕ್ಕೆ ಮುಂಚೆ ಉಚ್ಚ ನ್ಯಾಯಾಲಯದ ಅಧಿನಿಯಮ 1861ರ ಕೆಳಗೆ ಹೊರಡಿಸಿದ ಏಕಸ್ವ ಪತ್ರದ ಕೆಳಗೆ) | 21.1. 1950<br>17.8.1866 |
| ii. | ಆಂಧ್ರಪ್ರದೇಶ | ಆಂಧ್ರಪ್ರದೇಶ | ರಾಜ್ಯ ಪುನರ್‌ರಚನಾ ಅಧಿನಿಮಯ, 1956, 65ನೇ ಖಂಡ (ಇದಕ್ಕೆ ಮುಂಚೆ ಆಂಧ್ರ ರಾಜ್ಯ ಅಧಿನಿಯಮ, 1953ರ 28ನೇ ಖಂಡದ ಕೆಳಗೆ | 1.11.1956 |

| ಕ್ರಮ ಸಂಖ್ಯೆ | ಉಚ್ಚ ನ್ಯಾಯಾಲಯದ ಹೆಸರು | ಯಾವ ರಾಜ್ಯ ಅಥವಾ ರಾಜ್ಯಗಳಿಗಾಗಿ ಸ್ಥಾಪಿಸಲ್ಪಟ್ಟಿದೆ | ಯಾವ ಕಾನೂನಿನನ್ವಯ ಅದನ್ನು ಸ್ಥಾಪಿಸಲಾಗಿದೆ | ಸ್ಥಾಪಿಸಲಾದ ತಾರೀಖು |
|---|---|---|---|---|
| 1 | 2 | 3 | 4 | 5 |
| | | | ಸ್ಥಾಪಿತವಾದ ಆಂಧ್ರ ಉಚ್ಚ ನ್ಯಾಯಾಲಯ) | 5.7.1954 |
| iii | ಗುವಾಹಟಿ | ಅಸ್ಸಾಂ ನಾಗಾಲ್ಯಾಂಡ್ ಮಣಿಪುರ ತ್ರಿಪುರ ಮೇಘಾಲಯ ಮಿಜೋರಾಮ್ ಮತ್ತು ಅರುಣಾಚಲ ಪ್ರದೇಶ | ಈಶಾನ್ಯ ಪ್ರದೇಶಗಳ (ಪುನರ್‌ರಚನೆ) ಅಧಿನಿಯಮ, 1971ರ 28 ಮತ್ತು 32ನೇ ಖಂಡಗಳು (ಇದಕ್ಕೆ ಮುಂಚೆ, ಅಸ್ಸಾಂ (ಗಡಿಗಳ ಮಾರ್ಪಾಟು) ಅಧಿನಿಯಮ 1951ರ ಕೆಳಗೆ ಸ್ಥಾಪಿತವಾದ ಅಸ್ಸಾಂ ಉಚ್ಚ ನ್ಯಾಯಾಲಯ (ಇದರ ಅಧಿಕಾರ ವ್ಯಾಪ್ತಿಯನ್ನು ನಾಗಾಲ್ಯಾಂಡ್ ರಾಜ್ಯದ ಅಧಿನಿಯಮ, 1962ರ ಕೆಳಗೆ ನಾಗಾಲ್ಯಾಂಡಿಗೂ ವಿಸ್ತರಿಸಲಾಗಿತು) | 21.1.1972<br>5.4.1958 |
| iv | ಪಾಟ್ನಾ | ಬಿಹಾರ್ | ಸಂವಿಧಾನದ 214(2)ನೇ ಅನುಚ್ಛೇದ (ಇದಕ್ಕೆ ಮುಂಚೆ ಉಚ್ಚ ನ್ಯಾಯಾಲಯದ ಅಧಿನಿಯಮ 1861ರ ಕೆಳಗೆ ಹೊರಡಿಸಿದ ಏಕಸ್ವ ಪತ್ರದಡಿಯಲ್ಲಿ) | 26.1.1950<br>9.2.1916 |
| v | ಗುಜರಾತ್ | ಗುಜರಾತ್ | ಬೊಂಬಾಯಿ ಪುನರ್ ರಚನಾ ಅಧಿನಿಯಮ, 1960ರ 28(1)ನೇ ಖಂಡ | 1.5.1960 |
| vi | ಕೇರಳ | ಕೇರಳ ಮತ್ತು ಒಕ್ಕೂಟ ಪ್ರದೇಶವಾದ ಲಕ್ಷದ್ವೀಪ | ರಾಜ್ಯಗಳ ಪುನರ್‌ರಚನಾ ಅಧಿನಿಯಮ 1956ರ | 1.11.1956 |

| ಕ್ರಮ ಸಂಖ್ಯೆ | ಉಚ್ಚ ನ್ಯಾಯಾಲಯದ ಹೆಸರು | ಯಾವ ರಾಜ್ಯ ಅಥವಾ ರಾಜ್ಯಗಳಿಗಾಗಿ ಸ್ಥಾಪಿಸಲ್ಪಟ್ಟಿದೆ | ಯಾವ ಕಾನೂನಿನನ್ವಯ ಅದನ್ನು ಸ್ಥಾಪಿಸಲಾಗಿದೆ | ಸ್ಥಾಪಿಸಲಾದ ತಾರೀಖು |
|---|---|---|---|---|
| 1 | 2 | 3 | 4 | 5 |
| | | | 49(2)ನೇ ಮತ್ತು 60ನೇ ಖಂಡಗಳು | |
| vii | ಮಧ್ಯಪ್ರದೇಶ | ಮಧ್ಯಪ್ರದೇಶ | ರಾಜ್ಯಗಳ ಪುನರ್‌ರಚನಾ ಅಧಿನಿಯಮ 1956ರ 49(1)ನೇ ಖಂಡ (ಇದಕ್ಕೆ ಮುಂಚೆ 2.1.1936ರ ಏಕಸ್ವ ಪತ್ರ) | 1.11.1956 |
| viii | ಮದರಾಸ್ | ತಮಿಳುನಾಡು ಮತ್ತು ಒಕ್ಕೂಟ ಪ್ರದೇಶವಾದ ಪಾಂಡಿಚೇರಿ | ಸಂವಿಧಾನದ 214(2) ಅನುಚ್ಛೇದ (ಇದಕ್ಕೆ ಮುಂಚೆ ಉಚ್ಚ ನ್ಯಾಯಾಲಯಗಳ ಅಧಿನಿಯಮ 1861ರ ಕೆಳಗೆ ಹೊರಡಿಸಲಾದ ಏಕಸ್ವಪತ್ರದ ಕೆಳಗೆ (ಅಂಧ್ರ ರಾಜ್ಯ ಅಧಿನಿಯಮ 1953ರ ಕೆಳಗೆ ಅಂಧ್ರ ರಾಜ್ಯ ಬೇರ್ಪಟ್ಟ ಮೇಲೆ ಹೊಸ ಮದ್ರಾಸ್ ರಾಜ್ಯಕ್ಕೆ ಉಚ್ಚ ನ್ಯಾಯಾಲಯವಾಗಿ ಮುಂದುವರೆಯಿತು.) ಪಾಂಡಿಚೇರಿ (ಆಡಳಿತ) ಅಧಿನಿಯಮ 1962ರ 9ನೇ ಖಂಡದ ಕೆಳಗೆ ಅಧಿಕಾರ ವ್ಯಾಪ್ತಿಯನ್ನು 6.11.62ರಿಂದ ಜಾರಿಗೆ ಬರುವ ಹಾಗೆ ಪಾಂಡಿಚೆರಿಗೆ ವಿಸ್ತರಿಸಲಾಯಿತು. | 26.1.1950<br>26 6.1862 |
| ix | ಬೊಂಬಾಯಿ (ಮುಂಬೈ) | ಮಹಾರಾಷ್ಟ್ರ (ಮೊದಲಿಗೆ | ಸಂವಿಧಾನದ 214(2)ನೇ ಅನುಚ್ಛೇದ | 26.1.1950 |

| ಕ್ರಮ ಸಂಖ್ಯೆ | ಉಚ್ಚ ನ್ಯಾಯಾಲಯದ ಹೆಸರು | ಯಾವ ರಾಜ್ಯ ಅಥವಾ ರಾಜ್ಯಗಳಿಗಾಗಿ ಸ್ಥಾಪಿಸಲ್ಪಟ್ಟಿದೆ | ಯಾವ ಕಾನೂನಿನನ್ವಯ ಅದನ್ನು ಸ್ಥಾಪಿಸಲಾಗಿದೆ | ಸ್ಥಾಪಿಸಲಾದ ತಾರೀಖು |
|---|---|---|---|---|
| 1 | 2 | 3 | 4 | 5 |
| | | ಬೊಂಬಾಯಿ) | (ಇದಕ್ಕೆ ಮುಂಚೆ ಉಚ್ಚ ನ್ಯಾಯಾಲಯಗಳ ಅಧಿನಿಯಮ 1861ರ ಕೆಳಗೆ ಹೊರಡಿಸಲಾದ ಏಕಸ್ವ ಪತ್ರದ ಕೆಳಗೆ.<br><br>ಬೊಂಬಾಯಿ ಪುನರ್ ರಚನಾ ಅಧಿನಿಯಮ 1960ರ ಕೆಳಗೆ ಅಸ್ತಿತ್ವಕ್ಕೆ ಬಂದ ಹೊಸ ಮಹಾರಾಷ್ಟ್ರ ರಾಜ್ಯಕ್ಕೆ ಉಚ್ಚ ನ್ಯಾಯಾಲಯವಾಗಿ ಮುಂದುವರೆಯಿತು. ಅಧಿನಿಯಮದ 41ನೇ ಖಂಡದ ಕೆಳಗೆ ನಾಗಪುರದಲ್ಲಿ ಶಾಶ್ವತ ಪೀಠವನ್ನು ಸ್ಥಾಪಿಸಲಾಯಿತು. | 26.6.1862<br>1.5.1960 |
| x | ಕರ್ನಾಟಕ (ಮೊದಲಿಗೆ ಮೈಸೂರು) | ಕರ್ನಾಟಕ | ರಾಜ್ಯಗಳ ಪುನರ್ ರಚನಾ ಅಧಿನಿಯಮ 1956ರ 49(2) ಖಂಡ (ಇದಕ್ಕೆ ಮುಂಚೆ ಸಂವಿಧಾನದ ಅನುಚ್ಛೇದ 214(2) ಮತ್ತು 238(2)ರ ಕೆಳಗೆ ಮೈಸೂರು ಪಾರ್ಟ್ 'ಬಿ' ರಾಜ್ಯಕ್ಕೆ ಉಚ್ಚನ್ಯಾಯಾಲಯು ವಾಗಿತ್ತು. ಅದಕ್ಕೂ ಮುಂಚೆ ಚೀಫ್ ಕೋರ್ಟ್ ಆಗಿದ್ದ ನಂತರ ಮೈಸೂರು | 1.11.1956<br>26.1.1950 |

| ಕ್ರಮ ಸಂಖ್ಯೆ | ಉಚ್ಚ ನ್ಯಾಯಾಲಯದ ಹೆಸರು | ಯಾವ ರಾಜ್ಯ ಅಥವಾ ರಾಜ್ಯಗಳಿಗಾಗಿ ಸ್ಥಾಪಿಸಲ್ಪಟ್ಟಿದೆ | ಯಾವ ಕಾನೂನಿನನ್ವಯ ಅದನ್ನು ಸ್ಥಾಪಿಸಲಾಗಿದೆ | ಸ್ಥಾಪಿಸಲಾದ ತಾರೀಖು |
|---|---|---|---|---|
| 1 | 2 | 3 | 4 | 5 |
| | | | ಉಚ್ಚ ನ್ಯಾಯಾಲಯವೆಂದು ಕರೆಯಲಾಯಿತು. | |
| xi | ಒರಿಸ್ಸಾ | ಒರಿಸ್ಸಾ | ಸಂವಿಧಾನದ 214(2)ನೇ ಅನುಚ್ಛೇದ (ಇದಕ್ಕೆ ಮುಂಚೆ ಗವರ್ನಮೆಂಟ್ ಆಫ್ ಇಂಡಿಯಾ ಅಧಿನಿಯಮ 1935ರ 229(1)ನೇ ಖಂಡದ ಕೆಳಗೆ) | 26.1.1950<br>30.4.1948 |
| xii | ಪಂಜಾಬ್ ಮತ್ತು ಹರಿಯಾಣ | ಪಂಜಾಬ್ ಮತ್ತು ಹರಿಯಾಣ ಹಾಗೂ ಒಕ್ಕೂಟ ಪ್ರದೇಶವಾದ ಚಂಡೀಗರ್ | ಪಂಜಾಬ್ ಪುನರ್ ರಚನಾ ಅಧಿನಿಯಮ 1966ರ 29 ಮತ್ತು 30ನೇ ಖಂಡಗಳು. ಇದಕ್ಕೆ ಮುಂಚೆ ಉಚ್ಚ ನ್ಯಾಯಾಲಯಗಳ ಅಧಿನಿಯಮ, 1861ರ ಕೆಳಗೆ ಹೊರಡಿಸಿದ ಏಕಸ್ವಪತ್ರದಿಂದ ಸ್ಥಾಪಿತವಾದ ಲಾಹೋರ್ ಉಚ್ಚನ್ಯಾಯಾಲಯ | 1.11.1966<br>21.3.1919 |
| xiii | ರಾಜಾಸ್ಥಾನ | ರಾಜಾಸ್ಥಾನ | ರಾಜ್ಯ ಪುನರ್ ರಚನಾ ಅಧಿನಿಯಮ, 1956ರ 49(2)ನೇ ಖಂಡ ಇದಕ್ಕೆ ಮುಂಚೆ ಸಂವಿಧಾನದ ಅನುಚ್ಛೇದ 214(2) ಮತ್ತು 238(12)ರ ಕೆಳಗೆ | 1.11.1956<br>26.1.1950 |
| xiv | ಕಲ್ಕತ್ತ | ಪಶ್ಚಿಮ ಬಂಗಾಳ ಒಕ್ಕೂಟ ಪ್ರದೇಶಗಳಾದ ಅಂಡಮಾನ್ | ಸಂವಿಧಾನದ 214(2)ನೇ ಅನುಚ್ಛೇದ (ಇದಕ್ಕೆ ಮುಂಚೆ ಉಚ್ಚನ್ಯಾಯಾಲಯಗಳ | |

| ಕ್ರಮ ಸಂಖ್ಯೆ | ಉಚ್ಚ ನ್ಯಾಯಾಲಯದ ಹೆಸರು | ಯಾವ ರಾಜ್ಯ ಅಥವಾ ರಾಜ್ಯಗಳಿಗಾಗಿ ಸ್ಥಾಪಿಸಲ್ಪಟ್ಟಿದೆ | ಯಾವ ಕಾನೂನಿನನ್ವಯ ಅದನ್ನು ಸ್ಥಾಪಿಸಲಾಗಿದೆ | ಸ್ಥಾಪಿಸಲಾದ ತಾರೀಖು |
|---|---|---|---|---|
| 1 | 2 | 3 | 4 | 5 |
| | | ಮತ್ತು ನಿಕೋಬಾರ್ ದ್ವೀಪಗಳು | ಅಧಿನಿಯಮ 1861ರ ಕೆಳಗೆ ಹೊರಡಿಸಲಾದ ಏಕಸ್ವಪತ್ರದ ಮೂಲಕ 2.5.1950ರಿಂದ ಜಾರಿಗೆ ಬರುವ ಹಾಗೆ, ಕಲ್ಕತ್ತ ಉಚ್ಚ ನ್ಯಾಯಾಲಯ (ಅಧಿಕಾರ ವ್ಯಾಪ್ತಿ ವಿಸ್ತರಣೆ) ಅಧಿನಿಯಮ 1933ರ ಕೆಳಗೆ ಅಂಡಮಾನ್ ಮತ್ತು ನಿಕೋಬಾರ್ ದ್ವೀಪ ಗಳಿಗೆ ಅಧಿಕಾರ ವ್ಯಾಪ್ತಿಯನ್ನು ವಿಸ್ತರಿಸಲಾಯಿತು.) | 14.5.1862 |
| xv | ಜಮ್ಮು ಮತ್ತು ಕಾಶ್ಮೀರ | ಜಮ್ಮು ಮತ್ತು ಕಾಶ್ಮೀರ | ಭಾರತ ಸಂವಿಧಾನದ ಅನುಚ್ಛೇದ 370 ಮತ್ತು ಜಮ್ಮು ಮತ್ತು ಕಾಶ್ಮೀರದ (93(4)ನೇ ಸಂವಿಧಾನದ) ಅನುಚ್ಛೇದ | 26.1.1957 |
| xvi | ದೆಹಲಿ | ದೆಹಲಿ ಒಕ್ಕೂಟ ಪ್ರದೇಶ | ದೆಹಲಿ ಉಚ್ಚ ನ್ಯಾಯಾಲಯ ಅಧಿ ನಿಯಮ 1966 | 31.10.1966 |
| xvii | ಹಿಮಾಚಲ ಪ್ರದೇಶ | ಹಿಮಾಚಲ ಪ್ರದೇಶ | ಹಿಮಾಚಲ ಪ್ರದೇಶ ರಾಜ್ಯದ ಅಧಿನಿಯಮ 1970ರ 21ನೇ ಖಂಡ | 25.1.1971 |
| xviii | ಸಿಕ್ಕಿಂ | ಸಿಕ್ಕಿಂ | ಸಿಕ್ಕಿಂ ಸರ್ಕಾರದ ಅಧಿ ನಿಯಮ 1974ರ ಕೆಳಗೆ (ಸಂವಿಧಾನದ 36ನೇ ತಿದ್ದುಪಡಿ ಅಧಿನಿಯಮ 1975) | 26.4.1975 |

* ಭಾಷಾಂತರಕಾರನ ಟಿಪ್ಪಣಿ: ಕ್ರಮಸಂಖ್ಯೆ 4ರಲ್ಲಿ ಪಾಟ್ನ ಉಚ್ಚನ್ಯಾಯಾಲಯದ ಪೀಠವೊಂದು ರಾಂಚಿಯಲ್ಲೂ, ಕ್ರಮಸಂಖ್ಯೆ 9ರಲ್ಲಿ ಮುಂಬೈ ಉಚ್ಚನ್ಯಾಯಾಲಯದ ಪೀಠಗಳು ನಾಗಪುರ ಮತ್ತು ಔರಂಗಾಬಾದ್‌ಗಳಲ್ಲಿಯೂ ಅಲ್ಲದೆ, ಗೋವಾ ರಾಜ್ಯದ ಪಣಜಿಯಲ್ಲೂ ಇವೆ.

# ಭಾರತದ ಸರ್ವೋಚ್ಚನ್ಯಾಯಾಲಯ
# ಶೃಂಗ ನ್ಯಾಯಾಲಯ

ಫೆಡರಲ್ ನ್ಯಾಯಾಲಯದ ಉತ್ತರೋತ್ತರ ನ್ಯಾಯಾಲವೇ ಭಾರತದ ಸರ್ವೋಚ್ಚ ನ್ಯಾಯಾಲಯ. ಆ ನ್ಯಾಯಾಲಯದ ಬಹುತೇಕ ಎಲ್ಲಾ ಅಧಿಕಾರ ವ್ಯಾಪ್ತಿ ಇದಕ್ಕೆ ಬಂದಿರುವುದೂ ಅಲ್ಲದೆ ಇನ್ನೂ ಹೆಚ್ಚಿನ ಕೆಲವು ಅಧಿಕಾರಗಳೂ ಕೂಡ ಪ್ರಾಪ್ತಿಯಾಗಿವೆ. ಅಲ್ಲದೆ ಇದರ ಅಧಿಕಾರ ವ್ಯಾಪ್ತಿ ಅತ್ಯಂತ ವಿಸ್ತಾರವಾದುದೂ ಆಗಿದೆ.

ಮಾನವ ಜೀವಿಗಳ ನಡುವೆ ನ್ಯಾಯ ಸಂರಕ್ಷಣೆಗೆ ಭದ್ರತೆಯನ್ನು ಕಾನೂನಿನ ಪರಮಾಧಿಕಾರ ಮಾತ್ರ ಕೊಡಬಲ್ಲದು ಎಂದು ನಮ್ಮ ಸಂವಿಧಾನ ಶಿಲ್ಪಿಗಳು ಮನಗಂಡಿದ್ದರು. ಅಲ್ಲದೆ ಪ್ರಜಾಪ್ರಭುತ್ವದ ಶಿಸ್ತುಬದ್ಧವಾದ ಹಾಗೂ ಕ್ರಮಬದ್ಧವಾದ ಬೆಳವಣಿಗೆಗೆ, ಇದೇ ಏಕಮಾತ್ರ ಭದ್ರತೆಯಾಗಿದೆ. ಅವರು ಇದನ್ನು ಮನಸ್ಸಿನಲ್ಲಿ ಇಟ್ಟುಕೊಂಡೇ ಸರ್ವೋಚ್ಚ ನ್ಯಾಯಾಲಯಕ್ಕೆ ತಿರುಗಾಣಿಯಂಥ ಪಾತ್ರವನ್ನು ವಹಿಸಿದರು. ಕಾನೂನಿನ ಪರಮಾಧಿಕಾರವನ್ನು ಎತ್ತಿಹಿಡಿಯಲು ಬೇಕಾದ ಅತ್ಯಂತ ಉನ್ನತ ವಿಧಾಯಕ ಶಕ್ತಿಯನ್ನು ಮತ್ತು ಅತಿ ವಿಸ್ತಾರವಾದ ವ್ಯಾಪ್ತಿಯನ್ನೂ ಈ ಪಾತ್ರ ಸರ್ವೋಚ್ಚ ನ್ಯಾಯಾಲಯಕ್ಕೆ ತಂದುಕೊಟ್ಟಿತು. ಸರ್ವೋಚ್ಚ ನ್ಯಾಯಾಲಯವನ್ನು 28.1.1950ರಂದು ಉದ್ಘಾಟಿಸಲಾಯಿತು. ಅದಕ್ಕೆ ಇರುವ ಅಧಿಕಾರ ವ್ಯಾಪ್ತಿ ಎಂದರೆ:

i ಒಕ್ಕೂಟ ಮತ್ತು ಒಕ್ಕೂಟದ ಘಟಕವೊಂದರ ನಡುವಣ ವ್ಯಾಜ್ಯಗಳನ್ನು ತೀರ್ಮಾನಿಸುವ ವಿಶೇಷ ಅಧಿಕಾರ ವ್ಯಾಪ್ತಿ (ಸಂವಿಧಾನದ 131ನೇ ಅನುಚ್ಛೇದ).

ii ಭಾರತದಲ್ಲಿನ ಪ್ರದೇಶಗಳಿಂದ ಉದ್ಭವಿಸುವ ವಿಷಯಗಳಿಗೆ ಸಂಬಂಧಪಟ್ಟ ವಿಶೇಷ ಅಧಿಕಾರ ವ್ಯಾಪ್ತಿ (131ನೇ ಅನುಚ್ಛೇದ)

iii ಒಕ್ಕೂಟದ ಸಕ್ಷಮತೆಗೆ ಒಳಪಡುವಂತೆ ಪಾರ್ಲಿಮೆಂಟು ನಿಗದಿಪಡಿಸಬಹುದಾದ ಇತರ ವಿಷಯಗಳಿಗೆ ಸಂಬಂಧಪಟ್ಟ ಅಧಿಕಾರವ್ಯಾಪ್ತಿ. (138ನೇ ಅನುಚ್ಛೇದ)

vi ಸಂವಿಧಾನ ಖಾತರಿಗೊಳಿಸಿದ ಮೂಲಭೂತ ಹಕ್ಕುಗಳನ್ನು ಒತ್ತಾಯಿಸುವ ಸಲುವಾಗಿ ಇರುವ ಅಧಿಕಾರ ವ್ಯಾಪ್ತಿ (ಅನುಚ್ಛೇದ 32)

v ಪ್ರೀವಿ ಕೌನ್ಸಿಲ್ ಚಲಾಯಿಸುತ್ತಿದ್ದ ಮೇಲ್ಮನವಿ ಅಧಿಕಾರ ವ್ಯಾಪ್ತಿಯನ್ನು ಹೋಲುವಂಥ ಸಾರ್ವತ್ರಿಕ ಮೇಲ್ಮನವಿ ಅಧಿಕಾರ ವ್ಯಾಪ್ತಿ (ಸಂವಿಧಾನದ 132 ಮತ್ತು 133ನೇ ಅನುಚ್ಛೇದಗಳು)

vi ಭಾರತದ ಪ್ರದೇಶದೊಳಗಿನ ಯಾವುದೇ ನ್ಯಾಯಾಲಯ ಅಥವಾ ನ್ಯಾಯಾಧೀಕರಣ, ಯಾವುದೇ ವ್ಯಾಜ್ಯ ಅಥವಾ ವಿಷಯದಲ್ಲಿ ಕೊಟ್ಟ

ಯಾವುದೇ ತೀರ್ಮಾನ,ಡಿಕ್ರಿ, ನಿರ್ಧರಣೆ, ಶಿಕ್ಷೆ ಅಥವಾ ಆದೇಶಗಳಿಂದ ಬರುವ ಮೇಲ್ಮನವಿಗಳನ್ನು ವಿಶೇಷ ಅನುಮತಿ ನೀಡಿ ವಿಚಾರಣೆಗೆ ಸ್ವೀಕರಿಸುವ, ಪ್ರಭುತ್ವದ ವಿಶೇಷಾಧಿಕಾರವನ್ನು ಹೋಲುವ ವಿಶೇಷ ಅಧಿಕಾರ ವ್ಯಾಪ್ತಿ (ಅನುಚ್ಛೇದ 136)

vii ಯಾವುದೇ ಕಾನೂನಿನ ಪ್ರಶ್ನೆ ಅಥವಾ ಸಂಗತಿಯ ಪ್ರಶ್ನೆಗೆ ಸಂಬಂಧಿಸಿದ ಹಾಗೆ ರಾಷ್ಟ್ರಪತಿಯವರಿಂದ ಬಂದ ಪರಾಮರ್ಶೆಗಳ ಮೇಲೆ ಸಲಹೆ ನೀಡುವ ಅಧಿಕಾರ ವ್ಯಾಪ್ತಿ (ಅನುಚ್ಛೇದ 143)

viii ರಾಷ್ಟ್ರಾಧ್ಯಕ್ಷರ ಮತ್ತು ಉಪಾಧ್ಯಕ್ಷರ ಚುನಾವಣೆಗೆ ಸಂಬಂಧಿಸಿದ ವ್ಯಾಜ್ಯಗಳನ್ನು (ಸಂವಿಧಾನದ 71ನೇ ಅನುಚ್ಛೇದ ಮತ್ತು ಅಧ್ಯಕ್ಷ ಹಾಗೂ ಉಪಾಧ್ಯಕ್ಷರ ಚುನಾವಣೆಗಳ ಅಧಿನಿಯಮ 1952) ತೀರ್ಮಾನಿಸುವ ವಿಶೇಷ ಅಧಿಕಾರ ವ್ಯಾಪ್ತಿ; ಅಲ್ಲದೆ ಒಕ್ಕೂಟದ ಸಾರ್ವಜನಿಕ ಸೇವಾ ಆಯೋಗದ ಅಧ್ಯಕ್ಷರ ಮತ್ತು ಸದಸ್ಯರುಗಳ (ಅನುಚ್ಛೇದ 371) ದುರ್ನಡತೆಯ ತನಿಖೆ.

ಸರ್ವೋಚ್ಚ ನ್ಯಾಯಾಲಯದ ಸ್ಥಾಪನೆಯಾದ ಮೇಲೆ ಮೊಟ್ಟಮೊದಲ ಬಾರಿಗೆ ವಿಧಿಬದ್ಧ ಅಪರಾಧಿಕ ಮೇಲ್ಮನವಿ ಅಧಿಕಾರ ವ್ಯಾಪ್ತಿ ಅಸ್ತಿತ್ವಕ್ಕೆ ಬಂದಿತು. ಇದರಿಂದಾಗಿ ಕೆಲವು ನಿರ್ದಿಷ್ಟ/ನಿಯಮಿತ ವರ್ಗಕ್ಕೆ ಸೇರಿದ ಅಪರಾಧ ಪ್ರಕರಣಗಳಿಂದ ಬಂದ ಮೇಲ್ಮನವಿಗಳನ್ನು ವಿಚಾರಣೆಗೆ ಅಂಗೀಕಾರ ಮಾಡುವ ಅವಕಾಶ ಉಂಟಾಯಿತು. ಇದಕ್ಕೆ ಮುಂಚೆ ಪ್ರಭುತ್ವದ ವಿಶೇಷಾಧಿಕಾರದ ಪ್ರಭಾವಕ್ಕೊಳಪಟ್ಟು, ವಿಶೇಷ ಅನುಮತಿ ನೀಡಿ, ಇಂಥ, ಮೇಲ್ಮನವಿ ಅಧಿಕಾರ ವ್ಯಾಪ್ತಿಯನ್ನು ಪ್ರೀವಿ ಕೌನ್ಸಿಲ್ ಚಲಾಯಿಸಬಹುದಾಗಿತ್ತು.

ತನಗಿರುವ ನ್ಯಾಯಿಕ ಸ್ವಾತಂತ್ರ್ಯವಲ್ಲದೆ, ಆಡಳಿತಾತ್ಮಕವಾದ ಸ್ವಾತಂತ್ರ್ಯವೂ ಸರ್ವೋಚ್ಚನ್ಯಾಯಾಲಯಕ್ಕೆ ಇದೆ. ಇದಕ್ಕೆ ಸಂಬಂಧಿಸಿದ ಹಾಗೆ, ಸಂವಿಧಾನದಲ್ಲಿ ಕೆಲವು ವಿಶೇಷ ಅವಕಾಶಗಳನ್ನು ಒದಗಿಸಿಕೊಡಲಾಗಿದೆ. ಇದರಂತೆ, ಮುಖ್ಯ ನ್ಯಾಯಾಧೀಶರಿಗೆ ನ್ಯಾಯಾಲಯದ ಸಿಬ್ಬಂದಿಯನ್ನು ನೇಮಕಮಾಡುವ ಅಧಿಕಾರ ಮತ್ತು ಅವರ ಸೇವಾ ನಿಯಮಗಳನ್ನು ನಿರ್ಧರಿಸುವ ಅಧಿಕಾರವನ್ನು ಕೊಡಲಾಗಿದೆ. ವಿರಾಮ ವೇತನ, ಸಂಬಳ, ಭತ್ಯಗಳು ಮತ್ತು ರಜ ಇವುಗಳ ಮಟ್ಟಿಗೆ ರಾಷ್ಟ್ರಾಧ್ಯಕ್ಷರ ಸಲಹೆಯನ್ನು ಪಡೆಯಬೇಕೆಂಬ ನಿರ್ಬಂಧವನ್ನು ಹೊರತುಪಡಿಸಿ, ಮಿಕ್ಕ ಎಲ್ಲ ವಿಷಯಗಳಲ್ಲೂ ಹೊರಗಿನ ಯಾವ ಅಧಿಕಾರಪದದೊಂದಿಗೂ ಪರಾಮರ್ಶೆಯನ್ನು ಮಾಡಬೇಕಾಗಿಲ್ಲ. ಇದರ ಉದ್ದೇಶ, ಉಚ್ಚ ನ್ಯಾಯಾಲಯದ ಸಿಬ್ಬಂದಿಯ ಮತ್ತು ಅವರಿಗೆ ಹೋಲಿಕೆಯಾಗುವ ಇತರ ಸರ್ಕಾರೀ ನೌಕರರ ವರ್ಗಗಳ ವೇತನರಚನಾ ಕ್ರಮಗಳಲ್ಲಿ ಸಾಮರಸ್ಯವಿಲ್ಲದ ಹಾಗೆ ಆಗುವುದನ್ನು ತಪ್ಪಿಸುವುದೇ ಆಗಿದೆ. ಉಚ್ಚ ನ್ಯಾಯಾಲಯದ ಖರ್ಚುಗಳ ಮೇಲೆ ಪಾರ್ಲಿಮೆಂಟಿನ ನಿಯಂತ್ರಣವಿಲ್ಲದಿರುವಂತೆ ಮಾಡಲು, ಆ ನ್ಯಾಯಾಲಯದ ಆಡಳಿತಾತ್ಮಕ ವೆಚ್ಚಗಳನ್ನು ಭಾರತದ ಸಮುಚ್ಚಯನಿಧಿಗೇ (Consolidated fund of India) ನೇರವಾಗಿ ಖರ್ಚು ಹಾಕಲು

ಅವಕಾಶವನ್ನು ಕಲ್ಪಿಸಲಾಗಿದೆ. ನ್ಯಾಯಾಧೀಶರುಗಳ ಮೇಲೆ ಪಾರ್ಲಿಮೆಂಟಿಗೆ ಇರುವ ಏಕೈಕ ನಿಯಂತ್ರಣವೆಂದರೆ ಅಧಿಕ್ಷೇಪ ಅಥವಾ ಖಂಡನೆ ಮಾಡುವ ಅಧಿಕಾರ.

ಸರ್ವೋಚ್ಚನ್ಯಾಯಾಲಯ ಒಬ್ಬ ಮುಖ್ಯ ನ್ಯಾಯಾಧೀಶರನ್ನು ಮತ್ತು 25ಜನ ಸಂಗಡಿಗ ನ್ಯಾಯಾಧೀಶರುಗಳನ್ನು ಒಳಗೊಂಡಿದೆ. ಮುಖ್ಯ ನ್ಯಾಯಾಧೀಶರ ಮತ್ತು ಅವರ ಸಂಗಡಿಗ ಕಿರಿಯ ನ್ಯಾಯಾಧೀಶರುಗಳ ವೇತನ ಮತ್ತು ಇತರ ಸವಲತ್ತುಗಳನ್ನು ಸಂವಿಧಾನದಲ್ಲೇ ನಿಗದಿಮಾಡಲಾಗಿದೆ.

ಸರ್ವೋಚ್ಚ ನ್ಯಾಯಾಲಯಕ್ಕೆ ಮೂಲ, ಮೇಲ್ಮನವಿ ಹಾಗೂ ಸಲಹಾ ಅಧಿಕಾರ ವ್ಯಾಪ್ತಿಗಳು ಇವೆ. ಮೂಲ ಅಧಿಕಾರ ವ್ಯಾಪ್ತಿಯನ್ನು ಬಹಳ ಅಪೂರ್ವವಾಗಿ ಉಪಯೋಗಿಸಲಾಗುತ್ತದೆ. ಆದಾಗ್ಯೂ ಕೆಲವು ಪ್ರಕರಣಗಳಲ್ಲಿ ಅದನ್ನೇ ಅವಲಂಬಿಸಿ, ಚಲಾಯಿಸಲಾಗಿದೆ. ಸರ್ವೋಚ್ಚ ನ್ಯಾಯಾಲಯದ ಒಂದು ಮುಖ್ಯವಾದ ಅಧಿಕಾರ ವ್ಯಾಪ್ತಿಯೆಂದರೆ ಅನುಚ್ಛೇದ 32ರ ಕೆಳಗೆ ಮೂಲಭೂತ ಹಕ್ಕುಗಳ ರಕ್ಷಣೆಗಾಗಿ ಸಲ್ಲಿಸಿದ ರಿಟ್ ಅರ್ಜಿಗಳನ್ನು ಸ್ವೀಕರಿಸುವುದು. ಈ ಅಧಿಕಾರವನ್ನು ಸವಿಸ್ತಾರವಾಗಿ ಚಲಾಯಿಸಲಾಗಿದೆ. ಇತ್ತೀಚಿನ ದಿನಗಳಲ್ಲಿ, ಸಾರ್ವಜನಿಕ ಹಿತಾಸಕ್ತಿ ವ್ಯವಹಾರಗಳೆಂದು ವ್ಯಾಪಕವಾಗಿ ಗುರುತಿಸಲ್ಪಟ್ಟ ಖಟ್ಲೆಗಳನ್ನು ಸ್ವೀಕರಿಸುತ್ತಿರುವುದರಿಂದ, ಇದರ ವ್ಯಾಪ್ತಿ ಇನ್ನೂ ವಿಸ್ತಾರಗೊಂಡಿದೆ.

ಮೇಲ್ಮನವಿಗಳನ್ನು ಇತ್ಯರ್ಥ ಮಾಡುವುದೇ ಸರ್ವೋಚ್ಚನ್ಯಾಯಾಲಯದ ಪ್ರಾಥಮಿಕ ಕಾರ್ಯಭಾರವಾಗಿದೆ. ಸಂವಿಧಾನಾತ್ಮಕ ವಿಧಿಗಳನ್ನು ಅರ್ಥೈಸುವುದರಲ್ಲಿ ಅದು ಆ ಸ್ಥಾನ ಬಲದಿಂದ ಅಂತಿಮ ನಿರ್ಣಯಕಾರಿಯಾಗಿದ್ದು, ಕಾನೂನಿನ ಏಕರೂಪ ನಿರ್ವಚನವನ್ನು ಅದು ಒದಗಿಸುತ್ತದೆ. ಈ ವಿಷಯದಲ್ಲಿ ಅದಕ್ಕೆ ಸಂಪೂರ್ಣ ಅಧಿಕಾರವಿದೆ. ಪ್ರಕರಣದಿಂದ ಪ್ರಕರಣಕ್ಕೆ ಅದು ತನ್ನ ಮನಸ್ಸನ್ನು ಬದಲಾಯಿಸಬಹುದಾಗಿದೆ. ಆದಾಗ್ಯೂ ಅದು ಪೂರ್ವ ನಿರ್ಣಯದ ನಿದರ್ಶನಗಳ ಮೇಲ್ಪಂಕ್ತಿಯನ್ನು ಅನುಸರಿಸುವ ಪ್ರಯತ್ನವನ್ನು ಮಾಡುತ್ತದೆ. ಪೂರ್ವ ನಿರ್ಣಯಾನುಸಾರವೆಂದರೆ, ತೀರ್ಮಾನಗಳ ಸರಣಿಯಲ್ಲಿ ಖಚಿತಗೊಳಿಸಲ್ಪಟ್ಟ ಕಾನೂನಿನ ನಿರ್ವಚನ. ಇದು ನ್ಯಾಯಾಲಯಗಳ ಮೇಲೆ ಕಡ್ಡಾಯವಾಗಿದ್ದು, ಅಂಥದೇ ಪ್ರಕರಣಗಳಲ್ಲಿ ಈ ನಿರ್ವಚನವನ್ನು ಅನುಸರಿಸಲೇಬೇಕು.

ಸರ್ವೋಚ್ಚನ್ಯಾಯಾಲಯಕ್ಕೆ ಅನೇಕ ಮೂಲಗಳಿಂದ ಮೇಲ್ಮನವಿಗಳು ಬರುತ್ತವೆ; ಅಂದರೆ, ಉಚ್ಚನ್ಯಾಯಾಲಯಗಳು, ನ್ಯಾಯಾಧಿಕರಣಗಳು ಮತ್ತು ವಿಶೇಷ ನ್ಯಾಯಾಧಿಕರಣಗಳು. ಹೇಗಾದರೂ, ಯಾವುದೇ ನ್ಯಾಯಾಲಯ, ನ್ಯಾಯಾಧಿಕರಣ ಅಥವಾ ಪ್ರಾಧಿಕಾರದ ಯಾವುದೇ ಆದೇಶ ಅಥವಾ ತೀರ್ಮಾನದಿಂದ ಬಂದ ವಿಶೇಷ ಅನುಮತಿ ಅರ್ಜಿಗಳನ್ನು ಸ್ವೀಕರಿಸಲು ಅನುಚ್ಛೇದ 136 ಸರ್ವೋಚ್ಚ ನ್ಯಾಯಾಲಯಕ್ಕೆ ಅಧಿಕಾರ ಕೊಡುತ್ತದೆ.

ಒಮ್ಮೆ ತೀರ್ಮಾನ ಕೊಡಲಾಯಿತೆಂದರೆ ಅದು ಅಂತಿಮವಾಗುತ್ತದೆ; ಆದರೆ ತನ್ನದೇ ತೀರ್ಮಾನಗಳನ್ನು ಪುನರವಲೋಕನ ಮಾಡಲು ಸರ್ವೋಚ್ಚ ನ್ಯಾಯಾಲಯಕ್ಕೆ ಅಧಿಕಾರ ಇದೆ. ಈ ಪ್ರಕ್ರಿಯೆಯನ್ನು ಸರ್ವೋಚ್ಚ ನ್ಯಾಯಾಲಯದ ನಿಯಮಗಳು, 1966ರ XLನೇ ಆದೇಶದಲ್ಲಿ ಅಳವಡಿಸಲಾಗಿದೆ. ಈ

ಪುನರವಲೋಕನವನ್ನು ಬಹು ಅಪೂರ್ವವಾಗಿ ಮಾನ್ಯ ಮಾಡಲಾಗುತ್ತದೆ. ಆದಾಗ್ಯೂ ಇದನ್ನು ಒತ್ತಾಯಿಸುವ ಮಂದಿ ಇದ್ದೇ ಇರುತ್ತಾರೆ. ಆದರೆ ನ್ಯಾಯಾಧೀಶರುಗಳನ್ನು ಅಷರು ಕೊಟ್ಟ ತೀರ್ಮಾನ ತಪ್ಪಾಗಿದ್ದು ಪುನರವಲೋಕನಕ್ಕೆ ಅರ್ಹವಾಗಿದೆ ಎಂದು ಒಪ್ಪಿಸುವುದರಲ್ಲಿ ಜಯಶಾಲಿಯಾಗುವುದು ಇಲ್ಲವೇ ಇಲ್ಲ ಎಂದು ಹೇಳಲಾಗದಿದ್ದರೂ, ಬಹು ಅಪೂರ್ವ ಎನ್ನಬಹುದು. ಸರ್ವೋಚ್ಚ ನ್ಯಾಯಾಲಯ ಯಾವುದೇ ಕಾನೂನಿನ ಮೇಲೆ ನೀಡಿದ ನಿರ್ವಚನವನ್ನು ಭಾರತ ಪ್ರದೇಶದಲ್ಲಿರುವ ಎಲ್ಲ ನ್ಯಾಯಾಲಯಗಳೂ ಕಡ್ಡಾಯವಾಗಿ ಅನುಸರಿಸಬೇಕೆಂದು ಸಂವಿಧಾನ ಶಿಲ್ಪಿಗಳು ಭಾರತ ಸಂವಿಧಾನದ 141ನೇ ಅನುಚ್ಛೇದದಲ್ಲಿ ನಿಬಂಧನೆ ಮಾಡಿದ್ದಾರೆ. ಈ ಅಧಿಕಾರವಾಣಿಯಿಂದ ಘೋಷಿಸಲಾದ ತೀರ್ಮಾನಕ್ಕೆ ಗಣರಾಜ್ಯದಲ್ಲಿನ ಎಲ್ಲ ನ್ಯಾಯಾಲಯಗಳೂ ಬದ್ಧವಾಗಿದ್ದು, ಇದನ್ನು ಅಳವಡಿಸಿರುವ 141ನೇ ಅನುಚ್ಛೇದ ಸರ್ವೋಚ್ಚ ನ್ಯಾಯಾಲಯವನ್ನು ಸಂವಿಧಾನದ ಅಂಗವನ್ನಾಗಿಸುವ ಪರಿಣಾಮವನ್ನು ಬೀರಿದೆ. ಈ ಅನುಚ್ಛೇದದಡಿಯಲ್ಲಿ, ಸರ್ವೋಚ್ಚ ನ್ಯಾಯಾಲಯ ಮಾಡಿದ ಉಚ್ಚರಣೆಯು, ಯಾವುದೇ ಅಂತಿಮ ತೀರ್ಪಿನ ತೀರ್ಮಾನದ ತಿರುಳಿನ ಭಾಗವಾಗಿರಬೇಕಾಗಿದೆ (ತೀರ್ಮಾನದ ತಿರುಳು ಯಾವುದೇ ವಿವಾದಾಂಶ ಅಥವಾ ವಿವಾದಾಂಶಗಳನ್ನು ಉತ್ತರಿಸಲು ಅವಲಂಬಿಸಿದ ಕಾರಣ ಅಥವಾ ಸೂತ್ರ). ಇದಲ್ಲದೆ, ಪ್ರಾಸಂಗಿಕೋಕ್ತಿಗಳು (ತೀರ್ಮಾನ ಮಾಡಲು ಅತ್ಯವಶ್ಯಕವಲ್ಲದ ಅಥವಾ ಪ್ರಾಸಂಗಿಕವಾದ ಹೇಳಿಕೆಗಳು ಮತ್ತು ಪರಿವೀಕ್ಷಣೆಗಳು) ಮತ್ತು ಕಾನೂನಿನ ಕೇವಲ ನಿರೂಪಣೆಗಳು ಕೂಡ, ಅನುಚ್ಛೇದ 141ರ ಕೆಳಗೆ ಘೋಷಣೆಯ ಸ್ವರೂಪವನ್ನೇ ತಾಳುತ್ತವೆ.

ಸರ್ವೋಚ್ಚ ನ್ಯಾಯಾಲಯದ ಎಲ್ಲ ನಡವಳಿಕೆಗಳನ್ನು ಇಂಗ್ಲಿಷ್ ಭಾಷೆಯಲ್ಲಿ ನಡೆಸಲಾಗುತ್ತದೆ. ಎಲ್ಲ ದಸ್ತಾವೇಜುಗಳ ಇಂಗ್ಲಿಷ್ ಭಾಷಾಂತರಗಳನ್ನು ಅವಶ್ಯಕವಾಗಿ ಒಪ್ಪಿಸಬೇಕು. ನ್ಯಾಯಾಲಯದ ಮುಂದಿರುವ ನಡವಳಿಕೆಗಳಲ್ಲಿ ಅವಲಂಬಿಸಬೇಕಾದ ದಸ್ತಾವೇಜುಗಳ ಭಾಷಾಂತರಕ್ಕೆ ಸಂಬಂಧಿಸಿದಂತೆ ನಿಯಮಗಳನ್ನು ಸರ್ವೋಚ್ಚ ನ್ಯಾಯಾಲಯ ರೂಪಿಸಿದೆ. ಸರ್ವೋಚ್ಚ ನ್ಯಾಯಾಲಯದ ಪೀಠ ದೆಹಲಿಯಲ್ಲಿದೆ. ಇದರ ನಡವಳಿಕೆಗಳು ಸಾರ್ವಜನಿಕರಿಗೆ ಮುಕ್ತವಾಗಿವೆ. ಕೊಠಡಿಯೊಳಗೆ ಕಲಾಪ ನಡೆಸುವಾಗ ಮಾತ್ರ ಒಬ್ಬರೇ ನ್ಯಾಯಾಧೀಶರು ಕೂರುತ್ತಾರೆ. ಈ ಸಂದರ್ಭವನ್ನು ವಿನಾಯಿಸಿ, ಮಿಕ್ಕ ಎಲ್ಲಾ ಸಂದರ್ಭಗಳಲ್ಲಿ ಇಬ್ಬರು ಅಥವಾ ಹೆಚ್ಚಿಗೆ ನ್ಯಾಯಾಧೀಶರುಗಳು ಇರುವ ಪೀಠ ವಿಚಾರಣೆಯನ್ನು ನಡೆಸುತ್ತದೆ. ಸಂವೈಧಾನಿಕ ವಿಷಯಗಳನ್ನು ಐವರು ನ್ಯಾಯಾಧೀಶರ ಪೀಠ ವಿಚಾರಣೆ ಮಾಡುತ್ತದೆ. ವಿಶೇಷ ಸಂದರ್ಭಗಳಲ್ಲಿ ಐವರು ಸದಸ್ಯರಿಗಿಂತ ಹೆಚ್ಚಾಗಿರುವ ಪೀಠಗಳನ್ನು ರಚಿಸಲಾಗುತ್ತದೆ.

## ಮೂಲಭೂತ ಹಕ್ಕುಗಳನ್ನು ನಿರ್ಬಂಧವಾಗಿ ಜಾರಿಗೆ ತರುವುದು

ಭಾರತ ಸಂವಿಧಾನದ ಮೂರನೆಯ ಭಾಗದಲ್ಲಿ ಈ ದೇಶದೊಳಗಿನ ಎಲ್ಲ ಪೌರರಿಗೂ

ಮತ್ತು ವ್ಯಕ್ತಿಗಳಿಗೂ ಮೂಲಭೂತ ಹಕ್ಕುಗಳನ್ನು ಖಾತರಿಗೊಳಿಸಲಾಗಿದೆ. ಅವುಗಳ ರಕ್ಷಣೆಗಾಗಿ, ಅವುಗಳ ಜೊತೆಗೇ ಖಾತರಿಯಾದ ಪರಿಹಾರವಿಲ್ಲದೆ, ಖಾತರಿಯಾದ ಮೂಲಭೂತ ಹಕ್ಕುಗಳು ಎನ್ನುವುದು ಅರ್ಥಶೂನ್ಯವಾಗುತ್ತಿತ್ತು. ಸಂವಿಧಾನ ಶಿಲ್ಪಿಗಳು ಇಂಥದೊಂದು ಅವಕಾಶವನ್ನು ಅನುಚ್ಛೇದ 32ರಲ್ಲಿ ಅಳವಡಿಸಿ, ಸರ್ವೋಚ್ಚ ನ್ಯಾಯಾಲಯವನ್ನು ಮೂಲಭೂತ ಹಕ್ಕುಗಳ ರಕ್ಷಕನನ್ನಾಗಿ ಮಾಡಿದ್ದಾರೆ. ಸಂವಿಧಾನದ ಮೂರನೆಯ ಭಾಗದಲ್ಲಿ ದತ್ತವಾಗಿರುವ ಈ ಮೂಲಭೂತ ಹಕ್ಕುಗಳನ್ನು ಜಾರಿಗೆ ತರುವುದಕ್ಕೆ, ಸೂಕ್ತವಾದ ನಡವಳಿಕೆಗಳ ಮೂಲಕ ಸರ್ವೋಚ್ಚ ನ್ಯಾಯಾಲಯವನ್ನು ಕೋರಲು ಖಾತರಿಯಾದ ಹಕ್ಕಿದೆ ಎಂದು ಈ ಅನುಚ್ಛೇದ ಘೋಷಿಸಿದೆ. ಈ ಅನುಚ್ಛೇದದ ಕೆಳಗೆ ಇರುವ ನ್ಯಾಯಾಲಯದ ಅಧಿಕಾರ ವ್ಯಾಪ್ತಿಯ ಹರವು ಬಹಳ ವಿಸ್ತಾರವಾದುದು. ಸಂವಿಧಾನದ ಪ್ರಾರಂಭದಿಂದ, ಜೀವನದ ಎಲ್ಲ ವರ್ಗಗಳ ಅರ್ಜಿದಾರರು ತಮ್ಮ ಮೂಲಭೂತ ಹಕ್ಕುಗಳ ರಕ್ಷಣೆಗೆ ಮತ್ತು ಜಾರಿಗಾಗಿ ಈ ನ್ಯಾಯಾಲಯವನ್ನು ಕೇಳಿಕೊಂಡಿದ್ದಾರೆ.

## ಕಾನೂನು ಅಧಿಕಾರಿಗಳು ಮತ್ತು ಕೇಂದ್ರೀಯ ಕಾನೂನು ನಿಯೋಗ

**ಕೇಂದ್ರ ಸರ್ಕಾರದ ಕಾನೂನು ಅಧಿಕಾರಿಗಳು:**

### *ಅಟಾರ್ನಿ ಜನರಲ್ (ಮಹಾ ನ್ಯಾಯವಾದಿ)*

ಒಬ್ಬ ಕಾನೂನು ಅಧಿಕಾರಿ, ಅಂದರೆ ಅಟಾರ್ನಿ ಜನರಲ್ ಅವರನ್ನು ನೇಮಕಮಾಡಲು ರಾಷ್ಟ್ರಾಧ್ಯಕ್ಷರಿಗೆ ಸಂವಿಧಾನದ 76ನೇ ಅನುಚ್ಛೇದ ಅನುವು ಮಾಡಿಕೊಟ್ಟಿದೆ. ಭಾರತ ಸರ್ಕಾರಕ್ಕೆ ಕಾನೂನಿನ ವಿಷಯಗಳ ಮೇಲೆ ಸಲಹೆ ಕೊಡುವುದು, ಆಗಿಂದಾಗ್ಗೆ ರಾಷ್ಟ್ರಾಧ್ಯಕ್ಷರಿಂದ ತನ್ನ ಗಮನಕ್ಕೆ ತಂದ ಅಥವಾ ತನಗೆ ವಹಿಸಿಕೊಟ್ಟ ಕಾನೂನು ಸ್ವಭಾವದ ಕರ್ತವ್ಯಗಳನ್ನು ನೆರವೇರಿಸುವುದೂ ಮತ್ತು ಸಂವಿಧಾನದ ಕೆಳಗಾಗಲೀ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಡಿಯಲ್ಲಾಗಲೀ ತನ್ನ ಮೇಲೆ ಜವಾಬ್ದಾರಿ ವಹಿಸಿದ ಕೆಲಸಗಳನ್ನು ನಿರ್ವಹಿಸುವುದೂ, ಅವನ ಕರ್ತವ್ಯಗಳಲ್ಲಿ ಸೇರಿದೆ.

ಅಟಾರ್ನಿ ಜನರಲ್ ದೇಶದಲ್ಲೇ ಅತ್ಯುನ್ನತ ಕಾನೂನು ಅಧಿಕಾರಿಗಳಾಗಿದ್ದು ತಮ್ಮ ಕರ್ತವ್ಯ ನಿರ್ವಹಣೆಗೋಸ್ಕರ ಅವರು ದೇಶದ ಯಾವ ನ್ಯಾಯಾಲಯದಲ್ಲೇ ಆಗಲಿ ವಾದ ಮಂಡಿಸುವ ಹಕ್ಕಿದೆ. ರಾಷ್ಟ್ರಪತಿಯವರ ಇಷ್ಟಾನುಸಾರ ಅವರು ಅಧಿಕಾರದಲ್ಲಿ ಮುಂದುವರೆಯಬಹುದಾಗಿದ್ದು, ಕಾಲಕಾಲಕ್ಕೆ ರಾಷ್ಟ್ರಪತಿಯವರು ನಿರ್ಧರಿಸಿದ ಸಂಭಾವನೆಯನ್ನು ಪಡೆಯುತ್ತಾರೆ.

ಅನುಚ್ಛೇದ 88ರ ಕೆಳಗೆ, ಅಟಾರ್ನಿ ಜನರಲ್ ಅವರಿಗೆ ಒಂದು ಮುಖ್ಯವಾದ ಹಕ್ಕಿದೆ; ಪಾರ್ಲಿಮೆಂಟಿನ ಎರಡೂ ಸದನದಲ್ಲಿ ಹಾಗೂ ತಾವು ಸದಸ್ಯರಾಗಿ ನೇಮಕ ಹೊಂದಿದ ಯಾವುದೇ ಸಮಿತಿಯಲ್ಲಿ ಅವರಿಗೆ ಮಾತನಾಡುವ ಹಕ್ಕಿದೆ (ಆದರೆ ಮತ ಚಲಾಯಿಸುವಂತಿಲ್ಲ). ಇದಲ್ಲದೆ ಅನುಚ್ಛೇದ 195(4)ರ ಕೆಳಗೆ ಪಾರ್ಲಿಮೆಂಟಿನ

ಸದಸ್ಯರಿಗೆ ಇರುವ ಎಲ್ಲ ವಿಶೇಷ ಸವಲತ್ತುಗಳನ್ನು ಅಟಾರ್ನಿ ಜನರಲ್ ಅವರಿಗೆ ಕೊಡಲಾಗಿದೆ.

ವಿಷಯವೊಂದರಲ್ಲಿ ಯಾವುದೇ ನ್ಯಾಯನಿಯಮದ ಸಂವೈಧಾನಿಕತೆಯನ್ನು ನ್ಯಾಯಾಲಯದಲ್ಲಿ ಪ್ರಶ್ನಿಸಿದಾಗ, ಸರ್ವೋಚ್ಚ ನ್ಯಾಯಾಲಯದ ಆದೇಶದ ಕೆಳಗೆ ತಿಳುವಳಿಕೆಯನ್ನು ಪಡೆದುಕೊಳ್ಳಲು ಅವರಿಗೆ ಹಕ್ಕಿದೆ. ಅನುಚ್ಛೇದ 143ರ ಕೆಳಗೆ, ರಾಷ್ಟ್ರಪತಿಯವರು ಸರ್ವೋಚ್ಚ ನ್ಯಾಯಾಲಯಕ್ಕೆ ಕಳುಹಿಸಿದ ಯಾವುದೇ ಪರಾಮರ್ಶೆಯಲ್ಲಿ ತಿಳುವಳಿಕೆ ಪಡೆದುಕೊಂಡು ನ್ಯಾಯಾಲಯದ ಮುಂದೆ ಹಾಜರಾಗಲು ಅವರಿಗೆ ಹಕ್ಕಿದೆ.

## ಇತರ ಕಾನೂನು ಅಧಿಕಾರಿಗಳು

ಅಟಾರ್ನಿ ಜನರಲ್ ಅವರಲ್ಲದೆ ಇತರ ಕಾನೂನು ಅಧಿಕಾರಿಗಳೆಂದರೆ ಭಾರತದ ಸಾಲಿಸಿಟರ್ ಜನರಲ್ (ಮಹಾ ಸಲಹಾ ವಕೀಲರು) ಮತ್ತು ಭಾರತದ ಹೆಚ್ಚುವರಿ ಸಾಲಿಸಿಟರ್ಸ್ ಜನರಲ್ (ಹೆಚ್ಚುವರಿ ಮಹಾ ಸಲಹಾ ವಕೀಲರುಗಳು).

ಈ ಅಧಿಕಾರಿಗಳ ಕರ್ತವ್ಯಗಳೆಂದರೆ:

i. ಭಾರತ ಸರ್ಕಾರ ಆಗಿಂದಾಗ್ಗೆ ತಮ್ಮ ಗಮನಕ್ಕೆ ತಂದ ಅಥವಾ ತಮಗೆ ವಹಿಸಿದ ಕಾನೂನಿನ ವಿಷಯಗಳ ಮೇಲೆ ಸಲಹೆ ನೀಡುವುದು ಮತ್ತು ಕಾನೂನು ಸ್ವಭಾವದ ಇತರ ಕರ್ತವ್ಯಗಳನ್ನು ನೆರವೇರಿಸುವುದು.

ii. ಭಾರತ ಸರ್ಕಾರ ಪಕ್ಷಗಾರನಾಗಿರುವ ಅಥವಾ ಅದಕ್ಕೆ ಆಸಕ್ತಿ ಇರುವ ದಾವೆಗಳು, ರಿಟ್ ಅರ್ಜಿಗಳು, ಮೇಲ್ಮನವಿಗಳು, ಇತರ ನಡವಳಿಕೆಗಳು ಇತ್ಯಾದಿ ಪ್ರಕರಣಗಳಲ್ಲಿ ಭಾರತ ಸರ್ಕಾರದ ಪರವಾಗಿ ಸರ್ವೋಚ್ಚ ನ್ಯಾಯಾಲಯದಲ್ಲಿ ಅಥವಾ ಯಾವುದೇ ಉಚ್ಚ ನ್ಯಾಯಾಲಯದಲ್ಲಿ ಅವಶ್ಯಕತೆ ಬಿದ್ದಾಗ ಹಾಜರಾಗುವುದು.

iii. ರಾಷ್ಟ್ರಪತಿಯವರು ಅನುಚ್ಛೇದ 143ರ ಕೆಳಗೆ ಸರ್ವೋಚ್ಚ ನ್ಯಾಯಾಲಯಕ್ಕೆ ಮಾಡಿದ ಯಾವುದೇ ಪರಾಮರ್ಶೆಯಲ್ಲಿ ಭಾರತ ಸರ್ಕಾರವನ್ನು ಪ್ರತಿನಿಧಿಸುವುದು ಮತ್ತು

iv. ಸಂವಿಧಾನದ ಕೆಳಗಾಗಲೀ, ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಡಿಯಲ್ಲಾಗಲೀ ತಮ್ಮ ಮೇಲೆ ಜವಾಬ್ದಾರಿವಹಿಸಿದ ಕೆಲಸಗಳನ್ನು ನಿರ್ವಹಿಸುವುದು.

ಯಾವುದೇ ತೆರನಾದ ಜಟಿಲತೆಯನ್ನು ಮತ್ತು ಕರ್ತವ್ಯದಲ್ಲಿ ಸಂಘರ್ಷವನ್ನು ತಪ್ಪಿಸುವ ಸಲುವಾಗಿ, ಕಾನೂನು ಅಧಿಕಾರಿಗೆ ಈ ಕೆಳಗಿನ ನಿಷೇಧಗಳಿವೆ:

i. ಭಾರತ ಸರ್ಕಾರದ ವಿರುದ್ಧ ಸಲಹೆ ಕೊಡುವುದಾಗಲೀ ಅಥವಾ ವಕೀಲಿ ವಹಿಸುವುದಾಗಲೀ ಮಾಡಕೂಡದು.

ii ಭಾರತ ಸರ್ಕಾರದ ಪರವಾಗಿ ಸಲಹೆ ಕೊಡಬೇಕಾದ ಅಥವಾ

ಹಾಜರಾಗಬೇಕಾದ ಸಂಭವ ಇರುವ ಪ್ರಕರಣಗಳಲ್ಲಿ ಇತರರ ಪರವಾಗಿ ಸಲಹೆ ಕೊಡುವುದಾಗಲೀ ಅಥವಾ ವಕೀಲಿ ವಹಿಸುವುದಾಗಲೀ ಮಾಡಕೂಡದು.

iii. ಭಾರತ ಸರ್ಕಾರದ ಅನುಮತಿ ಇಲ್ಲದೆ ಅಪರಾಧಿಕ ಪ್ರಕರಣಗಳಲ್ಲಿ ಆಪಾದಿತನ ಪರ ವಾದಿಸಬಾರದು.

iv. ಭಾರತ ಸರ್ಕಾರದ ಅನುಮತಿ ಇಲ್ಲದೆ, ಯಾವುದೇ ಕಂಪನಿ ಅಥವಾ ನಿಗಮದಲ್ಲಿ ನಿರ್ದೇಶಕನಾಗಿ ನೇಮಕವನ್ನು ಒಪ್ಪಿಕೊಳ್ಳಬಾರದು.

v. ಸರ್ವೋಚ್ಚ ನ್ಯಾಯಾಲಯದಲ್ಲಿ, ನಿಗಮವೊಂದರ ವ್ಯಾಜ್ಯ ವಿಷಯದ ನಿರೂಪಕಕ್ಕೂ, ಭಾರತ ಸರ್ಕಾರದ ವ್ಯಾಜ್ಯ ವಿಷಯದ ನಿರೂಪಕಕ್ಕೂ ಸಂಘರ್ಷವಾಗುವಂತಿದ್ದರೆ ಕಾನೂನು ಅಧಿಕಾರಿಯು ಸರ್ಕಾರದ ನಿರೂಪಕ್ಕೆ ಆದ್ಯತೆ ಕೊಡಬೇಕು.

ಈ ಕಾನೂನು ಅಧಿಕಾರಿಗಳ ಕೇಂದ್ರ ಕಾರ್ಯಸ್ಥಾನ ನವದೆಹಲಿಯಲ್ಲಿದ್ದರೂ, ಆವಶ್ಯಕತೆ ಇರುವಾಗಲೆಲ್ಲಾ ಉಚ್ಚ ನ್ಯಾಯಾಲಯದಲ್ಲಿ ಅಥವಾ ಅಧೀನ ನ್ಯಾಯಾಲಯಗಳಲ್ಲಿ, ಭಾರತ ಸರ್ಕಾರದ, ರಾಜ್ಯ ಸರ್ಕಾರಗಳ ಅಥವಾ ಸಾರ್ವಜನಿಕ ನಿಗಮಗಳ ಹಿತಾಸಕ್ತಿಯನ್ನು ಪ್ರತಿನಿಧಿಸುತ್ತಾರೆ.

## ಕೇಂದ್ರೀಯ ಕಾನೂನು ನಿಯೋಗದ ವಿಭಾಗ

ಈ ದಿನಗಳಲ್ಲಿ, ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಮತ್ತು ಅವುಗಳ ನಿಯೋಗಗಳು ಅತ್ಯಂತ ದೊಡ್ಡ ಪಕ್ಷಗಾರರುಗಳಾಗಿದ್ದು, ಸರ್ವೋಚ್ಚ ನ್ಯಾಯಾಲಯವೂ ಸೇರಿದಂತೆ ವಿವಿಧ ನ್ಯಾಯಾಲಯಗಳು ಮತ್ತು ನ್ಯಾಯಾಧಿಕರಣಗಳಲ್ಲಿರುವ ಬಹುಪಾಲು ಮೊಕದ್ದಮೆಗಳಿಗೆ ನಿಮಿತ್ತರಾಗಿದ್ದಾರೆ. ವಿವಿಧ ರಾಜ್ಯ ಸರ್ಕಾರಗಳಿಗೆ ಸರ್ವೋಚ್ಚ ನ್ಯಾಯಾಲಯದಲ್ಲಿ ಅವುಗಳನ್ನು ಪ್ರತಿನಿಧಿಸುವ ಪ್ರತ್ಯೇಕ ಅಭಿಲೇಖ ನ್ಯಾಯವಾದಿಗಳಿದ್ದಾರೆ. ಇಂಥ ನ್ಯಾಯವಾದಿಗಳನ್ನು ಆಯಾ ರಾಜ್ಯದ ಸ್ಥಾಯೀ ನ್ಯಾಯವಾದಿಗಳೆಂದು ಕರೆಯುತ್ತಾರೆ. ಆಂಧ್ರಪ್ರದೇಶ, ಅಸ್ಸಾಂ, ಗುಜರಾತ್, ಹರ್ಯಾಣ, ಮಹಾರಾಷ್ಟ್ರ, ಕೇರಳ, ಪಂಜಾಬ್, ರಾಜಸ್ಥಾನ, ತಮಿಳುನಾಡು, ಜಮ್ಮು ಮತ್ತು ಕಾಶ್ಮೀರ ಮುಂತಾದ ರಾಜ್ಯಗಳಿಗೆ, ಸರ್ವೋಚ್ಚ ನ್ಯಾಯಾಲಯದಲ್ಲಿ ತಾವೇ ನೇಮಿಸಿಕೊಂಡ ಅಭಿಲೇಖ ನ್ಯಾಯವಾದಿಗಳಿದ್ದಾರೆ*ಕೇಂದ್ರ ಸರ್ಕಾರ, ರಾಜ್ಯ ಸರ್ಕಾರ ಮತ್ತು ಇತರ ಸರ್ಕಾರಿ ಸಂಸ್ಥೆಗಳಿಗೆ ಕಾನೂನು ಮಂತ್ರಾಲಯದ ಕೆಳಗೆ ಬರುವ ಇಲಾಖೆಯೊಂದಿದೆ. ಇದು ಸರ್ವೋಚ್ಚ ನ್ಯಾಯಾಲಯದಲ್ಲಿನ ಕೇಂದ್ರೀಯ ನಿಯೋಗವೆಂದು ಜನಪ್ರಿಯವಾಗಿ ಗುರುತಿಸಲ್ಪಟ್ಟಿದೆ; ಇದರಲ್ಲಿ ಅನೇಕ ಅನುಭವಿ ವಕೀಲರುಗಳಿದ್ದಾರೆ. ಅವರುಗಳು, ಕೇಂದ್ರ ಸರ್ಕಾರದ, ಅದರ ನಿಯೋಗಗಳ ಮತ್ತು

---

*ಭಾಷಾಂತರಕಾರನ ಟಿಪ್ಪಣಿ: ಕರ್ನಾಟಕ ರಾಜ್ಯಕ್ಕೂ ಸರ್ವೋಚ್ಚ ನ್ಯಾಯಾಲಯದಲ್ಲಿ ರಾಜ್ಯ ಸರ್ಕಾರದಿಂದ ನೇಮಕ ಹೊಂದಿದ ಅಭಿಲೇಖ ನ್ಯಾಯವಾದಿಗಳಿದ್ದಾರೆ.

ರಾಜ್ಯ ಸರ್ಕಾರಗಳ ಪರ ನಡವಳಿಕೆಗಳನ್ನು ಪ್ರಾರಂಭಿಸುವುದರಲ್ಲಿ, ವಿರುದ್ಧನಡವಳಿಕೆಗಳನ್ನು ಎದುರಿಸುವುದರಲ್ಲಿ ಸಂಪೂರ್ಣ ನಿರತರಾಗಿಯೂ ಸಹಭಾಗಿಗಳಾಗಿಯೂ ಇದ್ದಾರೆ.

# 2

# ನ್ಯಾಯಾಧಿಕರಣಗಳು ಮತ್ತು ಆಯೋಗಗಳು

## ನ್ಯಾಯಿಕ ಮತ್ತು ನ್ಯಾಯಿಕ ಸ್ವಭಾವದ ನ್ಯಾಯ ವೇದಿಕೆಗಳು (ನ್ಯಾಯಾಲಯಗಳ ಹೊರತಾಗಿ)

ಅಧಿಕಾರಗಳ ಬೇರ್ಪಡಿಸುವಿಕೆಯ ಸಿದ್ಧಾಂತವನ್ನು ನಮ್ಮ ಸಂವಿಧಾನದಲ್ಲಿ ಆಳವಾಗಿ ಪ್ರತಿಷ್ಠೆ ಮಾಡಲಾಗಿದೆ. ಹೇಗಾದರೂ, ಐದು ದಶಕಗಳ ಹಿಂದೆ ಸಂವಿಧಾನವನ್ನು ರೂಪಿಸಿದಾಗ, ರಾಜ್ಯದ ಚಟುವಟಿಕೆಗಳು ಈಗಿನ ಸ್ಥಿತಿಗೆ ಹೋಲಿಕೆ ಮಾಡಿದರೆ ವಿರಳವಾಗಿಯೂ ಸೀಮಿತವಾಗಿಯೂ ಇದ್ದವು; ಆಗಿನಿಂದ, ರಾಜ್ಯದ ಚಟುವಟಿಕೆಗಳು ಗಣನೀಯವಾಗಿ ಹೆಚ್ಚಾಗಿದ್ದು ಕೇಂದ್ರ ಮತ್ತು ರಾಜ್ಯ ಸರಕಾರಗಳೂ ಸಹ, ವಾಣಿಜ್ಯ ಮತ್ತು ಇತರ ಕ್ಷೇತ್ರಗಳನ್ನು ಪ್ರವೇಶಿಸಿವೆ. ಸೇವಾನಿಯಮಗಳು, ವರ್ಗಗಳು, ಬಡ್ತಿಗಳು, ನೇಮಕಗಳು, ಇತ್ಯಾದಿಗಳನ್ನು ಕುರಿತಾದ ಸರ್ಕಾರಿ ನೌಕರರ ನಡುವಣ ವ್ಯಾಜ್ಯಗಳೂ ಹೆಚ್ಚಾಗಿವೆ.

ಸಂವಿಧಾನ ಶಿಲ್ಪಿಗಳಿಗೆ ಇದೆಲ್ಲವನ್ನೂ ಮುಂಗಾಣುವುದು ಸಾಧ್ಯವಿರಲಿಲ್ಲ. ಹೀಗಾಗಿ ದೇಶದ ಪೌರರಿಗೆ ನ್ಯಾಯ ದೊರಕಿಸಿಕೊಡಲು ಕೆಲವು ಗೊತ್ತಾದ ನ್ಯಾಯವೇದಿಕೆಗಳಿಗೆ ಮಾತ್ರ ತಮ್ಮನ್ನು ತಾವು ಸೀಮಿತಗೊಳಿಸಿಕೊಂಡರು. ಆಗ ಅಸ್ತಿತ್ವದಲ್ಲಿದ್ದ ನ್ಯಾಯಾಲಯಗಳು ಪ್ರಜೆಗಳ ನ್ಯಾಯಿಕ ಆಕಾಂಕ್ಷೆಗಳನ್ನು ಪೂರೈಸಲು ಮತ್ತು ಎಲ್ಲಾ ಬಗೆಯ ವ್ಯಾಜ್ಯಗಳನ್ನು ನಿಭಾಯಿಸಲು ಸಾಕಾಗುವಷ್ಟಿದೆ ಎಂದು ಅವರು ಆ ಕಾಲದಲ್ಲಿ ಬಹುಶಃ ಭಾವಿಸಿದ್ದಿರಬಹುದು. ಸಾಂಪ್ರದಾಯಿಕತೆಯ ಮತ್ತು ನಡವಳಿಕೆಗಳ ಚೌಕಟ್ಟಿನೊಳಗಿನ ಸಾಧಾರಣ ನ್ಯಾಯಾಲಯಗಳು, ಬದಲಾವಣೆಯಾದ ಸಂದರ್ಭವನ್ನು ಎದುರಿಸಲಾಗಲೀ ಮತ್ತು ಹೊಸ ಸಾಮಾಜಿಕ/ಆರ್ಥಿಕ ಸನ್ನಿವೇಶದಲ್ಲಿ ಉದ್ಭವಿಸಿದ ಸಮಸ್ಯೆಗಳನ್ನು ಪರಿಹರಿಸಲಾಗಲೀ ಅಸಮರ್ಥವೆಂದು ತದನಂತರದಲ್ಲಿ ಗ್ರಹಿಸಲಾಯಿತು. ಈ ನ್ಯಾಯಾಧಿಕರಣಗಳನ್ನು ಸಾಂಪ್ರದಾಯಿಕ ಪ್ರಜ್ಞೆಯಲ್ಲಿ ಕಟ್ಟುನಿಟ್ಟಾದ ನ್ಯಾಯಾಲಯಗಳೆಂದು ಹೇಳಲಾಗುವುದಿಲ್ಲ. ಆದಾಗ್ಯೂ ಅವು ಅನೇಕ ವ್ಯಾಜ್ಯಗಳನ್ನು ಸ್ವೀಕರಿಸಿ ಸರಿಯಾದ ಕಾನೂನಿನ ಪ್ರಕ್ರಿಯೆಯನ್ನು ಅನುಸರಿಸಿ, ತೀರ್ಮಾನಿಸುತ್ತವೆ. ಇಂಥ ನ್ಯಾಯಾಧಿಕರಣಗಳನ್ನು ಸ್ಥಾಪಿಸಲು ಇರುವ ಕಾರಣಗಳಲ್ಲಿ ಕೆಲವು ಈ ಮುಂದಿನಂತೆ ಇವೆ:

## ನ್ಯಾಯಾಲಯಗಳಲ್ಲದ ನ್ಯಾಯಾಧಿಕರಣಗಳು

i. ನ್ಯಾಯನಿರ್ಣಯ ಆಗಬೇಕಾದ ಎಲ್ಲ ವ್ಯಾಜ್ಯಗಳನ್ನೂ ತೀರ್ಮಾನಿಸಿ ಬಗೆಹರಿಸಲು ಸಾಂಪ್ರದಾಯಿಕ ನ್ಯಾಯಿಕ ವ್ಯವಸ್ಥೆ ಅಸಮರ್ಪಕವಾಗಿದೆ. ಅದು, ಮಂದಗತಿಯಾದುದು, ದುಬಾರಿಯಾದುದು, ಪರಿಣಿತವಲ್ಲದುದು, ಸಂಕೀರ್ಣವಾದುದು ಮತ್ತು ನಿಯಮಗಳಿಗೆ ಪ್ರಾಮುಖ್ಯತೆ ಕೊಡುವಂಥದು ಎಂದುಕೊಳ್ಳಲಾಗಿದೆ. ಸಾಲದು ಎಂಬಂತೆ ಅದರ ಮೇಲೆ ವಿಪರೀತ ಹೊರೆ ಬಿದ್ದಿದೆ. ಯಜಮಾನ ಮತ್ತು ನೌಕರರ ನಡುವಣ ವ್ಯಾಜ್ಯಗಳು, ಬೀಗಮುದ್ರೆಗಳು, ಮುಷ್ಕರಗಳು ಮುಂತಾದ ಅನೇಕ ತುರ್ತು ವಿಚಾರಗಳನ್ನು ಶೀಘ್ರವಾಗಿ ವಿಲೇಮಾಡಬೇಕಾಗಿದ್ದು ಅವುಗಳನ್ನು ಬೇರೆ ವೇದಿಕೆಗಳಲ್ಲಿ ತೀರ್ಮಾನಿಸಬಹುದಾಗಿದೆ.

ii. ಈ ರೀತಿ ಸ್ಥಾಪಿತವಾದ ನ್ಯಾಯಾಧಿಕರಣಗಳು, ತಾತ್ವಿಕವಾದ ಮತ್ತು ಕಾನೂನಿನ ಶಬ್ದಗಳಿಗೆ ಅತಿ ಪ್ರಾಮುಖ್ಯತೆ ಕೊಡುವ ಮಾರ್ಗವನ್ನು ಬಿಟ್ಟು ಪ್ರಾಯೋಗಿಕವಾದ ದಾರಿಯಲ್ಲಿ ಸಾಗಬಲ್ಲುವು. ಅವು ಪ್ರಾಯೋಗಿಕ ದೃಷ್ಟಿಯನ್ನು ಇಟ್ಟುಕೊಂಡು, ವಿಶಿಷ್ಟವಾದ ಮತ್ತು ಸಂಕೀರ್ಣವಾದ ಸಮಸ್ಯೆಗಳನ್ನು ತಜ್ಞಪ್ರಜ್ಞೆಯಿಂದ ಪರಿಹರಿಸಬಹುದು.

iii. ವ್ಯಾಜ್ಯದ ಪ್ರಶ್ನೆಗಳಲ್ಲಿ ತಾಂತ್ರಿಕವಾದ ಪ್ರಶ್ನೆಗಳೇ ಹೆಚ್ಚು. ಈ ಪ್ರಶ್ನೆಗಳನ್ನು ಎದುರಿಸುವುದು, ಸಾಂಪ್ರದಾಯಿಕ ನ್ಯಾಯಾಂಗ ವ್ಯವಸ್ಥೆಯಲ್ಲಿ, ಕಷ್ಟಕರವಾದುದೂ ಮತ್ತು ಹೆಚ್ಚು ಭಾರವಾದುದೂ ಆಗಿದೆ; ಅಲ್ಲದೆ ನ್ಯಾಯಾಂಗವು ಈ ಪ್ರಶ್ನೆಗಳಿಗೆ ಸಂಬಂಧಿಸಿದ ಹಾಗೆ ವಿಷಯಗಳನ್ನು ಸಂಗ್ರಹಿಸಲು ಮತ್ತು ಶೀಘ್ರ ನಿರ್ಧಾರವನ್ನು ತೆಗೆದುಕೊಳ್ಳಲು ಸಂಪೂರ್ಣವಾಗಿ ಸಜ್ಜಾಗಿಲ್ಲ. ನ್ಯಾಯಾಧಿಕರಣಗಳಾದರೋ, ತಜ್ಞರುಗಳನ್ನು ಒಳಗೊಂಡಿದ್ದು, ಅವರು ಇಂಥ ಸಮಸ್ಯೆಗಳನ್ನು ಎದುರಿಸಿ ಪರಿಹರಿಸಬಲ್ಲವರಾಗಿದ್ದಾರೆ. ಉದಾ: ಕೌಟುಂಬಿಕ ಕಲಹಗಳು, ಅನಿಲ, ವಿದ್ಯುತ್, ರೈಲ್ವೆದರಗಳು, ಏಕಸ್ವಾಮ್ಯವಾದ ಆಚಾರಗಳು, ಗ್ರಾಹಕರ ವ್ಯಾಜ್ಯಗಳು, ಇತ್ಯಾದಿಗಳಿಗೆ ಸಂಬಂಧಿಸಿದ ಸಮಸ್ಯೆಗಳು.

iv. ಇಂಥ ನ್ಯಾಯಾಧಿಕರಣಗಳಿಗೆ ಹೆಚ್ಚಿನ ತಾಂತ್ರಿಕ ಜ್ಞಾನವಿರುವುದರಿಂದ ತಮ್ಮ ಕೆಲಸವನ್ನು ಸಾಧಾರಣ ನ್ಯಾಯಾಲಯಗಳು ಮಾಡುವುದಕ್ಕಿಂತ ಹೆಚ್ಚು ಶೀಘ್ರವಾಗಿಯೂ, ಅಗ್ಗವಾಗಿಯೂ ಮತ್ತು ಪರಿಣಾಮಕಾರಿಯಾಗಿಯೂ ಮಾಡುತ್ತವೆ. ಸಾಮಾಜಿಕ ಹಿತಾಸಕ್ತಿಗಳಿಗ ಹೆಚ್ಚಿಗೆ ಗಮನ ಕೊಡುವಂತೆ ಅವುಗಳನ್ನು ವಿನ್ಯಾಸಗೊಳಿಸಲಾಗಿದೆ. ಇದರ ಉದ್ದೇಶ, ವಾಜ್ಯಗಳನ್ನು ತೀರ್ಮಾನಮಾಡುವುದರ ಜೊತೆಗೆ ಶಾಸನದಲ್ಲಿ ಮೂರ್ತ ರೂಪಗೊಳಿಸಿದ ಧರ್ಮಸಮ್ಮತವಾದ ಇತ್ಯರ್ಥ ಹಾಗೂ ಸಾಮಾಜಿಕ ನ್ಯಾಯವನ್ನು ದೊರಕಿಸಿಕೊಡುವ ಕಾರ್ಯನೀತಿಗೆ ಪ್ರಜ್ಞಾಪೂರ್ವಕವಾಗಿ ಶ್ರಮವಹಿಸಿ, ಒತ್ತುಕೊಡುವುದೇ ಆಗಿದೆ.

## ನ್ಯಾಯಾಧಿಕರಣಗಳು

ನ್ಯಾಯಾಧಿಕರಣಗಳು ಸಾಂಪ್ರದಾಯಿಕ ನ್ಯಾಯಾಲಯಗಳನ್ನು ಅನೇಕ ಮುಖದಲ್ಲಿ ಹೋಲುತ್ತವೆ. ಎರಡೂ ಶಾಸನಸಭೆಗಳಿಂದ ಅಸ್ತಿತ್ವಕ್ಕೆ ಬಂದಿದ್ದು ಎರಡಕ್ಕೂ ನಿರ್ದಿಷ್ಟವಾದ ನ್ಯಾಯಿಕ ಅಧಿಕಾರಗಳನ್ನು ನಿಹಿತಗೊಳಿಸಲಾಗಿದೆ. ಎರಡಕ್ಕೂ ಶಾಶ್ವತವಾದ ಅಸ್ತಿತ್ವವಿದ್ದು ನ್ಯಾಯ ತೀರ್ಮಾನಮಾಡುವ ನಿಕಾಯುಗಳಾಗಿವೆ. ತಮಗೆ ಒಪ್ಪಿಸಲಾದ ಪಕ್ಷಗಾರರ ನಡುವಣ ವ್ಯಾಜ್ಯಗಳನ್ನು ವಿಚಾರಣೆಗೆ ಸ್ವೀಕರಿಸಿ ಅಂತಿಮ ತೀರ್ಮಾನವನ್ನು ಕೊಡುತ್ತವೆ. ಅವಕಾಶವಿದ್ದಲ್ಲಿ ಈ ತೀರ್ಮಾನಗಳು ಮೇಲ್ಮನವಿಗಳಿಗೆ ಒಳಪಟ್ಟಿವೆ. (ಸರ್ವೋಚ್ಚ ನ್ಯಾಯಾಲಯವು ಅಸೋಸಿಯೇಟೆಡ್ ಸಿಮೆಂಟ್ ಕಂಪನೀಸ್ ಲಿ... ವಿರುದ್ಧ.. ಪಿ.ಎನ್. ಶರ್ಮ ಮತ್ತು ಇನ್ನೊಬ್ಬರು, ಎ.ಐ.ಆರ್. 1965 ಎಸ್.ಸಿ. 1595ರಲ್ಲಿ ಪರಿವೀಕ್ಷಣೆ ಮಾಡಿದಂತೆ) ನ್ಯಾಯಾಲಯಗಳಿಗೂ ಮತ್ತು ನ್ಯಾಯಾಧಿಕರಣಗಳಿಗೂ ಒಂದೇ ಆಗಿರುವ ಮೂಲಭೂತವಾದ ಸ್ವರೂಪವೆಂದರೆ, ಎರಡೂ ನ್ಯಾಯಿಕ ಕರ್ತವ್ಯಗಳನ್ನು ನಿರ್ವಹಿಸುತ್ತವೆ ಅಲ್ಲದೆ ಸರ್ವ ಸ್ವತಂತ್ರವಾದ ರಾಜ್ಯದಲ್ಲಿ ನಿಹಿತಗೊಂಡಂತ ನ್ಯಾಯಿಕ ಅಧಿಕಾರಗಳನ್ನು ಚಲಾಯಿಸುತ್ತವೆ.

ಆದರೆ ಅದೇ ಕಾಲಕ್ಕೆ ನ್ಯಾಯಾಧಿಕರಣಗಳನ್ನು ಕರಾರುವಕ್ಕಾಗಿ ನ್ಯಾಯಾಲಯಗಳೆಂದು ಹೇಳಲಾಗುವುದಿಲ್ಲ; ನ್ಯಾಯಾಲಯದ ಲಕ್ಷಣಗಳಲ್ಲಿ ಎಲ್ಲವನ್ನು ಅಲ್ಲದಿದ್ದರೂ, ಕೆಲವನ್ನು ಅದು ಹೊಂದಿದೆ. ಅವುಗಳ ನಡುವಣ ವ್ಯತ್ಯಾಸವನ್ನು ಈ ಕೆಳಗೆ ಕಂಡಂತೆ ಸಂಕ್ಷೇಪಿಸಿ ಹೇಳಬಹುದು:

i. ನ್ಯಾಯಾಲಯವು ಸಾಂಪ್ರದಾಯಿಕ ನ್ಯಾಯಿಕ ವ್ಯವಸ್ಥೆಯ ಒಂದು ಅಂಗ. ಯಾವ ನಿಕಾಯಕ್ಕೆ ನ್ಯಾಯಿಕ ಅಧಿಕಾರಗಳು ರಾಜ್ಯದಿಂದ ಹರಿದು ಬಂದಿದೆಯೋ, ಮತ್ತು ಯಾವ ನಿಕಾಯವು ನ್ಯಾಯ ವಿತರಣೆಯಲ್ಲಿ ನಿರತವಾಗಿದೆಯೋ ಅದನ್ನು ನ್ಯಾಯಾಲಯವೆಂದು ಕರೆಯುತ್ತಾರೆ. ಇದಕ್ಕೆ ವಿರುದ್ಧವಾಗಿ ನ್ಯಾಯಾಧಿಕರಣವಾದರೋ ಶಾಸನವೊಂದು ಸೃಷ್ಟಿಸಿದ ನಿಯೋಗವಾಗಿದ್ದು, ಕೆಲವು ನಿರ್ದಿಷ್ಟ ವಿಷಯಗಳಲ್ಲಿ ಮಾತ್ರ ನ್ಯಾಯಿಕ ಅಧಿಕಾರವನ್ನು ನಿಹಿತಗೊಳಿಸಿಕೊಂಡಿದೆ.

ii. ಸಾಧಾರಣ ನ್ಯಾಯಾಲಯದ ನ್ಯಾಯಾಧೀಶರುಗಳು, ತಮ್ಮ ಸೇವಾ ಅವಧಿ, ಸೇವಾ ನಿಬಂಧನೆಗಳು ಮತ್ತು ಷರತ್ತುಗಳು ಇತ್ಯಾದಿ ವಿಷಯಗಳಲ್ಲಿ ಕಾರ್ಯಾಂಗದಿಂದ ಸ್ವತಂತ್ರರಿದ್ದಾರೆ. ಇದಕ್ಕೆ ವಿರುದ್ಧವಾಗಿ ನ್ಯಾಯಾಧಿಕರಣಗಳು ಬಹುಮಟ್ಟಿಗೆ ಸರ್ಕಾರದ ಕೈಗಳಲ್ಲಿವೆ.

iii. ಸಾಮಾನ್ಯವಾಗಿ, ನ್ಯಾಯಾಲಯದಲ್ಲಿ ಪೀಠಾಸೀನರಾಗುವ ಅಧಿಕಾರಿಗಳು ಕಾನೂನಿನಲ್ಲಿ ತರಬೇತಿಯನ್ನು ಪಡೆದಿರುತ್ತಾರೆ. ಆದರೆ ನ್ಯಾಯಾಧಿಕರಣದ ಅಧ್ಯಕ್ಷ ಅಥವಾ ಸದಸ್ಯರು ಕಾನೂನಿನಲ್ಲಿ ತರಬೇತಿ ಪಡೆದಿರಬೇಕೆಂದೇನೂ ಇಲ್ಲ.

iv. ನ್ಯಾಯಾಲಯದಲ್ಲಿ ನ್ಯಾಯಾಧೀಶರು ನಿಷ್ಪಕ್ಷಪಾತಿಯಾದ ನಿರ್ಣಯಕಾರ

ನಾಗಿರಬೇಕು. ತನಗೆ ಆಸಕ್ತಿ ಇರುವ ವಿಷಯವನ್ನು ಅವನು ತೀರ್ಮಾನಿಸುವ ಹಾಗಿಲ್ಲ. ಇದಕ್ಕೆ ವಿರುದ್ಧವಾಗಿ, ನ್ಯಾಯಾಧಿಕರಣವು ತಾನು ತೀರ್ಮಾನ ಮಾಡಬೇಕಾದ ಪ್ರಕರಣದಲ್ಲಿ ತಾನೇ ಪಕ್ಷಗಾರನಾಗಿರಬಹುದು.
ಉದಾ: ರೈಲ್ವೆದರಗಳ ನ್ಯಾಯಾಧಿಕರಣ, ಏಕಸ್ವಾಮ್ಯಗಳ ಆಯೋಗ, ಇತ್ಯಾದಿ.

v. ನ್ಯಾಯಾಲಯವು ಸಾಕ್ಷ್ಯ ಹಾಗೂ ಪ್ರಕ್ರಿಯೆಗಳ ಎಲ್ಲ ನಿಯಮಗಳಿಗೂ ಬದ್ಧವಾಗಿದೆ. ಆದರೆ, ಶಾಸನವು ನಿರ್ಬಂಧವನ್ನು ಹೇರಿದ ಸಂದರ್ಭವನ್ನು ಬಿಟ್ಟು ಮಿಕ್ಕಂತೆ ಆ ನಿಯಮಗಳಿಗೆ ನ್ಯಾಯಾಧಿಕರಣವು ಕಟ್ಟುನಿಟ್ಟಾಗಿ ಬದ್ಧವಾಗಿಲ್ಲ.

vi. ನ್ಯಾಯಾಲಯವು ತನ್ನ ಮುಂದಿರುವ ಸಾಕ್ಷ್ಯ ಹಾಗೂ ದಸ್ತಾವೇಜುಗಳ ಆಧಾರದ ಮೇಲೆ ಎಲ್ಲ ಪ್ರಶ್ನೆಗಳನ್ನೂ ವಸ್ತುನಿಷ್ಠರಾಗಿ ತೀರ್ಮಾನಿಸಬೇಕು. ಆದರೆ ನ್ಯಾಯಾಧಿಕರಣವು, ಇಲಾಖೆಯ ಕಾರ್ಯನೀತಿ ಅಥವಾ ಅನುಕೂಲಸಿಂಧುವನ್ನೂ ಸಹ ಗಮನಕ್ಕೆ ತೆಗೆದುಕೊಳ್ಳಬಹುದು.

vii. ನ್ಯಾಯಾಲಯವು ಶಾಸನವೊಂದು 'ಅತೀತ'* ವಾಗಿದೆಯೇ ಎಂಬುದನ್ನು ತೀರ್ಮಾನಿಸಬಹುದು. ಆದರೆ ನ್ಯಾಯಾಧಿಕರಣ ಹಾಗೆ ಮಾಡಲಾಗುವುದಿಲ್ಲ.

---

*ಭಾಷಾಂತರಕಾರನ ಟಿಪ್ಪಣಿ: ಉಚ್ಚನ್ಯಾಯಾಲಯ ಮತ್ತು ಸರ್ವೋಚ್ಚ ನ್ಯಾಯಾಲಯಗಳು ಮಾತ್ರ ಯಾವುದೇ ಶಾಸನದ ಸಂವಿಧಾನ ಬದ್ಧತೆಯನ್ನು ಪರೀಕ್ಷಿಸಿ, ಆ ಶಾಸನ ಸಂವಿಧಾನಕ್ಕೆ 'ಅತೀತವೇ' ಎಂದು ನಿರ್ಣಯಿಸಬಹುದು. ಆದರೆ ಯಾವ ಅಧೀನ ನ್ಯಾಯಾಲಯಗಳಿಗೂ ಈ ಅಧಿಕಾರವಿಲ್ಲ.

# ಕೇಂದ್ರ ಮತ್ತು ರಾಜ್ಯ ಆಡಳಿತಾತ್ಮಕ ನ್ಯಾಯಾಧಿಕರಣಗಳು ಮತ್ತು ಇತರ ನ್ಯಾಯಾಧಿಕರಣಗಳು

ಸಂವಿಧಾನದ 42ನೇ ತಿದ್ದುಪಡಿ ಅಧಿನಿಯಮ 1976, ಸಂವಿಧಾನಕ್ಕೆ ಅನುಚ್ಛೇದ 323ಏ ಅನ್ನು ಸೇರ್ಪಡೆಮಾಡಿದೆ. ಇದರಿಂದಾಗಿ, ಒಕ್ಕೂಟದ ಮತ್ತು ರಾಜ್ಯಗಳ ಸಾರ್ವಜನಿಕ ಸೇವೆಗಳಿಗೆ ಮತ್ತು ಹುದ್ದೆಗಳಿಗೆ ನೇಮಕಹೊಂದಿದವರ ನೇಮಕಾತಿ ಮತ್ತು ಸೇವಾ ನಿಯಮಗಳಿಗೆ ಸಂಬಂಧಿಸಿದ ವ್ಯಾಜ್ಯಗಳ ಇತ್ಯರ್ಥವನ್ನು ಸಿವಿಲ್ ನ್ಯಾಯಾಲಯಗಳ ಮತ್ತು ಉಚ್ಚ ನ್ಯಾಯಾಲಯಗಳ ಕೈ ತಪ್ಪಿಸಿ, ಒಕ್ಕೂಟದ ಮತ್ತು ರಾಜ್ಯಗಳ ಆಡಳಿತಾತ್ಮಕ ನ್ಯಾಯಾಧಿಕರಣಗಳಿಗೆ ಹಸ್ತಾಂತರಗೊಳಿಸಲಾಗಿದೆ. ಈ ಉದ್ದೇಶ ಸಾಧನೆಗಾಗಿ, ಅನುಚ್ಛೇದ 323-ಏ ನಲ್ಲಿರುವ ಅವಕಾಶದ ಪ್ರಕಾರ, ನಿರ್ದಿಷ್ಟವಾದ ಕೆಲವು ಪಟ್ಟಣಗಳಲ್ಲಿ ಶಾಖೆಗಳನ್ನು ಒಳಗೊಂಡಂತೆ ಕೇಂದ್ರ ಆಡಳಿತಾತ್ಮಕ ನ್ಯಾಯಾಧಿಕರಣವನ್ನು (ಸಿ.ಎ.ಟಿ) ಸ್ಥಾಪಿಸಲು ಆಡಳಿತಾತ್ಮಕ ನ್ಯಾಯಾಧಿಕರಣ ಅಧಿನಿಯಮ 1985ನ್ನು ಪಾರ್ಲಿಮೆಂಟು ಶಾಸನಗೊಳಿಸಿದೆ. ಒಕ್ಕೂಟದ ವ್ಯವಹಾರಗಳಿಗೆ ಸಂಬಂಧಿಸಿದಂತೆ ಸಾರ್ವಜನಿಕ ಸೇವೆಗಳಿಗೆ ಮತ್ತು ಹುದ್ದೆಗಳಿಗೆ ನೇಮಕಾತಿ ಹೊಂದಿದವರ ಅಥವಾ ಯಾವುದೇ ರಾಜ್ಯದಲ್ಲಿನ ಒಕ್ಕೂಟದ ನೌಕರನ, ಅಥವಾ ಭಾರತದ ಪ್ರದೇಶದಲ್ಲಿದ್ದು ಭಾರತ ಸರ್ಕಾರದ ನಿಯಂತ್ರಣದಲ್ಲಿರುವ ಯಾವುದೇ ಸ್ಥಳೀಯ ಅಥವಾ ಇತರ ಪ್ರಾಧಿಕಾರದ ನೌಕರನ, ಅಥವಾ ಸರ್ಕಾರದ ಸ್ವಾಮ್ಯ ಇಲ್ಲವೇ ನಿಯಂತ್ರಣಕ್ಕೆ ಒಳಪಟ್ಟ ಯಾವುದೇ ನಿಗಮ ಅಥವಾ ಸಂಘದ ನೌಕರನ, ನೇಮಕಾತಿ ಮತ್ತು ಸೇವಾ ನಿಯಮಗಳಿಗೆ ಸಂಬಂಧಿಸಿದ ಅಥವಾ ಅದಕ್ಕೆ ಪ್ರಾಸಂಗಿಕವಾದ ವ್ಯಾಜ್ಯಗಳನ್ನು ಮತ್ತು ದೂರುಗಳನ್ನು ಇತ್ಯರ್ಥಮಾಡಲು ಅಥವಾ ವಿಚಾರಣೆ ಮಾಡಲು ಆಡಳಿತಾತ್ಮಕ ನ್ಯಾಯಾಧಿಕರಣಗಳಿಗೆ ಮೇಲ್ಕಂಡ ಅಧಿನಿಯಮ ಅವಕಾಶ ಮಾಡಿಕೊಟ್ಟಿದೆ.

ಆಡಳಿತಾತ್ಮಕ ನ್ಯಾಯಾಧಿಕರಣ ಅಧಿನಿಯಮವನ್ನು ಶಾಸನ ಮಾಡಿದ ಉದ್ದೇಶವೇನೆಂದರೆ:

i. ನ್ಯಾಯಾಲಯಗಳಲ್ಲಿನ ಒತ್ತಡವನ್ನು ಕಡಿಮೆ ಮಾಡುವುದು.

ii. ಸೇವಾ ವಿಷಯಗಳಿಗೆ ಸಂಬಂಧಿಸಿದ ವ್ಯಾಜ್ಯಗಳನ್ನು ನ್ಯಾಯಾಲಯಗಳಲ್ಲಿ ಆಗುವುದಕ್ಕಿಂತ ಹೆಚ್ಚು ಶೀಘ್ರವಾಗಿ ವಿಲೇಮಾಡುವುದು.

ಹೇಗಾದರೂ, ರಕ್ಷಣಾ ಪಡೆಗಳ ಸದಸ್ಯರು, ಸರ್ವೋಚ್ಚ ನ್ಯಾಯಾಲಯದ ಅಧಿಕಾರಿಗಳು ಮತ್ತು ನೌಕರರು, ಸಂಸತ್ತಿನ ಅಥವಾ ಯಾವುದೇ ರಾಜ್ಯದ ಶಾಸನ ಸಭೆಯ ಅಥವಾ ಒಕ್ಕೂಟ ಪ್ರದೇಶದ ಸಚಿವಾಲಯಗಳ ಸಿಬ್ಬಂದಿಯ ಸದಸ್ಯರು ಇವರುಗಳಿಗೆ ಸಂಬಂಧಿಸಿದ ವ್ಯಾಜ್ಯಗಳು ಈ ನ್ಯಾಯಾಧಿಕರಣಗಳ ಅಧಿಕಾರ ವ್ಯಾಪ್ತಿಯೊಳಗೆ ಬರುವುದಿಲ್ಲ.

ಈ ನ್ಯಾಯಾಧಿಕರಣದ ಅಧಿಕಾರವ್ಯಾಪ್ತಿಯೊಳಗೆ ಈಗ ಬರುವ ವಿಷಯಗಳಿಗೆ ಸಂಬಂಧಿಸಿದ ಹಾಗೆ ದಾವೆಯೊಂದನ್ನು ಸ್ವೀಕರಿಸಿರುವ ಅಧಿಕಾರ ವ್ಯಾಪ್ತಿಯನ್ನು

ವ್ಯವಹಾರ ನ್ಯಾಯಾಲಯದಿಂದಲೂ, ಅನುಚ್ಛೇದ 226 ಮತ್ತು 227ರ ಕೆಳಗೆ ರಿಟ್ ಅರ್ಜಿಯನ್ನು ಸ್ವೀಕರಿಸುವ ಅಧಿಕಾರ ವ್ಯಾಪ್ತಿಯನ್ನು ಉಚ್ಚ ನ್ಯಾಯಾಲಯದಿಂದಲೂ, ಮೇಲ್ಕಂಡ 1985ರ 'ಆಡಳಿತಾತ್ಮಕ ನ್ಯಾಯಾಧಿಕರಣಗಳ ಅಧಿನಿಯಮ' ತೆಗೆದುಹಾಕಿದೆ.

ಅನುಚ್ಛೇದ 226 ಮತ್ತು 227ರ ಕೆಳಗೆ ಉಚ್ಚ ನ್ಯಾಯಾಲಯ ಮಾಡಬಲ್ಲದಾಗಿದ್ದುದನ್ನು ಮಾಡಲು, ಆಡಳಿತಾತ್ಮಕ ನ್ಯಾಯಾಧಿಕರಣ ಸಕ್ಷಮತೆಯನ್ನು ಹೊಂದಿದೆ. ಅಲ್ಲದೆ ಪ್ರಸ್ತುತ ಕಾನೂನುಗಳ ಸಂವೈಧಾನಿಕತೆಯನ್ನೂ ಅದು ನಿರ್ಧರಿಸಬಹುದು. ಶಾಸನಬದ್ಧ ಸೇವಾ ನಿಯಮವೊಂದು ಅನುಚ್ಛೇದ 14ರ ಮತ್ತು 16ರ ಉಲ್ಲಂಘನೆ ಮಾಡುತ್ತದೆ ಎಂದು ನ್ಯಾಯಾಧಿಕರಣ ಘೋಷಿಸಬಹುದಾಗಿದೆ.

ನಿಗದಿಪಡಿಸಿದ ದಿನದಿಂದ, ಸರ್ವೋಚ್ಚ ನ್ಯಾಯಾಲಯವನ್ನು ಬಿಟ್ಟು ಮಿಕ್ಕೆಲ್ಲ ನ್ಯಾಯಾಲಯಗಳು ಆ ದಿನಕ್ಕೆ ಮುಂಚೆ ಚಲಾಯಿಸುತ್ತಿದ್ದ ಅಧಿಕಾರ, ಅವಕ್ಕೆ ಇದ್ದ ಅಧಿಕಾರ ವ್ಯಾಪ್ತಿ ಮತ್ತು ಸಾಮರ್ಥ್ಯವನ್ನು ರಾಜ್ಯ ಆಡಳಿತಾತ್ಮಕ ನ್ಯಾಯಾಧಿಕರಣದಲ್ಲಿ ನಿಹಿತಗೊಳಿಸಲಾಗಿದೆ.

ಈ ನ್ಯಾಯಾಧಿಕರಣವು ಚಲಾಯಿಸಬಹುದಾದ ಅಧಿಕಾರವ್ಯಾಪ್ತಿ ಕೆಳಗೆ ಕಾಣಿಸಿದ ವಿಷಯಗಳಿಗೆ ಸಂಬಂಧಪಟ್ಟಿದೆ:

i. ರಾಜ್ಯದ ಯಾವುದೇ ಸಾರ್ವಜನಿಕ ಸೇವೆಗೆ ಅಥವಾ ಹುದ್ದೆಗೆ ಮಾಡುವ ನೇಮಕಾತಿ ಮತ್ತು ಆ ನೇಮಕಾತಿಗೆ ಪ್ರಸ್ತುತವಾದ ವಿಷಯಗಳು.

ii. ರಾಜ್ಯದ ಎಲ್ಲ ಸೇವೆಗಳು ಮತ್ತು ನಾಗರಿಕ ಹುದ್ದೆಗಳು; ಮತ್ತು ರಾಜ್ಯದ ನೌಕರನ ಅಥವಾ ರಾಜ್ಯ ಸರ್ಕಾರದ ನಿಯಂತ್ರಣದಲ್ಲಿರುವ ಯಾವುದೇ ಸ್ಥಳೀಯ ಅಥವಾ ಇತರ ಪ್ರಾಧಿಕಾರದ ನೌಕರನ, ಅಥವಾ ರಾಜ್ಯ ಸರ್ಕಾರದ ಸ್ವಾಮ್ಯ ಇಲ್ಲವೇ ನಿಯಂತ್ರಣಕ್ಕೆ ಒಳಪಟ್ಟ ಯಾವುದೇ ನಿಗಮ ಅಥವಾ ಸಂಘದ ನೌಕರನ ನೇಮಕಾತಿ ಮತ್ತು ಸೇವಾ ನಿಯಮಗಳಿಗೆ ಸಂಬಂಧಿಸಿದ ಅದಕ್ಕೆ ಪ್ರಾಸಂಗಿಕವಾದ ವಾಜ್ಯಗಳು ಮತ್ತು ದೂರುಗಳು.

iii. ಮೇಲಿನ (ii)ನೇ ಪ್ರಕರಣದಲ್ಲಿ ನಮೂದಿಸಿರುವ ಯಾವುದೇ ಸೇವೆಗೆ ಅಥವಾ ಹುದ್ದೆಗೆ ನೇಮಕ ಮಾಡಲ್ಪಟ್ಟ ನೌಕರನನ್ನು ಯಾವುದೇ ಸ್ಥಳೀಯ ಅಥವಾ ಇತರ ಪ್ರಾಧಿಕಾರದ ಸೇವೆಗೆ ಅಥವಾ ರಾಜ್ಯ ಸರ್ಕಾರದ ಸ್ವಾಮ್ಯ ಅಥವಾ ನಿಯಂತ್ರಣದಲ್ಲಿರುವ ಯಾವುದೇ ನಿಗಮ ಅಥವಾ ಸಂಘದ ಸೇವೆಗೆ ಪ್ರತಿನಿಯೋಜಿಸಿದ್ದು ಅಂಥ ನೌಕರನ ಸೇವೆ ಕುರಿತ ರಾಜ್ಯದ ವ್ಯವಹಾರಗಳಿಗೆ ಸಂಬಂಧಿಸಿದ ಎಲ್ಲ ಸೇವಾ ವಿಷಯಗಳು.

ರಾಜ್ಯ ಆಡಳಿತಾತ್ಮಕ ನ್ಯಾಯಾಧಿಕರಣವು ರಾಜ್ಯದ ಸೇವಾ ವಿಷಯಗಳಿಗೆ ಸಂಬಂಧಿಸಿದ ವ್ಯಾಜ್ಯಗಳನ್ನು ಮಾತ್ರ ವಿಚಾರಣೆ ಮಾಡಬಹುದಾಗಿದ್ದು, ಕೇಂದ್ರ ಆಡಳಿತಾತ್ಮಕ ನ್ಯಾಯಾಧಿಕರಣ ಸ್ವೀಕರಿಸಬಲ್ಲ ಯಾವುದೇ ವಿಷಯಗಳನ್ನು ತಾನು ತೆಗೆದುಕೊಳ್ಳುವ ಹಾಗಿಲ್ಲ.

ಕೆಳಗೆ ಕಾಣಿಸಿದ ವಿಷಯಗಳನ್ನು ಕುರಿತಾದ ಯಾವುದೇ ಅರ್ಜಿಗಳನ್ನು ವಿಚಾರಣೆಗೆ ಸ್ವೀಕರಿಸಲು ಅಧಿಕಾರವಾಗಲೀ ಅಥವಾ ಅಧಿಕಾರವ್ಯಾಪ್ತಿಯಾಗಲೀ ಈ ನ್ಯಾಯಾಧಿಕರಣಗಳಿಗೆ ಇಲ್ಲ.

i. ಸಂವಿಧಾನದ ಅನುಚ್ಛೇದ 311(2)ರ, ಎರಡನೇ ಪರಂತುಕದ (ಸಿ) ಪ್ರಕರಣದ ಕೆಳಗೆ ರಾಷ್ಟ್ರಾಧ್ಯಕ್ಷರು ಅಥವಾ ರಾಜ್ಯದ ರಾಜ್ಯಪಾಲರು ಸಮಾಧಾನಪಟ್ಟುಕೊಂಡುದಕ್ಕೆ ಆಧಾರಗಳನ್ನು ಪ್ರಶ್ನಿಸುವ ಅರ್ಜಿ.

ii. ಆಡಳಿತಾತ್ಮಕ ನಿರ್ಧಾರವು ದುರುದ್ದೇಶದಿಂದ ಕೂಡಿದೆ, ನಿರಂಕುಶವಾಗಿದೆ, ಕೃತಕವಾಗಿ ಅಧಿಕಾರ ಚಲಾಯಿಸಿರುವಂತಹುದಾಗಿದೆ. ಅಧಿಕಾರ ವ್ಯಾಪ್ತಿ ಇಲ್ಲದ ಅಧಿಕಾರ ಚಲಾಯಿಸಿ ಮಾಡಲಾಗಿದೆ. ಸಾಕ್ಷ್ಯಾಧಾರವಿಲ್ಲದೇ ಮಾಡಲಾಗಿದೆ ಎಂಬ ಆಪಾದನೆಗಳಿಲ್ಲದೆ, ಅದರ ಗುಣಾವಗುಣಗಳನ್ನು ಮಾತ್ರ ಪ್ರಶ್ನಿಸುವ ಅರ್ಜಿ.

## ನ್ಯಾಯಾಧಿಕರಣದ ಸದಸ್ಯರುಗಳು

ರಾಜ್ಯದ ಮತ್ತು ಕೇಂದ್ರದ ಆಡಳಿತಾತ್ಮಕ ನ್ಯಾಯಾಧಿಕರಣಗಳಿಗೆ, ಅಧ್ಯಕ್ಷರನ್ನು ಉಪಾಧ್ಯಕ್ಷರನ್ನು, ನ್ಯಾಯಿಕ ಹಾಗೂ ಆಡಳಿತ ಸದಸ್ಯರುಗಳನ್ನು ಮುಖ್ಯ ನ್ಯಾಯಾಧೀಶರ ಸಲಹೆ ಪಡೆದು ರಾಷ್ಟ್ರಾಧ್ಯಕ್ಷರು ನೇಮಕ ಮಾಡುತ್ತಾರೆ. ಅಧ್ಯಕ್ಷರಾಗಿ ನೇಮಕ ಹೊಂದುವವರು ಉಚ್ಚ ನ್ಯಾಯಾಲಯದ ನ್ಯಾಯಾಧೀಶರಾಗಿದ್ದಿರಬೇಕು, ಇಲ್ಲವೆ ಕಡೆಯ ಪಕ್ಷ ಎರಡು ವರ್ಷಗಳ ಕಾಲ ಉಪಾಧ್ಯಕ್ಷರಾಗಿ ಸೇವೆ ಸಲ್ಲಿಸಿದವರಾಗಿರಬೇಕು. ಈ ಅಧಿಕಾರ ಸ್ಥಾನಗಳಿಗೆ ನಿಯುಕ್ತರಾಗುವವರು ಉಚ್ಚ ನ್ಯಾಯಾಲಯದ ನ್ಯಾಯಾಧೀಶರುಗಳು ಚಲಾಯಿಸುವ ಅಧಿಕಾರವನ್ನು, ಅದರಲ್ಲೂ 226 ಮತ್ತು 227ನೇ ಅನುಚ್ಛೇಗಳ ಕೆಳಗೆ ಪ್ರಕರಣಗಳನ್ನು ತೀರ್ಮಾನಿಸುವ ಅಧಿಕಾರವನ್ನು, ಹೊಂದಿರುವುದರಿಂದ, ಅವರು ಉಚ್ಚ ನ್ಯಾಯಾಲಯದ ನ್ಯಾಯಾಧೀಶರಿಗಿಂತ ಕಮ್ಮಿಯೇನಲ್ಲ ಎಂಬುದು ಇದರಿಂದ ಖಾತರಿಯಾಗುತ್ತದೆ.

ಯಾವ ಪೀಠದ ಅಧಿಕಾರ ವ್ಯಾಪ್ತಿಯೊಳಗೆ ಅರ್ಜಿದಾರನು ತತ್ಕಾಲದಲ್ಲಿ ತನ್ನ ಹುದ್ದೆಯಲ್ಲಿ ನಿಯುಕ್ತನಾಗಿದ್ದಾನೋ ಆ ಪೀಠದ ಮುಂದೆಯೇ ವ್ಯಾಜ್ಯಗಳನ್ನು ದಾಖಲು ಮಾಡಬೇಕು. ಅರ್ಜಿಯು ನಿಯಮಗಳ ಪ್ರಕಾರ ದಾಖಲು ಮಾಡಲ್ಪಟ್ಟಿಲ್ಲವೆಂದೋ ಅಥವಾ ವಿಚಾರಣೆಗೆ ಅರ್ಹವಾಗಿಲ್ಲವೆಂದೋ, ಸ್ವೀಕೃತಿಯ ಸಮಯದಲ್ಲೇ ಅದನ್ನು ನ್ಯಾಯಾಧೀಕರಣ ಸಂಕ್ಷಿಪ್ತವಾಗಿ ತಿರಸ್ಕರಿಸಬಹುದು.

ನ್ಯಾಯಾಧೀಕರಣವು ವ್ಯವಹಾರ ಪ್ರಕ್ರಿಯಾ ಸಂಹಿತೆಯ ನಿಯಮಗಳಿಗೆ ಬದ್ಧವಾಗಿಲ್ಲದಿದ್ದರೂ, ಸ್ವಾಭಾವಿಕ ನ್ಯಾಯದ ಸೂತ್ರಗಳನ್ನು ಅನುಸರಿಸುತ್ತದೆ. ವಿಚಾರಣಾ ಸ್ಥಳ ಮತ್ತು ವಿಚಾರಣಾ ಸಮಯವನ್ನು ನಿಗದಿಪಡಿಸುವುದೂ ಸೇರಿದಂತೆ ನಿಯಮಗಳನ್ನು ನಿಯಂತ್ರಿಸುವ ಅಧಿಕಾರ ಅದಕ್ಕಿದ್ದು, ತನ್ನ ನಡವಳಿಕೆಗಳನ್ನು ಸಾರ್ವಜನಿಕವಾಗಿ ಜರುಗಿಸಬೇಕೇ ಅಥವಾ ಖಾಸಗಿಯಾಗಿ ಜರುಗಿಸಬೇಕೆ ಎಂಬುದನ್ನು ಅದೇ ನಿರ್ಧರಿಸುತ್ತದೆ. ಸಾಧ್ಯವಾದಷ್ಟು ಶೀಘ್ರವಾಗಿ ಪ್ರತಿಯೊಂದು ಅರ್ಜಿಯನ್ನು ತೀರ್ಮಾನಮಾಡಬೇಕೆಂದು ನ್ಯಾಯಾಧಿಕರಣಕ್ಕೆ ಕಟ್ಟುಮಾಡಲಾಗಿದೆ.

ನ್ಯಾಯಾಧಿಕರಣಕ್ಕೆ ಕೆಳಕಂಡ ಹೆಚ್ಚಿಗೆ ಅಧಿಕಾರಗಳೂ ಇವೆ:

i. ಯಾವುದೇ ವ್ಯಕ್ತಿಗೆ ಸಮನ್ಸ್ ಕಳುಹಿಸಿ, ಕಡ್ಡಾಯವಾಗಿ ಹಾಜರಾಗುವಂತೆ ಮಾಡಿ, ಅವನನ್ನು ಪ್ರಮಾಣಪೂರ್ವಕವಾಗಿ ಪರೀಕ್ಷಿಸುವುದು (ವಿಚಾರಣೆ ಮಾಡುವುದು).

ii. ದಸ್ತಾವೇಜುಗಳನ್ನು ಕಂಡುಹಿಡಿಯುವುದು ಮತ್ತು ಹಾಜರುಪಡಿಸುವಂತೆ ಮಾಡುವುದು.

iii. ಪ್ರಮಾಣಪತ್ರ ದ್ವಾರಾ ಸಾಕ್ಷ್ಯವನ್ನು ಸ್ವೀಕರಿಸುವುದು.

iv. 1872ರ ಭಾರತ ಸಾಕ್ಷ್ಯ ಅಧಿನಿಯಮದ 123 ಮತ್ತು 124ನೇ ಖಂಡಗಳಿಗೊಳಪಟ್ಟು, ಯಾವುದೇ ಸಾರ್ವಜನಿಕ ದಾಖಲೆ ಅಥವಾ ದಸ್ತಾವೇಜನ್ನು ಕಡ್ಡಾಯ ಕೋರಿಕೆ ಮೇರೆಗೆ ತರಿಸಿಕೊಳ್ಳುವುದು.

v. ಸಾಕ್ಷಿಗಳ ವಿಚಾರಣೆಗೆ ಆಯೋಗಗಳನ್ನು ಹೊರಡಿಸುವುದು.

vi. ತನ್ನ ತೀರ್ಮಾನಗಳನ್ನು ಪುನರವಲೋಕನ ಮಾಡುವುದು.

vii. ನಿವೇದನೆಗಳನ್ನು ಕರ್ತವ್ಯಲೋಪಕ್ಕಾಗಿ ವಜಮಾಡುವುದು ಅಥವಾ ಏಕ ಪಕ್ಷೀಯವಾಗಿ ತೀರ್ಮಾನಿಸುವುದು.

viii. ಕರ್ತವ್ಯಲೋಪಕ್ಕಾಗಿ ನಿವೇದನೆಯನ್ನು ವಜಮಾಡಿದ ಆದೇಶ ಅಥವಾ ಏಕಪಕ್ಷೀಯವಾಗಿ ಮಾಡಿದ ಯಾವುದೇ ಆದೇಶವನ್ನು ತಳ್ಳಿಹಾಕುವುದು

ಮತ್ತು

ix. ಕೇಂದ್ರ ಸರ್ಕಾರ ನಿಗದಿಮಾಡಿದ ಇತರ ಯಾವುದೇ ವಿಷಯ

ತನ್ನ ತೀರ್ಮಾನದ ಪುನರವಲೋಕನಕ್ಕಾಗಿ ಮೂವತ್ತು ದಿವಸಗಳ ಒಳಗೆ ನಿಯಮಗಳಿಗನುಸಾರವಾಗಿ ಸಲ್ಲಿಸಿದ ಅರ್ಜಿಯನ್ನು ನ್ಯಾಯಾಧಿಕರಣ ತೀರ್ಮಾನ ಮಾಡಬಹುದು. 1971ರ ನ್ಯಾಯಾಲಯ ನಿಂದನೆ ಅಧಿನಿಯಮದ ಕೆಳಗೆ ಅದು ಶಿಕ್ಷೆಯನ್ನೂ ವಿಧಿಸಬಹುದು.

## ಮೇಲ್ಮನವಿಗಳು

ಆಡಳಿತಾತ್ಮಕ ನ್ಯಾಯಾಧಿಕರಣಗಳ ತೀರ್ಮಾನಗಳನ್ನು ಸರ್ವೋಚ್ಚ ನ್ಯಾಯಾಲಯದಲ್ಲಿ ಮಾತ್ರ ಪ್ರಶ್ನಿಸಬಹುದು. ಹೀಗಾಗಿ ಭಾಧಿತ ವ್ಯಕ್ತಿಗೆ ಇರುವ ಕಡೆಯ ಪರಿಹಾರವೆಂದರೆ ಸಂವಿಧಾನದ ಅನುಚ್ಛೇದ 136ರ ಕೆಳಗೆ ಸರ್ವೋಚ್ಚ ನ್ಯಾಯಾಲಯಕ್ಕೆ ಮೇಲ್ಮನವಿಯನ್ನು ಸಲ್ಲಿಸುವುದು. ಸಂವಿಧಾನದ 226 ಮತ್ತು 227ನೇ ಅನುಚ್ಛೇದಗಳ ಕೆಳಗೆ ಮಧ್ಯೆ ಪ್ರವೇಶಿಸಲು ಉಚ್ಚ ನ್ಯಾಯಾಲಯಕ್ಕೆ ಸಕ್ಷಮತೆ ಇಲ್ಲ. ಆದರೆ ಅನುಚ್ಛೇದ 32ರ ಕೆಳಗೆ ಸರ್ವೋಚ್ಚ ನ್ಯಾಯಾಲಯದ ಅಧಿಕಾರ ವ್ಯಾಪ್ತಿಗೇನೂ ಚ್ಯುತಿಯಿಲ್ಲ.

## ಅನುಚ್ಛೇದ 323ಬಿ ಕೆಳಗೆ ಇತರ ನ್ಯಾಯಾಧಿಕರಣಗಳು

ಸಂವಿಧಾನದ 42ನೇ ತಿದ್ದುಪಡಿ ಅಧಿನಿಯಮವು ಸಂವಿಧಾನಕ್ಕೆ ಇನ್ನೂ ಒಂದು ಅನುಚ್ಛೇದವನ್ನು ಸೇರ್ಪಡೆಮಾಡಿತು. ಅದೇ ಅನುಚ್ಛೇದ 323ಬಿ. ಇದು ಆಡಳಿತಾತ್ಮಕ ನ್ಯಾಯಾಧಿಕರಣಗಳಲ್ಲದೆ ಇತರ ನ್ಯಾಯಾಧಿಕರಣಗಳನ್ನು ಸ್ಥಾಪಿಸಲು ಅವಕಾಶ ಮಾಡಿದೆ. ಈ ನ್ಯಾಯಾಧಿಕರಣಗಳು ಕೆಳಗಿನ ವಿಷಯಕ್ಕೆ ಸಂಬಂಧಪಟ್ಟಹಾಗೆ ಇವೆ:

i. ಯಾವುದೇ ತೆರಿಗೆಯನ್ನು ವಿಧಿಸುವುದು, ಕರನಿರ್ಧರಣೆ ಮಾಡುವುದು, ವಸೂಲು ಮಾಡುವುದು ಮತ್ತು ಜಾರಿ ಮಾಡುವುದು.

ii. ವಿದೇಶಿ ವಿನಿಮಯ, ಸೀಮಾ ಸುಂಕದ ಪ್ರದೇಶವನ್ನು ದಾಟುವ ಆಮದು ಮತ್ತು ರಫ್ತು.

iii. ಕೈಗಾರಿಕಾ ಮತ್ತು ಕಾರ್ಮಿಕ ವ್ಯಾಜ್ಯಗಳು.

iv. ಅನುಚ್ಛೇದ 31-ಎ ಕೆಳಗೆ ವಿವರಿಸಿರುವ ಯಾವುದೇ ಆಸ್ತಿ ಸಂಪದವನ್ನು ಅಥವಾ ಅದಕ್ಕೆ ಸೇರಿದ ಯಾವುದೇ ಹಕ್ಕನ್ನು, ಸ್ವಾಧೀನಕ್ಕೆ ತೆಗೆದುಕೊಂಡಾಗಲೀ ಅಥವಾ ಅಂಥ ಹಕ್ಕುಗಳನ್ನು ಅಳಿಸುವುದರಿಂದಾಗಲೀ ಇಲ್ಲ ಮಾರ್ಪಡಿಸುವುದರಿಂದಾಗಲೀ ಇಲ್ಲ ವ್ಯವಸಾಯ ಭೂಮಿಯ ಮೇಲೆ ಗರಿಷ್ಠ ಮಿತಿಯನ್ನು ನಿಗದಿಮಾಡುವುದರಿಂದಾಗಲೀ ಭೂ ಸುಧಾರಣೆಯನ್ನು ಜಾರಿಗೆ ತರುವುದು.

v. ನಗರ ಆಸ್ತಿ ಮಿತಿ.

vi. ಅನುಚ್ಛೇದ 329 ಮತ್ತು 329 ಏನಲ್ಲಿ ವ್ಯವಹರಿಸಿರುವ ವಿಷಯಗಳನ್ನು ಹೊರತುಪಡಿಸಿ ಸಂಸತ್ತಿನ ಎರಡು ಸದನಗಳಿಗೂ ಮತ್ತು ರಾಜ್ಯದ ಎರಡು ಶಾಸನ ಸಭೆಗಳಿಗೂ ಚುನಾವಣೆ ನಡೆಸುವುದು.

vii. ಖಾದ್ಯ ತೈಲದ ಬೀಜಗಳು ಮತ್ತು ತೈಲಗಳೂ ಸೇರಿದಂತೆ ಆಹಾರ ಪದಾರ್ಥಗಳ, ಹಾಗೂ ರಾಷ್ಟ್ರಾಧ್ಯಕ್ಷರು ಸಾರ್ವಜನಿಕ ತಿಳುವಳಿಕೆ ಹೊರಡಿಸಿ, ಅವಶ್ಯಕವಸ್ತುಗಳೆಂದು ಘೋಷಿಸಿದ ಇತರ ವಸ್ತುಗಳ ಉತ್ಪಾದನೆ, ಸಂಗ್ರಹ, ಸರಬರಾಜು ಮತ್ತು ಹಂಚಿಕೆ ಮತ್ತು ಈ ವಸ್ತುಗಳ ಬೆಲೆಗಳ ನಿಯಂತ್ರಣ

viii. (i) ರಿಂದ (vii)ರ ವರೆಗೆ ನಿರ್ದಿಷ್ಟಪಡಿಸಿದ ಯಾವುದೇ ವಿಷಯಗಳಿಗೆ ಸಂಬಂಧಿಸಿದ ಹಾಗೆ ಕಾನೂನಿಗೆ ವಿರುದ್ಧಮಾಡಿದ ತಕ್ಸೀರುಗಳು ಮತ್ತು ಈ ಯಾವುದೇ ವಿಷಯಗಳಿಗೆ ಸಂಬಂಧಿಸಿದ ಹಾಗೆ ಶುಲ್ಕಗಳು.

ಎಲ್ಲಿಯವರೆಗೆ ಕಾನೂನನ್ನು ಅಧಿನಿಯಮಗೊಳಿಸುವುದಿಲ್ಲವೋ ಮತ್ತು ಅನುಚ್ಛೇದ 323-ಬಿ(3)(ಡಿ) ಕೆಳಗೆ ನ್ಯಾಯಾಧಿಕರಣ ಸ್ಥಾಪಿತವಾಗುವುದಿಲ್ಲವೊ, ಅಲ್ಲಿಯವರೆಗೆ ವ್ಯವಹಾರ ನ್ಯಾಯಾಲಯಗಳ ಹಾಲಿ ಅಧಿಕಾರ ವ್ಯಾಪ್ತಿ ಹಾಗೂ ಅನುಚ್ಛೇದ 226ರ ಕೆಳಗೆ ಉಚ್ಚ ನ್ಯಾಯಾಲಯದ ಅಧಿಕಾರ ವ್ಯಾಪ್ತಿ

ಮುಂದುವರೆಯುತ್ತದೆ. ನ್ಯಾಯಾಧಿಕರಣ ಸ್ಥಾಪಿತವಾದ ಮೇಲೆ, ಯಾವ ವಿಷಯಕ್ಕಾಗಿ ಅದನ್ನು ಸ್ಥಾಪಿಸಲಾಯಿತೋ, ಆ ವಿಷಯವನ್ನು ನ್ಯಾಯಾಲಯಗಳು ವಿಚಾರಣೆ ಮಾಡುವ ಹಾಗಿಲ್ಲ.

ಮೇಲೆ (i)ರಿಂದ (vii)ರ ವರೆಗೆ ವಿವರಿಸಿದ ವಿಷಯಗಳನ್ನು ಕುರಿತು ಶ್ರೇಣೀಕೃತ ನ್ಯಾಯಾಧಿಕರಣಗಳ ಸ್ಥಾಪನೆ ಮಾಡಲು ಸಂಬಂಧಿಸಿದ ಶಾಸನ ಸಭೆಗಳಿಗೆ ಅಧಿಕಾರ ಕೊಡಲಾಗಿದೆ. ಹೇಗಾದರೂ, ಒಂದೇ ಒಂದು ವಿಷಯಕ್ಕೆ ಸೀಮಾ ಸುಂಕ ಮತ್ತು ಅಬ್ಕಾರಿ - ಸಂಬಂಧಿಸಿದ ಹಾಗೆ ಮಾತ್ರ ಕಾನೂನನ್ನು ಪಾರ್ಲಿಮೆಂಟ್ ಅಧಿನಿಯಮಿಸಿದೆ. 'ಸೀಮಾ ಸುಂಕ ಮತ್ತು ಅಬ್ಕಾರಿ ರಾಜಸ್ವ ನ್ಯಾಯಾಧಿಕರಣ ಅಧಿನಿಯಮ 1986' ಎಂಬುದೇ ಆ ಅಧಿನಿಯಮ. 1962ರ ಸೀಮಾ ಸುಂಕ ಅಧಿನಿಯಮ ಮತ್ತು 1944ರ ಕೇಂದ್ರ ಅಬ್ಕಾರಿ ಮತ್ತು ಉಪ್ಪಿನ ಅಧಿನಿಯಮ, ಇವುಗಳ ಕೆಳಗೆ ಬರುವ ಮೌಲ್ಯಮಾಪನ, ವರ್ಗೀಕರಣ ಮತ್ತು ಸುಂಕದ ದರಗಳು ಇವುಗಳನ್ನು ಕುರಿತ ವ್ಯಾಜ್ಯಗಳನ್ನು ಉಚ್ಚ ನ್ಯಾಯಾಲಯಗಳ ಹೊರಗೆ ಪರಿಹರಿಸುವ ಸಲುವಾಗಿ 1986ರ ಅಧಿನಿಯಮವನ್ನು ತರಲಾಗಿದೆ. ಯಾವ ತಾರೀಖಿನಿಂದ ಈ ನ್ಯಾಯಾಧಿಕರಣದ ವ್ಯಾಪ್ತಿಯನ್ನು ಜಾರಿಗೆ ತರಬೇಕೆಂದು ಇನ್ನೂ ಪ್ರಕಟಿಸದೇ ಇರುವುದರಿಂದ ನ್ಯಾಯಾಧೀಕರಣ ಇನ್ನೂ ತನ್ನ ಕೆಲಸವನ್ನು ಪ್ರಾರಂಭಿಸಿಲ್ಲ.

ಈ ನ್ಯಾಯಾಧಿಕರಣದ ತೀರ್ಪಿನಿಂದ ಉದ್ಭವಿಸಿದ ಮೇಲ್ಮನವಿಗಳನ್ನು ಸರ್ವೋಚ್ಚ ನ್ಯಾಯಾಲಯಕ್ಕೆ ಮಾತ್ರ ತೆಗೆದುಕೊಂಡು ಹೋಗಬಹುದು.

# ಸೀಮಾ ಸುಂಕ ಮತ್ತು ಅಬ್ಕಾರಿ ರಾಜಸ್ವ ನ್ಯಾಯಾಧಿಕರಣ

ಸೀಮಾ ಸುಂಕ ಮತ್ತು ಅಬ್ಕಾರಿ ರಾಜಸ್ವ ಮೇಲ್ಮನವಿ ನ್ಯಾಯಾಧಿಕರಣ ಅಧಿನಿಯಮವನ್ನು 1986ರಲ್ಲಿ ಪಾರ್ಲಿಮೆಂಟ್ ಅನುಮೋದಿಸಿತು CERAT. ಈ ಅಧಿನಿಯಮವು ಸಂವಿಧಾನದ 323ಬಿ ಅನುಚ್ಛೇದದ ಉಪಪ್ರಕರಣ(2)ರಲ್ಲಿ ಎಲ್ಲ ವಿಷಯಕ್ಕೆ ಅಥವಾ ಯಾವುದಾದರೊಂದು ವಿಷಯಕ್ಕೆ ಸಂಬಂಧಿಸಿದ ಹಾಗೆ ವ್ಯಾಜ್ಯಗಳು, ದೂರುಗಳು ಮತ್ತು ತಕ್ರೀರುಗಳನ್ನು ನ್ಯಾಯಾಧಿಕರಣಗಳು ವಿಚಾರಣೆಮಾಡಿ ತೀರ್ಮಾನಿಸಬೇಕೆಂದೂ ಮತ್ತು ಇದಕ್ಕಾಗಿ ಆಯಾ ಶಾಸನ ಸಭೆಗಳು ತಮಗಿರುವ ಅಧಿಕಾರ ವ್ಯಾಪ್ತಿಯಲ್ಲಿ ಕಾನೂನನ್ನು ರೂಪಿಸಿ ಅನುಮೋದಿಸಬೇಕೆಂದು ಅನುಚ್ಛೇದ 323ಬಿ ನಿಗದಿ ಮಾಡಿದೆ. ತೆರಿಗೆ ವಿಧಿಸುವುದು, ಕರನಿರ್ಧರಣೆ, ವಸೂಲಿ, ಜಾರಿಗೆ ತರುವುದು ಮತ್ತು ಇವುಗಳಿಗೆ ಪ್ರಾಸಂಗಿಕವಾದ ಪ್ರಕ್ರಿಯೆ, ಇವಿಷ್ಟೂ ಉಪಪ್ರಕರಣದಲ್ಲಿ ನಮೂದಿಸಿದ ವಿಷಯಗಳಲ್ಲಿ ಒಂದಾಗಿದೆ.

ಈ ನ್ಯಾಯಾಧಿಕರಣಕ್ಕೂ CERAT ಮತ್ತು ಕೇಂದ್ರ ಅಬ್ಕಾರಿ ಮತ್ತು ಚಿನ್ನ (ನಿಯಂತ್ರಣ) ಮೇಲ್ಮನವಿ ನ್ಯಾಯಾಧಿಕರಣಕ್ಕೂ CEGAT ಇರುವ ಮೂಲ ವ್ಯತ್ಯಾಸಗಳೇನೆಂದರೆ:

CERAT ಅನ್ನು ಸಂವೈಧಾನಿಕ ಅವಕಾಶಗಳಡಿಯಲ್ಲಿ ಸ್ಥಾಪಿಸಲಾಗಿದ್ದು, CEGATಅನ್ನು ಆಯಾ ಅಧಿನಿಯಮಗಳಡಿ ರಚಿಸಲಾಗಿದ್ದು ಅದು ಒಂದು ಶಾಸನಬದ್ಧ ನಿಕಾಯವಾಗಿದೆ.

CERATನ ಅಧ್ಯಕ್ಷರು ಉಚ್ಚ ನ್ಯಾಯಾಲಯದ ನ್ಯಾಯಾಧೀಶರಾಗಿರಬೇಕು ಇಲ್ಲವೇ ಆ ನ್ಯಾಯಾಧಿಕರಣದಲ್ಲಿ ಎರಡು ವರ್ಷಗಳಿಗೆ ಕಮ್ಮಿ ಇಲ್ಲದಂತೆ ನ್ಯಾಯಿಕ ಸದಸ್ಯರಾಗಿ ಇಲ್ಲವೇ ತಾಂತ್ರಿಕ ಸದಸ್ಯರಾಗಿ ಕೆಲಸ ಮಾಡಿದ್ದಿರಬೇಕು. ಆದರೆ CEGATನ ಅಧ್ಯಕ್ಷರಾಗಿ ಮತ್ತು ಸದಸ್ಯರುಗಳಾಗಿ ನೇಮಕ ಹೊಂದಲು ಈ ನಿಬಂಧನೆಗಳಿಲ್ಲ.

CERATನ ಅಧ್ಯಕ್ಷರನ್ನು ಮತ್ತು ಸದಸ್ಯರುಗಳನ್ನು ಒಂದು ಆಯ್ಕೆ ಸಮಿತಿಯ ಶಿಫಾರಸಿನ ಮೇಲೆ ರಾಷ್ಟ್ರಾಧ್ಯಕ್ಷರು ನೇಮಕ ಮಾಡುತ್ತಾರೆ. ಆಯ್ಕೆ ಸಮಿತಿಯ ಅಧ್ಯಕ್ಷರನ್ನು ಭಾರತದ ಮುಖ್ಯ ನ್ಯಾಯಾಧೀಶರು ನಾಮಕರಣ ಮಾಡುತ್ತಾರೆ ಮತ್ತು ಅದರ ಇತರ ಸದಸ್ಯರುಗಳನ್ನು ಕೇಂದ್ರ ಸರ್ಕಾರ ನಾಮಕರಣ ಮಾಡುತ್ತದೆ. ಆಯ್ಕೆ ಸಮತಿಯ ಅಧ್ಯಕ್ಷರು, ಉಚ್ಚ ನ್ಯಾಯಾಲಯದ ನ್ಯಾಯಾಧೀಶರಾಗಿದ್ದಿರಬೇಕು, ಇಲ್ಲವೇ ಎರಡು ವರ್ಷಗಳಿಗೆ ಕಮ್ಮಿ ಇಲ್ಲದಂತೆ ನ್ಯಾಯಿಕ ಅಥವಾ ತಾಂತ್ರಿಕ ಸದಸ್ಯನಾಗಿ ಕೆಲಸ ಮಾಡಿದ್ದಿರಬೇಕು. ನ್ಯಾಯಿಕ ಸದಸ್ಯರು ಉಚ್ಚ ನ್ಯಾಯಾಲಯದ ನ್ಯಾಯಾಧೀಶನಾಗಿದ್ದಿರಬೇಕು ಇಲ್ಲವೇ ಐದು ವರ್ಷಗಳಿಗೆ ಕಮ್ಮಿ ಇಲ್ಲದಂತೆ ಮೊದಲನೆ ದರ್ಜೆಯ ಕಾನೂನು ಸೇವಾ ಸದಸ್ಯನಾಗಿರಬೇಕು.

ಹೀಗೆಯೇ, ತಾಂತ್ರಿಕ ಸದಸ್ಯರು, ಭಾರತ ಸೀಮಾ ಸುಂಕ ಮತ್ತು ಅಬ್ಕಾರಿ

ಸೇವೆಯಲ್ಲಿ 30ವರ್ಷಗಳಿಗೆ ಕಮ್ಮಿ ಇಲ್ಲದೆ ಸದಸ್ಯನಾಗಿದ್ದು, ಅದರಲ್ಲಿ 10ವರ್ಷಗಳಿಗೆ ಕಮ್ಮಿ ಇಲ್ಲದೆ ಕಲೆಕ್ಟರ್ ಅಥವಾ ಅದಕ್ಕಿಂತ ಉನ್ನತ ಪದವಿಯಲ್ಲಿದ್ದಿರಬೇಕು.

ಅಧ್ಯಕ್ಷರ ಸೇವಾ ಅವಧಿ ಮೂರು ವರ್ಷಗಳು ಅಥವಾ ಅವರ 65 ವರ್ಷ ವಯಸ್ಸಿನವರೆಗೆ ಯಾವುದು ಮುಂಚೆಯೋ, ಅಲ್ಲಿಯವರೆಗೆ ಇರುತ್ತದೆ. ಅಧ್ಯಕ್ಷರನ್ನಾಗಲೀ ಅಥವಾ ಸದಸ್ಯರನ್ನಾಗಲೀ ರಾಷ್ಟ್ರಾಧ್ಯಕ್ಷರು ಮಾತ್ರ ಸೇವೆಯಿಂದ ತೆಗೆದುಹಾಕಬಹುದು. ಆದರೆ ಅದಕ್ಕೆ ಮುಂಚೆ ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶರೊಬ್ಬರು ವಿಚಾರಣೆ ನಡೆಸಿ ಅವರನ್ನು ದುರ್ನಡತೆಯವರೆಂದೋ ಅಥವಾ ಅಸಮರ್ಥರೆಂದೋ ಸಾಬೀತು ಪಡಿಸಿರಬೇಕು. ಸೇವೆಯಿಂದ ನಿವೃತ್ತರಾದಮೇಲೆ ಅಧ್ಯಕ್ಷರು ಯಾವುದೇ ಹುದ್ದೆಗೆ ನೇಮಕ ಹೊಂದುವ ಹಾಗಿಲ್ಲ, ಆದರೆ ಸದಸ್ಯರಾದವರು ನಿವೃತ್ತರಾದರೆ ಅಧ್ಯಕ್ಷರ ಪದವನ್ನು ಮಾತ್ರ ಒಪ್ಪಿಕೊಳ್ಳಬಹುದು. ಅವರು CERAT ಮತ್ತು CEGAT ಮುಂದೆ ಯಾರ ಪರವಾಗಿ ಹಾಜರಿ ಆಗುವ ಹಾಗೆಯೂ ಇಲ್ಲ.

CERAT ಮತ್ತು CEGAT ಇವೆರಡರ ಅಧಿಕಾರ ವ್ಯಾಪ್ತಿ ಒಂದೇ ಆಗಿದೆ, ಆದರೆ CERATಗೆ ಚಿನ್ನ ನಿಯಂತ್ರಣ ಅಧಿನಿಯಮದ ಕೆಳಗಾಗಲೀ, ಅಥವಾ CEGATನ ಪ್ರಾದೇಶಿಕ ಪೀಠಗಳ ಅಧಿಕಾರ ವ್ಯಾಪ್ತಿಯ ಕೆಳಗೆ ಬರುವ ವಿಷಯಗಳ ಕುರಿತಾಗಲೀ ಅಧಿಕಾರ ವ್ಯಾಪ್ತಿ ಇಲ್ಲ.

CEGATಮುಂದೆ ಮೇಲ್ಮನವಿ ದಾಖಲಿಸಲು ಇರುವ ಪ್ರಕ್ರಿಯೆಗಳು CERATಗೂ ಅನ್ವಯಿಸುತ್ತವೆ. CERAT ಅಧಿನಿಯಮವು 1986ರಲ್ಲೇ ಅನುಮೋದನೆಯಾಗಿ ಕಾನೂನಾಗಿದ್ದರೂ, ಆ ನ್ಯಾಯಾಧಿಕರಣ ಇನ್ನೂ ಅಸ್ತಿತ್ವಕ್ಕೆ ಬಾರದ ಕಾರಣ, ಅದಕ್ಕೆ ಸಂಬಂಧಿಸಿದ ವಿವರವಾದ ಪ್ರಕ್ರಿಯೆಗಳು ಇನ್ನೂ ನಿಗದಿಯಾಗಿಲ್ಲ.

ನ್ಯಾಯಾಲಯದ ನಿಂದನೆಗಾಗಿ ವಿಚಾರಣೆಗೆ ಗುರಿಪಡಿಸಲು ಉಚ್ಚ ನ್ಯಾಯಾಲಯದಂತೆ CERATಗೂ ಅಧಿಕಾರವಿದೆ. ಕೆಲವು ವಿಷಯಗಳಿಗೆ ನ್ಯಾಯಾಲಯಕ್ಕೆ ಇರುವ ಅಧಿಕಾರ ಅದಕ್ಕೆ ಇರುವಷ್ಟರ ಮಟ್ಟಿಗೆ ಬಿಟ್ಟು ಮಿಕ್ಕೆಲ್ಲ ವಿಷಯಕ್ಕೆ ಸಂಬಂಧಿಸಿದ ಹಾಗೆ ಅದು ವ್ಯವಹಾರ ಪ್ರಕ್ರಿಯಾ ಸಂಹಿತೆಯಲ್ಲಿ ವಿಧಿಸಲ್ಪಟ್ಟಿರುವ ನಡವಳಿಕೆಗಳಿಗೆ ಬದ್ಧವಾಗಿಲ್ಲ. CERATಗೆ ತಡೆ ಆಜ್ಞೆಯನ್ನು ಕೊಡುವ ಅಧಿಕಾರವೂ ಇದೆ.

CERAT ಮತ್ತು CEGATಗೆ ಇರುವ ಅತಿ ಮುಖ್ಯ ವ್ಯತ್ಯಾಸವೆಂದರೆ CERAT ಮುಂದೆ ಎರಡೂ ಪಕ್ಷಗಳ ವಕೀಲರುಗಳು ಮಾತ್ರ ಹಾಜರಾಗಬಹುದು ಆದರೆ CEGAT ಮುಂದೆ ಮೇಲ್ಮನವಿದಾರರ ಖಾಯಂ ನೌಕರರು ಮತ್ತು ಸಲಹೆಗಾರರು ಹಾಜರಾಗಬಹುದು.

ನ್ಯಾಯಾಲಯಗಳ ಅಧಿಕಾರ ವ್ಯಾಪ್ತಿಯನ್ನು ತಪ್ಪಿಸಲೆಂದೇ CERAT ಅನ್ನು ಸ್ಥಾಪಿಸಲಾಗಿರುವ ಮುಖ್ಯ ಉದ್ದೇಶ. ಸಾಮಾನ್ಯವಾಗಿ ತಡೆಯಾಜ್ಞೆ ಒಮ್ಮೆ ಸಿಕ್ಕಿತೆಂದರೆ ಮೇಲ್ಮನವಿದಾರರು ಪ್ರಕರಣವನ್ನು ಮುಂದುವರಿಸಲು 'ಮರೆತು' ಬಿಡುತ್ತಾರೆ. ಇಂಥ ಪ್ರಕರಣಗಳು ಉಚ್ಚ ನ್ಯಾಯಾಲಯದ ಮುಂದೆ ದೀರ್ಘಕಾಲದ ವರೆಗೆ ನೆನೆಗುದಿಗೆ ಬಿದ್ದು ಸರ್ಕಾರಕ್ಕೆ ಸಲ್ಲಬೇಕಾದ ಹಣಕ್ಕೆ ತಡೆಯಾಗುತ್ತದೆ. ಈ

ನ್ಯಾಯಾಧಿಕರಣ ಸ್ಥಾಪಿತವಾದದ್ದರಿಂದ ಉಚ್ಚ ನ್ಯಾಯಾಲಯಕ್ಕೆ ಹೋಗಲು ಆಗದ ಕಾರಣ ವಸ್ತುಸ್ಥಿತಿ ಉತ್ತಮಗೊಳ್ಳುವುದೆಂದು ಆಶಿಸಲಾಗಿದೆ. CERAT ನಿಂದ ಮೇಲ್ಮನವಿಗಳನ್ನು ಸರ್ವೋಚ್ಚ ನ್ಯಾಯಾಲಯಕ್ಕೆ ಮಾತ್ರ ಸಲ್ಲಿಸಬಹುದು.

# ಏಕ ಸ್ವಾಮ್ಯಗಳ ಮತ್ತು ಪರಿಬಂಧಕ ವ್ಯಾಪಾರ ಪದ್ಧತಿ ಆಯೋಗ (ಎಂ.ಆರ್.ಟಿ.ಪಿ.)

ಏಕಸ್ವಾಮ್ಯಗಳು ಮತ್ತು ಪರಿಬಂಧಕ ವ್ಯಾಪಾರ ಪದ್ಧತಿಗಳ ಆಯೋಗವನ್ನು ಸ್ಥಾಪಿಸಿದುದರ ನಿರ್ದಿಷ್ಟವಾದ ಉದ್ದೇಶ.

i. ಏಕಸ್ವಾಮ್ಯ ವ್ಯಾಪಾರ ಪದ್ಧತಿಗಳು; ಮತ್ತು

ii. ಪರಿಬಂಧಕ ಹಾಗೂ ಅನ್ಯಾಯವಾದ ವ್ಯಾಪಾರದ ನಡವಳಿಕೆಗಳನ್ನು ತಡೆಗಟ್ಟುವುದೇ ಆಗಿದೆ.

ಆಯೋಗದಲ್ಲಿ ಕೇಂದ್ರ ಸರ್ಕಾರದಿಂದ ನೇಮಕ ಹೊಂದಿದ ಒಬ್ಬರು ಅಧ್ಯಕ್ಷರು ಮತ್ತು ಇತರ ಸದಸ್ಯರುಗಳು ಇರುತ್ತಾರೆ. ಅದರ ನೆಲೆ ನವದೆಹಲಿಯಲ್ಲಿದೆ. ವ್ಯವಹಾರ ನ್ಯಾಯಾಲಯಗಳಿಗಿರುವ ಅಧಿಕಾರ ಮತ್ತು ತನಿಖೆಮಾಡುವ ಅಧಿಕಾರ ಅದಕ್ಕೆ ಇದೆ; ಮೇಲಾಗಿ ಕೇಂದ್ರ ಸರ್ಕಾರವು ಇದರ ನಿಬಂಧನೆಗಳನ್ನು ರೂಪಿಸಿದೆ.

ಅಧ್ಯಕ್ಷರಲ್ಲದೆ, ಆಯೋಗಕ್ಕೆ ಇತರ ಕನಿಷ್ಟ ಐವರು ಸದಸ್ಯರುಗಳು ಇರುತ್ತಾರೆ. ಈ ಆಯೋಗವನ್ನು ಸ್ಥಾಪಿಸಿದ ಅಧಿನಿಯಮ ಎಂಟು ಮಂದಿ ಸದಸ್ಯರುಗಳಿಗೆ ಅವಕಾಶ ಕೊಟ್ಟಿದ್ದರೂ ಯಾವುದೇ ಕಾಲಕ್ಕೆ ಆಯೋಗದಲ್ಲಿ ಎಂಟಕ್ಕಿಂತ ಕಮ್ಮಿ ಸದಸ್ಯರೂ ಇರಬಹುದು.

ಆಯೋಗದ ಬಗ್ಗೆ ಜನಗಳ ಮನಸ್ಸಿನಲ್ಲಿರುವ ಪ್ರಾಥಮಿಕ ಅನಿಸಿಕೆ ಇದು ಒಂದು ಗ್ರಾಹಕರ ಸಂರಕ್ಷಣ ನಿಕಾಯ ಎಂದು. ಇದು ಭಾಗಶಃ ಚಾರಿತ್ರಿಕವಾಗಿದೆ. ಅದು ಅಸ್ತಿತ್ವಕ್ಕೆ ಬಂದ ಕಾಲದಲ್ಲಿ, ನ್ಯಾಯಿಕ ವ್ಯವಸ್ಥೆಯಲ್ಲಿ ಗ್ರಾಹಕರ ಸಂರಕ್ಷಣೆ ಕಾನೂನುಗಳು ಇಲ್ಲದಿದ್ದುದರಿಂದ, 1984ರಲ್ಲಿ ಅದರ ಇತರ ನಿಬಂಧಗಳಿಗೆ ಅನ್ಯಾಯವಾದ ವ್ಯಾಪಾರ ಪದ್ಧತಿಗಳಿಗೆ ಸಂಬಂಧಪಟ್ಟ ನಿಬಂಧಗಳನ್ನೂ ಸೇರಿಸುವುದು ಸೂಕ್ತ ಎಂದು ಮನಗಾಣಲಾಯಿತು.

ಪರಿಬಂಧಕ ಮತ್ತು ಅನ್ಯಾಯವಾದ ವ್ಯಾಪಾರ ಪದ್ಧತಿಗಳು ವ್ಯಾಪಾರ ಮತ್ತು ಕೈಗಾರಿಕೆಗಳಲ್ಲಿ ಸ್ಪರ್ಧೆಯನ್ನು ವಿರೂಪಗೊಳಿಸಿ ಗ್ರಾಹಕರ ಹಿತಾಸಕ್ತಿಗೆ ವ್ಯತಿರಿಕ್ತವಾಗಿ ಪರಿಣಮಿಸುತ್ತದೆ ಎಂದು ಭಾವಿಸಲಾಗಿದೆ. ಅನ್ಯಾಯವಾದ ವ್ಯಾಪಾರ ನಡವಳಿಕೆಗಳಿಗೆ ಸಂಬಂಧಪಟ್ಟಹಾಗೆ ಕಾನೂನೊಂದನ್ನು ಅಧಿನಿಯಮಗೊಳಿಸಲಾಗಿದೆ. ಅದೇ ಗ್ರಾಹಕರ ಸಂರಕ್ಷಣಾ ಕಾಯಿದೆ 1986.ಆ ಕಾಯಿದೆಯ ಕೆಳಗೆ ಸ್ಥಾಪಿತವಾದ ಪರಿಹಾರ ಕೊಡುವ ಸಾಧನಗಳ ಮೂಲಕ ಅದನ್ನು ಜಾರಿ ಮಾಡಲಾಗುತ್ತಿದೆ. ಆದಾಗ್ಯೂ ಎಂ.ಆರ್.ಟಿ.ಪಿ. ಆಯೋಗದ ಅಧಿಕಾರ ವ್ಯಾಪ್ತಿಗಾಗಲೀ ಅಧಿಕಾರ ಕ್ಷೇತ್ರಕ್ಕಾಗಲೀ ಬಾಧಕವಾಗಿಲ್ಲ. ಗ್ರಾಹಕರ ಸಂರಕ್ಷಣಾ ಕಾಯಿದೆ, ರಾಷ್ಟ್ರೀಯ, ರಾಜ್ಯ ಮತ್ತು ಜಿಲ್ಲಾ ಮಟ್ಟಗಳಲ್ಲಿ ದೂರುಗಳ ಪರಿಹಾರಕ್ಕೆ ವೇದಿಕೆಗಳ ಸ್ಥಾಪನೆಯನ್ನು ಉದ್ದೇಶಿಸಿದೆ. ಹೀಗಾಗಿ ದೂರುಗಳನ್ನು ಸಲ್ಲಿಸಲು ಮತ್ತು ಶೀಘ್ರವಾಗಿ ಪರಿಹಾರವನ್ನು ಪಡೆಯಲು ಹೆಚ್ಚು ಅವಕಾಶಗಳನ್ನು ಅದು ಗ್ರಾಹಕರಿಗೆ ಒದಗಿಸಿಕೊಟ್ಟಿದೆ. ದೂರುಗಳ ಇತ್ಯರ್ಥಮಾಡುವುದಕ್ಕೆ ಇಲ್ಲಿ ಅನುಸರಿಸಬೇಕಾದ ಪ್ರಕ್ರಿಯೆ ಬಹಳ ಸರಳವಾಗಿದೆ.

ಆದರೆ ಎಂ.ಆರ್.ಟಿ.ಪಿ. ಅಧಿನಿಯಮದ 12-ಎ ಖಂಡದಲ್ಲಿ ತಡೆಯಾಜ್ಞೆಯನ್ನು ಪ್ರದಾನ ಮಾಡುವ ಒಂದು ವಿಧಿ ಗ್ರಾಹಕರ ಸಂರಕ್ಷಣಾ ಅಧಿನಿಯಮದಲ್ಲಿ ಇಲ್ಲ. ಮೇಲಾಗಿ ಎಂ.ಆರ್.ಟಿ.ಪಿ. ನಿಬಂಧಗಳ ಕೆಳಗೆ ಹೊರಡಿಸಬಹುದಾದ 'ನಿಲ್ಲಿಸಿ ಮತ್ತು ಬಿಟ್ಟುಬಿಡಿ' ಆದೇಶಗಳನ್ನು ಗ್ರಾಹಕ ವೇದಿಕೆಗಳು ಹೊರಡಿಸಲಾಗುವುದಿಲ್ಲ.

ಯಾವುದೇ ಪರಿಬಂಧಕವಾದ, ಅನ್ಯಾಯವಾದ ಅಥವಾ ಏಕಸ್ವಾಮ್ಯ ವ್ಯಾಪಾರ ಪದ್ಧತಿಗಳನ್ನು ಕುರಿತು ತನಿಖೆ ಮಾಡಲು ಎಂ.ಆರ್.ಟಿ.ಪಿ. ಆಯೋಗಕ್ಕೆ ಅಧಿಕಾರ ವ್ಯಾಪ್ತಿ ಇದೆ; ಪರಿಬಂಧಕ ಮತ್ತು ಅನ್ಯಾಯವಾದ ವ್ಯಾಪಾರ ಆಚರಣೆಗಳ ಆಪಾದನೆಗಳು ಈ ಕೆಳಗೆ ಕಂಡ ಯಾವುದಾದರೂ ನಾಲ್ಕು ಮೂಲಗಳಲ್ಲೊಂದರಿಂದ ಬರಬಹುದು:

i. ಯಾವುದಾದರೂ ವ್ಯಾಪಾರ ಸಂಸ್ಥೆ, ಅಥವಾ ಯಾವನೇ ಗ್ರಾಹಕ ಅಥವಾ ಯಾವುದೇ ಸೋಂದಣೆಯಾದ ಗ್ರಾಹಕ ಸಂಸ್ಥೆ. (ಗ್ರಾಹಕನಾದಲ್ಲಿ ಅವನು ಗ್ರಾಹಕ ಸಂಸ್ಥೆಯ ಸದಸ್ಯನಾಗಿರಬೇಕೆಂದೇನೂ ಇಲ್ಲ) - ಇವರಿಂದ ಬಂದ ದೂರು.

ii. ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರಗಳಿಂದ ಕಳುಹಿಸಲ್ಪಟ್ಟ ದೂರುಗಳು

iii. ಮಹಾನಿರ್ದೇಶಕರಿಗೆ ಬಂದ ಅರ್ಜಿಗಳು (ಡೈರೆಕ್ಟರ್ ಜನರಲ್)

ಅಥವಾ

iv. ಆಯೋಗದ ಸ್ವಂತ ತಿಳುವಳಿಕೆ ಮತ್ತು ಸಮಾಚಾರ

ಈ ಕೆಳಗೆ ಕಂಡ ಪದ್ಧತಿಗಳು ಅನ್ಯಾಯವಾದ ವ್ಯಾಪಾರ ಪದ್ಧತಿಗಳೆಂದು ವಿಷದೀಕರಿಸಲಾಗಿದ್ದು ಆಯೋಗ ಅವುಗಳನ್ನು ವಿಚಾರಣೆ ಮಾಡಬಹುದಾಗಿದೆ:

1. ವಾಚಿಕವಾಗಿಯೋ, ಲಿಖಿತವಾಗಿಯೋ ಅಥವಾ ದೃಶ್ಯ ಮಾಧ್ಯಮದ ಮೂಲಕವಾಗಿಯೋ ಮಾಡಿದ ಯಾವುದೇ ಹೇಳಿಕೆಯು:

ಅ) ಸರಕುಗಳು ಒಂದು ಗೊತ್ತಾದ ಮಟ್ಟ, ಗುಣ, ಅಳತೆ, ಯೋಗ್ಯತೆ, ರಚನೆ, ಶೈಲಿ ಅಥವಾ ರೀತಿಯಲ್ಲಿ ಇವೆಯೆಂದು ಸುಳ್ಳಾಗಿ ಜಾಹೀರು ಮಾಡುವಂತೆ ಇದ್ದರೆ.

ಆ) ಸೇವೆಗಳು ಒಂದು ಗೊತ್ತಾದ ಮಟ್ಟ, ಗುಣ ಅಥವಾ ಯೋಗ್ಯತೆ ಉಳ್ಳದ್ದು ಎಂದು ಸುಳ್ಳಾಗಿ ನಿರೂಪಿಸಿದ್ದರೆ.

ಇ) ಪುನರಾವೃತ್ತಿಮಾಡಿದ, ಒಮ್ಮೆ ಉಪಯೋಗಿಸಿದ, ನವೀಕರಿಸಿದ, ಪುನರ್‌ಸ್ಥಿತಿಗೊಳಿಸಿದ, ಅಥವಾ ಹಳೆಯದಾದ ಸರಕುಗಳನ್ನು ಹೊಸದೆಂದು ಸುಳ್ಳಾಗಿ ನಿರೂಪಿಸಿದ್ದರೆ.

ಈ) ಸರಕುಗಳಿಗಾಗಲೀ, ಸೇವೆಗಳಿಗಾಗಲಿ, ಪ್ರಾಯೋಜನ, ಅನುಮೋದನೆ, ಕಾರ್ಯ ಸಾಮರ್ಥ್ಯ, ವಿಶೇಷಗುಣಗಳು, ಜೋಡಣೆಯ ಸಾಧನಗಳು, ಉಪಯೋಗಗಳು ಮತ್ತು ಪ್ರಯೋಜನಗಳು ಇಲ್ಲದಿದ್ದರೂ ಇದೆಯೆಂದು ಸುಳ್ಳಾಗಿ ನಿರೂಪಿಸಿದ್ದರೆ.

ಉ) ಮಾರಾಟಗಾರನಿಗಾಗಲೀ, ಸರಬರಾಜು ಮಾಡುವವನಿಗಾಗಲೀ, ಪ್ರಾಯೋಜನೆ, ಅಥವಾ ಅನುಮೋದನೆ, ಅಥವಾ ಮಾತೃಸಂಸ್ಥೆಯ ಸದಸ್ಯತ್ವ, ಇವುಗಳು ಇಲ್ಲದಿದ್ದರೂ ಇದೆಯೆಂದು ಸುಳ್ಳಾಗಿ ನಿರೂಪಿಸಿದ್ದರೆ.

ಊ) ಯಾವುದೇ ಸರಕುಗಳ ಅಥವಾ ಸೇವೆಗಳ ಆವಶ್ಯಕತೆ ಅಥವಾ ಉಪಯೋಗಗಳನ್ನು ಕುರಿತಂತೆ ಸುಳ್ಳಾದ ಇಲ್ಲವೇ ತಪ್ಪುದಾರಿಗೆಳೆಯುವ ನಿರೂಪಣೆಗಳನ್ನು ಮಾಡಿದ್ದರೆ.

ಎ) ಸರಿಯಾದ ಅಥವಾ ಸಾಕಾದಷ್ಟು ಪರೀಕ್ಷೆಮಾಡದೆ ಯಾವುದೇ ಒಂದು ಸರಕು ಅಥವಾ ಉತ್ಪನ್ನವು ಕಾರ್ಯ ಸಾಮರ್ಥ್ಯ ಉಳ್ಳದ್ದೆಂದೂ, ಕಾರ್ಯ ಸಾಫಲ್ಯವಾದದ್ದೆಂದೂ ದೀರ್ಘಕಾಲ ಬಾಳಿಕೆ ಬರುತ್ತದೆಂದೂ ಭರವಸೆ ಅಥವಾ ಖಾತರಿಯನ್ನು ಕೊಟ್ಟಿದ್ದರೆ; (ಒಂದು ವೇಳೆ ಇಂಥ ಭರವಸೆ ಅಥವಾ ಖಾತರಿಯನ್ನು ಯಥೋಚಿತವಾದ ಮತ್ತು ಯೋಗ್ಯವಾದ ಪರೀಕ್ಷೆಯ ನಂತರವೇ ಕೊಡಲಾಗಿದೆಯೆಂದು ಸಮರ್ಥನೆ ಮಾಡಿದ್ದರೆ ಅದನ್ನು ಸರಿ ಎಂದು ಸಾಧಿಸುವ ಹೊಣೆ ಹಾಗೆ ಸಮರ್ಥಿಸಿದವರ ಮೇಲೆಯೇ ಬೀಳುತ್ತದೆ).

ಏ) ಸಾರ್ವಜನಿಕರಿಗೆ ತಮ್ಮ ಸರಕು ಅಥವಾ ಸೇವೆಯ ಕುರಿತಾದ ಹಿರಿಮೆಯ ಬಗ್ಗೆ ಮಾಡಿದ ನಿರೂಪಣೆಯ ತಾತ್ಪರ್ಯವು:

i. ಆ ಸರಕಿನ ಅಥವಾ ಸೇವೆಯ ಕಾರ್ಯಕ್ಷಮತೆ ಅಥವಾ ಉಪಯುಕ್ತತೆ ಅಥವಾ ಬಾಳಿಕೆಯ ಬಗ್ಗೆ ಕೊಟ್ಟ ಭರವಸೆ ಅಥವಾ ಖಾತರಿಯಾಗಿದ್ದು

ಅಥವಾ

ii. ಒಂದು ವಸ್ತುವನ್ನು ಅಥವಾ ಅದರ ಬಿಡಿಭಾಗವನ್ನು ಬದಲಾಯಿಸಿಕೊಡುತ್ತೇವೆನ್ನುವ, ಸುಸ್ಥಿತಿಯಲ್ಲಿರುವ ಹಾಗೆ ನೋಡಿಕೊಳ್ಳುತ್ತೇವೆನ್ನುವ ಅಥವಾ ರಿಪೇರಿ ಮಾಡಿಕೊಡುತ್ತೇವೆ ಎನ್ನುವ ವಾಗ್ದಾನವಾಗಿದ್ದು, ಆ ರೀತಿಯ ಭರವಸೆಯ ಖಾತರಿಯ ವಾಗ್ದಾನದ ನಿರೂಪಣೆಯು ತಪ್ಪುದಾರಿಗೆ ಎಳೆಯುವಂಥದ್ದಾಗಿದ್ದು, ಅಥವಾ ಅವುಗಳನ್ನು ಈಡೇರಿಸಿ ಕೊಡುವ, ನಂಬಲರ್ಹವಾದ ಸಂಭವ ಇಲ್ಲದಿದ್ದರೆ.

ಐ) ಒಂದು ಉತ್ಪನ್ನ ಅಥವಾ ಸರಕು ಅಥವಾ ಸೇವೆ ಇವುಗಳನ್ನು ಸಾಮಾನ್ಯವಾಗಿ ಒದಗಿಸಲಾಗಿರುವ ಅಥವಾ ಒದಗಿಸಲಾಗುವ ಬೆಲೆಯನ್ನು ಕುರಿತು ಸಾರ್ವಜನಿಕರನ್ನು ಪರಿಣಾಮಕಾರಿಯಾಗಿ ತಪ್ಪುದಾರಿಗೆ ಎಳೆಯುವಂತಿದ್ದರೆ, ಈ ಉದ್ದೇಶಕ್ಕಾಗಿ ಯಾವ ಬೆಲೆಯನ್ನು ನಿರೂಪಣೆ ಮಾಡಲಾಯಿತೋ, ಆ ಬೆಲೆಯನ್ನು ಪ್ರಸ್ತುತ ಮಾರ್ಕೆಟ್ಟಿನಲ್ಲಿ ಮಾರಾಟಗಾರನಾಗಲೀ ಅಥವಾ ಸರಬರಾಜುದಾರನಾಗಲೀ ಆ ಉತ್ಪನ್ನ/ಸರಕು/ಸೇವೆಯನ್ನು ಸಾಮಾನ್ಯವಾಗಿ ಒದಗಿಸಿದ ಅಥವಾ ಒದಗಿಸುತ್ತಿರುವ ಬೆಲೆಯೆಂದೇ ಪರಿಗಣಿಸಲಾಗುತ್ತದೆ. ಇದಕ್ಕೆ ಅಪವಾದವಾಗಿ ಯಾವ ವ್ಯಕ್ತಿ ಆ ನಿರೂಪಣೆಯನ್ನು ಮಾಡಿದನೋ ಅಥವಾ ಯಾವ ವ್ಯಕ್ತಿಯ ಪರವಾಗಿ ಆ ನಿರೂಪಣೆಯನ್ನು ಮಾಡಲಾಯಿತೋ

ಆ ಬೆಲೆಗೇ ಆ ಸರಕು/ಸೇವೆಯನ್ನು ಒದಗಿಸಲಾಗಿದೆಯೆಂದು ಸ್ಪಷ್ಟವಾಗಿ ನಿರ್ದಿಷ್ಟಪಡಿಸಿರಬೇಕು.

ಒ) ಇನ್ನೊಬ್ಬ ವ್ಯಕ್ತಿಯ ಸರಕುಗಳನ್ನೋ ಅಥವಾ ಸೇವೆಯನ್ನೋ ಅಥವಾ ವ್ಯಾಪಾರವನ್ನೋ ಹೀಯಾಳಿಸುವುದಕ್ಕೋಸ್ಕರ ಸುಳ್ಳಾದ ಅಥವಾ ತಪ್ಪುದಾರಿಗೆಳೆಯುವ ಸುದ್ದಿಯನ್ನು ಹರಡಿದರೆ

2. ಸರಕುಗಳನ್ನೋ, ಸೇವೆಯನ್ನೋ ಅಗ್ಗದ ಬೆಲೆಯಲ್ಲಿ ಒದಗಿಸುವ ಉದ್ದೇಶವಿಲ್ಲದಿದ್ದರೂ, ಅಥವಾ ವ್ಯಾಪಾರದ ಪ್ರಮಾಣ ಮತ್ತು ಸ್ವರೂಪ ಅಥವಾ ವ್ಯಾಪಾರ ಮಾಡಲಾಗುತ್ತಿರುವ ಮಾರುಕಟ್ಟೆಯ ಸ್ವಭಾವ, ಜಾಹಿರಾತಿನ ಪ್ರಮಾಣ ಇವುಗಳನ್ನು ಗಮನಿಸಿದಾಗ ಅವುಗಳಿಗೆ ಸಮಂಜಸವಾದ ಅವಧಿ ಮತ್ತು ಪ್ರಮಾಣದಲ್ಲಿ ಆ ಬೆಲೆಯಲ್ಲಿ ಒದಗಿಸುವ ಸಂಭವ ಇಲ್ಲದೇ ಇದ್ದರೂ, ಹಾಗೆ ಒದಗಿಸುವುದಾಗಿ ವೃತ್ತಪತ್ರಿಕೆಯಲ್ಲೋ ಅಥವಾ ಇತರ ಮಾಧ್ಯಮದಲ್ಲೋ ಜಾಹೀರಾತನ್ನು ಪ್ರಸಿದ್ಧಿಸುವುದು.

3.ಅ) ಉಡುಗೊರೆಗಳನ್ನೂ ಬಹುಮಾನಗಳನ್ನೂ ಅಥವಾ ಇತರ ವಸ್ತುಗಳನ್ನು ಕೊಡುವ ಇಂಗಿತವಿಲ್ಲದಿದ್ದರೂ ಕೊಡುತ್ತೇವೆ ಎಂದು ಪ್ರಸ್ತಾಪಿಸುವುದೂ ಅಥವಾ ಕೊಡುತ್ತೇವೆ ಎನ್ನಲಾದ ವಸ್ತುಗಳ ಬೆಲೆಯನ್ನು ಪೂರ್ತಿಯಾಗಲೀ ಅಥವಾ ಭಾಗಶಃ ಮಾರಾಟಕ್ಕಿಟ್ಟಿರುವ ವಸ್ತುವಿನ ಬೆಲೆಯಲ್ಲಿ ಮುಂಚೆಯೇ ಸೇರಿಸಿ ಉಚಿತವಾಗಿ ಕೊಡಲಾಗುತ್ತಿದೆ ಎಂಬ ಭಾವನೆಯನ್ನುಂಟು ಮಾಡುವುದು.

ಆ) ಯಾವುದೇ ವಸ್ತುವಿನ ಮಾರಾಟ, ಬಳಕೆ, ಸರಬರಾಜು, ವ್ಯಾಪಾರ ಕುದುರಿಸುವುದು, ಇವುಗಳಿಗೆ ಪ್ರತ್ಯಕ್ಷವಾಗಿಯೋ, ಪರೋಕ್ಷವಾಗಿಯೋ ಒತ್ತಾಸೆಕೊಡಲು ಸ್ಪರ್ಧೆ, ಲಾಟರಿ, ಜೂಜು ಇಲ್ಲ ಕೌಶಲದ ಆಟವನ್ನು ವ್ಯವಸ್ಥೆಮಾಡುವುದು.

4. ಸಕ್ಷಮ ಪ್ರಾಧಿಕಾರವು ಗ್ರಾಹಕರಿಗೆ ಅಪಾಯವಾಗದಂತೆ ಇಲ್ಲವೇ ಅಪಾಯವಾಗಬಹುದಾದ ಸಂಭವ ಕಡಿಮೆ ಮಾಡುವುದಕ್ಕಾಗಿ ನಿಗದಿಪಡಿಸಿದ ಗುಣಮಟ್ಟಗಳಿಗೆ, ಅಂದರೆ ನಿರ್ವಹಣಾ ಸಾಮರ್ಥ್ಯ, ಸಂಯೋಜನೆ, ವಿನ್ಯಾಸ, ರಚನೆ, ಮೆರಗು, ಪ್ಯಾಕಿಂಗ್ ಇವುಗಳಿಗೆ ಅನುಸಾರವಾಗಿಲ್ಲ ಎಂದು ಗೊತ್ತಿದ್ದರೂ, ಹಾಗಿಲ್ಲ ಎಂದು ನಂಬುವುದಕ್ಕೆ ಕಾರಣಗಳಿದ್ದರೂ, ಗ್ರಾಹಕರ ಉಪಯೋಗಕ್ಕಾಗಿ ಉದ್ದೇಶಿತವಾದ ಸರಕುಗಳು ಹಾಗೂ ಗ್ರಾಹಕರು ಉಪಯೋಗಿಸುವ ಸಂಭವ ಇರುವ ಸರಕುಗಳನ್ನು ಮಾರಾಟ ಅಥವಾ ಸರಬರಾಜು ಮಾಡುವುದು.

5. ಸರಕುಗಳ ಬೆಲೆಯನ್ನು ಏರಿಸುವ ಅಥವಾ ಏರಿಸುವ ಉದ್ದೇಶವನ್ನಿಟ್ಟುಕೊಂಡು, ಸರಕುಗಳನ್ನು ಅತಿಯಾಗಿ ದಾಸ್ತಾನು ಮಾಡುವುದು, ನಾಶಪಡಿಸುವುದು, ಮಾರಾಟಮಾಡಲು ನಿರಾಕರಿಸುವುದು,

ಮಾರಾಟ ಮಾಡಲು ದೊರಕಿಸುವುದಕ್ಕೆ ನಿರಾಕರಿಸುವುದು, ಹಾಗೆಯೇ ಸೇವೆಯ ಬೆಲೆಯನ್ನು ಏರಿರುವುದಕ್ಕಾಗಿ ಸೇವೆ ನೀಡಿಕೆಯನ್ನು ನಿರಾಕರಿಸುವುದು.

ಎಂ.ಆರ್.ಟಿ.ಪಿ. ಅಧಿನಿಯಮವನ್ನು ಇತ್ತೀಚೆಗೆ ತಿದ್ದುಪಡಿ ಮಾಡಲಾಗಿದೆ. ಈ ತಿದ್ದುಪಡಿಯು ಆಯೋಗಕ್ಕೆ ಹೆಚ್ಚಿನ ಶಕ್ತಿ ಸಾಮರ್ಥ್ಯವನ್ನು ತಂದುಕೊಟ್ಟಿದೆ. ಮೊದಲ ಬಾರಿಗೆ, ಸಾರ್ವಜನಿಕ ಕ್ಷೇತ್ರದ ಉದ್ಯಮಗಳನ್ನು ಎಂ.ಆರ್.ಟಿ.ಪಿ. ಅಧಿನಿಯಮದ ದೃಷ್ಟಿವಲಯದೊಳಗೆ ತರಲಾಗಿದೆ.

ಪರಿಬಂಧಕ ವ್ಯಾಪಾರ ಆಚರಣೆಗಳಲ್ಲಿ ತೊಡಗಿರುವ ಕಂಪನಿಗಳ ವಿರುದ್ಧ ತಾತ್ಕಾಲಿಕ ಪ್ರತಿಬಂಧಕಾಜ್ಞೆಯನ್ನು ಕೊಡುವ ಅಧಿಕಾರವನ್ನು ಆಯೋಗಕ್ಕೆ ಪ್ರದಾನಮಾಡಲಾಗಿದೆ. ಇದಕ್ಕೆ ಮುಂಚಿನ ನಿಯಮದಲ್ಲಿ ನುಸುಳಿಕೊಳ್ಳಲು ಒಂದು ಕಂಡಿಯಿತ್ತು. ಅದೆಂದರೆ, ಎಂ.ಆರ್.ಟಿ.ಪಿ.ಯು ತಪ್ಪಿತಸ್ತ ವ್ಯಕ್ತಿ ಅಥವಾ ಸಂಸ್ಥೆಯ ವಿರುದ್ಧ ತನಿಖಾ ಕ್ರಮವನ್ನು ಪ್ರಾರಂಭ ಮಾಡದೇ ಪ್ರತಿಬಂಧಕಾಜ್ಞೆಯನ್ನು ಹೊರಡಿಸಕೂಡದೆಂದು ಉಚ್ಚ ನ್ಯಾಯಾಲಯ ತಡೆ ಆಜ್ಞೆಯನ್ನು ಕೊಡಬಹುದಾಗಿತ್ತು. ಈಗ ಅಧಿನಿಯಮಕ್ಕೆ ತಿದ್ದುಪಡಿಯ ಮೂಲಕ ಒಂದು ವಿಷದೀಕರಣವನ್ನು ಸೇರಿಸಲಾಗಿದೆ. ಇದರ ಪ್ರಕಾರ ತಪ್ಪಿತಸ್ತನಿಗೆ ಮುಂದಾಗಿ ತಿಳುವಳಿಕೆಯನ್ನು ಕೊಡದೆ, ತಾತ್ಕಾಲಿಕ ಪ್ರತಿಬಂಧಕಾಜ್ಞೆಯನ್ನು ಪ್ರದಾನ ಮಾಡಲು ಎಂ.ಆರ್.ಟಿ.ಪಿ.ಗೆ ಅನುಮತಿ ನೀಡಲಾಗಿದೆ.

ಸ್ಥಿರ ಆಸ್ತಿಯನ್ನು ಅಭಿವೃದ್ಧಿ ಮಾಡುವವರನ್ನು ಮತ್ತು ಚಿಟ್ ಫಂಡುಗಳನ್ನು ನಡೆಯಿಸುವವರನ್ನೂ ಸಹ ಈ ಅಧಿನಿಯಮದ ಅಧಿಕಾರ ವ್ಯಾಪ್ತಿಗೆ ಒಳಪಡಿಸಲಾಗಿದೆ. ಸ್ಥಿರಸಂಪದದ ಅಭಿವೃದ್ಧಿ ಮಾಡುವವರ ವಿಷಯದಲ್ಲಿ ಆಯೋಗಕ್ಕೆ ಪೂರ್ವಾನ್ವಯವಾಗಿ ಅಧಿಕಾರ ವ್ಯಾಪ್ತಿಯನ್ನು ಕೊಡಲಾಗಿದ್ದು ಹತ್ತು ವರ್ಷಗಳ ಹಿಂದೆ ಅಥವಾ ಅದಕ್ಕೂ ಹಳೆಯದಾದ ಅನ್ಯಾಯ ವ್ಯಾಪಾರ ಪದ್ಧತಿಗಳನ್ನು ಆಯೋಗವು ತನಿಖೆ ಮಾಡಬಹುದಾಗಿದೆ. ಅನ್ಯಾಯವಾದ ವ್ಯಾಪಾರ ಪದ್ಧತಿಗಳಿಗೆ ಸಂಬಂಧಿಸಿದ ಹಾಗೆ ನಿಯಂತ್ರಣ ವಿಧಿಗಳನ್ನು ಎಂ.ಆರ್.ಟಿ.ಪಿ. ಅಧಿನಿಯಮದಲ್ಲಿ ಅಳವಡಿಸಿದ ಮೇಲೆ ಕಳೆದ ಹಲವು ವರ್ಷಗಳ ಅವಧಿಯಲ್ಲಿ, ಈ ಕ್ಷೇತ್ರದಲ್ಲಿ ಪ್ರಕರಣ ಕಾನೂನು ಅಗಾಧವಾಗಿ ಬೆಳೆದಿದೆ. ಆಯೋಗದ ಮುಂದೆ ಜರುಗುವ ನಡವಳಿಕೆಗಳು ಸಂಪೂರ್ಣವಾಗಿ ನ್ಯಾಯಿಕವಾಗಿದ್ದು ಅದರ ತೀರ್ಮಾನದ ಮೇಲೆ ನೇರವಾಗಿ ಸರ್ವೋಚ್ಚ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಬಹುದು. ವಿಚಾರಣೆಯನ್ನು ಆಯೋಗದ ಮುಂದೆ ದಾಖಲು ಮಾಡುವ ಪರಿ ಸಾಧಾರಣವಾಗಿ ನ್ಯಾಯಾಲಯದ ನಡವಳಿಕೆಗಳನ್ನೇ ಬಹುಮಟ್ಟಿಗೆ ಹೋಲುತ್ತದೆ ಮತ್ತು ತನಿಖೆಯ ಕಾಲದಲ್ಲಿ ಅನುಸರಿಸಲಾಗುವ ನಡವಳಿಕೆಗಳು ಸ್ವಾಭಾವಿಕ ನ್ಯಾಯದ ನಿಯಮಗಳಿಗನುಸಾರವಾಗಿಯೇ ಇರುತ್ತವೆ. ವಿವರವಾದ ನಿಬಂಧನೆಗಳು ಪ್ರಕ್ರಿಯೆಯನ್ನು ನಿಗದಿಪಡಿಸಿವೆ. ಸುದೀರ್ಘವಾದ ವಾಚಿಕವಾದ ವಿವಾದವಲ್ಲದೆ ಲಿಖಿತವಾದ ವಾದ ವಿವಾದವನ್ನೂ ಸಲ್ಲಿಸಬಹುದು. ವಿಚಾರಣೆ ಪೂರ್ವ ನಡವಳಿಕೆಗಳೇನೂ ಇಲ್ಲ. ಆದರೂ ಮಹಾ ನಿರ್ದೇಶಕರ ಮುಂದೆ ತನಿಖೆ

ನಡೆಯುತ್ತಿರುವಾಗ ಕೆಲವು ಪ್ರಕರಣಗಳು ಪರಸ್ಪರರ ಒಪ್ಪಿಗೆಯಿಂದ ಇತ್ಯರ್ಥವಾಗಬಹುದು.

ಅದರ ಆದೇಶಗಳನ್ನು ಉಲ್ಲಂಘಿಸಿದರೆ, ನ್ಯಾಯಾಲಯ ನಿಂದನೆ ನಡವಳಿಕೆಗಳನ್ನು ಜರುಗಿಸಲು ಆಯೋಗಕ್ಕೆ ನಿರ್ದಿಷ್ಟವಾದ ಅಧಿಕಾರ ಕೊಡಲಾಗಿದೆ.

# ಗ್ರಾಹಕರ ರಕ್ಷಣಾ ಆಯೋಗ

1969ರಲ್ಲಿ ಭಾರತದ ಪಾರ್ಲಿಮೆಂಟ್ ಏಕಸ್ವಾಮ್ಯ ಮತ್ತು ಪರಿಬಂಧಕ ವ್ಯಾಪಾರ ಪದ್ಧತಿಗಳ ಅಧಿನಿಯಮವನ್ನು ಶಾಸನ ಮಾಡಿ ತನ್ಮೂಲಕ ಏಕಸ್ವಾಮ್ಯ ಆಯೋಗವನ್ನು ಸ್ಥಾಪಿಸಿ ಅದಕ್ಕೆ ಏಕಸ್ವಾಮ್ಯವಾದ ಮತ್ತು ಪರಿಬಂಧಕ ವ್ಯಾಪಾರ ಪದ್ಧತಿಗಳ ಕುರಿತಾದ ದೂರುಗಳನ್ನು ವಿಚಾರಣೆ ಮಾಡಲು ಅಧಿಕಾರ ಕೊಟ್ಟಿತು. ನಂತರ 1984ರ ತಿದ್ದುಪಡಿ ಅಧಿನಿಯಮದ ಮೂಲಕ ಅನ್ಯಾಯವಾದ ವ್ಯಾಪಾರದ ಪದ್ಧತಿಗಳನ್ನು ಕೂಡ ಅದರ ವಿಚಾರಣೆಯ ವ್ಯಾಪ್ತಿಗೆ ಒಳಪಡಿಸಿತು. ಹೇಗಾದರೂ ಆಯೋಗಕ್ಕೆ ಕೊಟ್ಟ ಅಧಿಕಾರ ಗ್ರಾಹಕರ ನೇರ ರಕ್ಷಣೆಗೆ ಸಾಕಾಗುವುದಿಲ್ಲವೆಂದು ಭಾವಿಸಲಾಯಿತು. ಏಕೆಂದರೆ ಅದರ ಮುಖ್ಯ ಉದ್ದೇಶ ಸ್ಪರ್ಧೆ, ಪೈಪೋಟಿಯನ್ನು ನಿಯಂತ್ರಣಗೊಳಿಸುವುದಾಗಿದ್ದು, ವ್ಯಾಪಾರದಲ್ಲಿ ನ್ಯಾಯವಾದ ನಡವಳಿಕೆಗೆ ಅದು ಒತ್ತಾಸೆ ಕೊಡುತ್ತದೆ ಎಂದು ಆಶಿಸಲಾಗಿತ್ತು. ಇದರ ಪರಿಣಾಮ ಗ್ರಾಹಕರ ಮಟ್ಟದವರೆಗೂ ಇಳಿದು ಬರುತ್ತದೆಂದೂ ನಿರೀಕ್ಷಿಸಲಾಗಿತ್ತು. ಹೀಗಾಗಿ, ಗ್ರಾಹಕರ ಹಿತಾಸಕ್ತಿಗಳ ಉತ್ತಮ ರಕ್ಷಣೆಗಾಗಿ ಶಾಸನವೊಂದನ್ನು ಅನುಮೋದಿಸಲಾಯಿತು. ಈ ಅಧಿನಿಯಮದ ಕೆಳಗೆ ಗ್ರಾಹಕರ ದೂರುಗಳನ್ನು ಇತ್ಯರ್ಥಪಡಿಸಲು ಮೂರು ಹಂತಗಳನ್ನೊಳಗೊಂಡ ಒಂದು ವ್ಯವಸ್ಥೆಯನ್ನು ರೂಪಿಸಲಾಯಿತು.

i. *ಜಿಲ್ಲಾಮಟ್ಟದ ವೇದಿಕೆಗಳು:* ಕೇಂದ್ರ ಸರ್ಕಾರದ ಅನುಮೋದನೆಯನ್ನು ಪಡೆದುಕೊಂಡು, ರಾಜ್ಯ ಸರ್ಕಾರಗಳು ರಾಜ್ಯದ ಪ್ರತಿಯೊಂದು ಜಿಲ್ಲೆಯಲ್ಲೂ ಈ ವೇದಿಕೆಗಳನ್ನು ಸ್ಥಾಪಿಸಿವೆ.

ii. *ರಾಜ್ಯ ಆಯೋಗಗಳು:* ಕೇಂದ್ರ ಸರ್ಕಾರದ ಪೂರ್ವಭಾವಿ ಅನುಮೋದನೆಯಿಂದ ಪ್ರತಿ ರಾಜ್ಯವೂ ರಾಜ್ಯ ಆಯೋಗಗಳನ್ನು ಸ್ಥಾಪಿಸಿದೆ.

iii. *ರಾಷ್ಟ್ರೀಯ ಆಯೋಗ:* ಸಮಗ್ರ ಭಾರತಕ್ಕಾಗಿ ರಾಷ್ಟ್ರೀಯ ಗ್ರಾಹಕ ದೂರುಗಳ ಪರಿಹಾರ ಆಯೋಗವನ್ನು ಕೇಂದ್ರ ಸರ್ಕಾರ ನವದೆಹಲಿಯಲ್ಲಿ ಸ್ಥಾಪಿಸಿದೆ.

ಸರಕುಗಳ, ಸೇವೆಗಳ ಅಥವಾ ಪರಿಹಾರ ಧನದ ಕೇಳಿಕೆಯ ಮೌಲ್ಯ ಒಂದು ಲಕ್ಷ ರೂಪಾಯಿಗಳಿಗೆ ಸೀಮಿತವಾದ ಗ್ರಾಹಕರ ಎಲ್ಲ ದೂರುಗಳನ್ನು ವಿಚಾರಣೆಮಾಡಲು ಜಿಲ್ಲಾ ಆಯೋಗಕ್ಕೆ ಅಧಿಕಾರ ವ್ಯಾಪ್ತಿ ಇದೆ. ಸರಕುಗಳ ಅಥವಾ ಸೇವೆಯ ಅಥವಾ ಪರಿಹಾರಧನದ ಕೇಳಿಕೆಯ ಮೌಲ್ಯ ಒಂದು ಲಕ್ಷ ರೂಪಾಯಿಗಳನ್ನು ಮೀರಿದ್ದು, ಹತ್ತು ಲಕ್ಷ ರೂಪಾಯಿಗಳ ಒಳಗೆ ಇದ್ದರೆ ಅಂಥ ದೂರುಗಳನ್ನು ರಾಜ್ಯ ಆಯೋಗ ವಿಚಾರಣೆ ಮಾಡಲು ಸ್ವೀಕರಿಸುತ್ತದೆ; ಯಾವುದೇ ಜಿಲ್ಲಾ ವೇದಿಕೆಯ ಆಜ್ಞೆಗಳ ಮೇಲಿನ ಮೇಲ್ಮನವಿಯನ್ನು ಅದು ವಿಚಾರಣೆ ಮಾಡುತ್ತದೆ. ಇದಲ್ಲದೆ ಅದಕ್ಕೆ ಪುನರ್ವಿಮರ್ಶೆಯ ಅಧಿಕಾರವೂ ಇದೆ.

ಜಿಲ್ಲಾ ವೇದಿಕೆಯೊಂದು ತನ್ನಲ್ಲಿ ನಿಹಿತವಾಗಿಲ್ಲದ ಅಧಿಕಾರ ವ್ಯಾಪ್ತಿಯನ್ನು ಚಲಾಯಿಸಿದೆ ಎಂದೋ ಅಥವಾ ನಿಹಿತವಾಗಿರುವ ಅಧಿಕಾರ ವ್ಯಾಪ್ತಿಯನ್ನು ಚಲಾಯಿಸುವಲ್ಲಿ ಸೋತಿದೆ ಎಂದೋ ಅಥವಾ ಹಾಗೆ ಚಲಾಯಿಸುವಾಗ ಕಾನೂನು

ಬಾಹಿರವಾಗಿ ಅಥವಾ ಸಾರಭೂತವಾದ ಕ್ರಮ ದೋಷದಿಂದ ವರ್ತಿಸಿದೆಯೆಂದೋ ರಾಜ್ಯ ಆಯೋಗಕ್ಕೆ ಮನವರಿಕೆಯಾದರೆ, ಆಗ ಅದು ಜಿಲ್ಲಾ ವೇದಿಕೆಯಿಂದ ದಾಖಲೆಗಳನ್ನು ಬರಮಾಡಿಕೊಂಡು ವಿಚಾರಣೆ ಇನ್ನೂ ನಡೆಯುತ್ತಿರುವ ಅಥವಾ ವಿಚಾರಣೆ ಮುಗಿದು ತೀರ್ಮಾನ ಕೊಡಲ್ಪಟ್ಟಿರುವ ಯಾವುದೇ ಗ್ರಾಹಕರ ಅರ್ಜಿಯಮೇಲೆ ಸೂಕ್ತ ಕಂಡ ಆದೇಶಗಳನ್ನು ಹೊರಡಿಸಬಹುದು.

ಸರಕುಗಳ, ಸೇವೆಯ ಅಥವಾ ಸೇವೆಯ ಪರಿಹಾರಧನದ ಕೇಳಿಕೆಯು ಹತ್ತು ಲಕ್ಷ ರೂಪಾಯಿಗಳಿಗಿಂತ ಅಧಿಕವಾಗಿರುವ ದೂರುಗಳನ್ನು ವಿಚಾರಣೆಗೆ ಸ್ವೀಕರಿಸುವುದಕ್ಕೆ ರಾಷ್ಟ್ರೀಯ ಆಯೋಗಕ್ಕೆ ಮೂಲ ಅಧಿಕಾರವ್ಯಾಪ್ತಿ ಇದೆ. ರಾಜ್ಯ ಆಯೋಗ ಕೊಟ್ಟ ಯಾವುದೇ ಆದೇಶದಿಂದ ನೊಂದ ವ್ಯಕ್ತಿಯ ಮೇಲ್ಮನವಿಯನ್ನು ವಿಚಾರಣೆಮಾಡುವ ಅಧಿಕಾರ ಮತ್ತು ಪುನರ್ವಿಮರ್ಶೆಯ ಅಧಿಕಾರವೂ ಅದಕ್ಕೆ ಇದೆ.

ರಾಷ್ಟ್ರೀಯ ಆಯೋಗದಿಂದ ಬಂದ ಮೇಲ್ಮನವಿಗಳನ್ನು ಸರ್ವೋಚ್ಚ ನ್ಯಾಯಾಲಯಕ್ಕೆ ನೇರವಾಗಿ ಕೊಂಡುಹೋಗಲು ಅಧಿನಿಯಮದ 23ನೇ ಖಂಡದ ಕೆಳಗೆ ಅವಕಾಶ ಕಲ್ಪಿಸಲಾಗಿದೆ. ಈ ಮೇಲ್ಮನವಿಯನ್ನು ಆದೇಶದ ತಾರೀಖಿನಿಂದ ಮೂವತ್ತು ದಿವಸಗಳ ಒಳಗೆ ಸಲ್ಲಿಸಬೇಕು. ಗ್ರಾಹಕರ ವೇದಿಕೆಗಳ ಗ್ರಾಹಕರಿಗೆ ಉಪಯುಕ್ತವಾದ ಸೇವೆಯನ್ನು ಕೊಡುತ್ತವೆ. ಸರ್ಕಾರಗಳು, ಬ್ಯಾಂಕುಗಳು, ವಿದ್ಯುಚ್ಛಕ್ತಿ ಮಂಡಳಿಗಳು ಸಾರ್ವಜನಿಕ ಉದ್ದಿಮೆಗಳು, ಗೃಹಮಂಡಳಿಗಳು, ಜೀವ ವಿಮಾ ನಿಗಮ, ಕಟ್ಟಡ ಕಟ್ಟುವವರು, ಕೈಗಾರಿಕಾ ಸಂಸ್ಥೆಗಳು, ಖಾಸಗಿ ಉದ್ದಿಮೆಗಳು, ಇವುಗಳೆಲ್ಲದರ ವಿರುದ್ಧ ದೋಷಯುಕ್ತ ಸೇವೆಗಳಿಗಾಗಿ ದೂರುಗಳನ್ನು ದಾಖಲು ಮಾಡಬಹುದು. ಏಕಸ್ವಾಮ್ಯ ಆಯೋಗದ ವ್ಯಾಪ್ತಿ ಮತ್ತು ಗ್ರಾಹಕರ ವೇದಿಕೆಗಳ ಅಧಿಕಾರ ವ್ಯಾಪ್ತಿ ಸ್ವಲ್ಪಮಟ್ಟಿಗೆ ಒಂದರಮೇಲೊಂದು ಪ್ರಸರಿಸುತ್ತದೆ. ಆದರೆ ಗ್ರಾಹಕರ ವೇದಿಕೆಗಳ ಮುಖ್ಯ ಅನುಕೂಲವೆಂದರೆ, ಭಾರತದ ಎಲ್ಲೆಡೆಯಲ್ಲೂ ಅವುಗಳಿಂದ ಪರಿಹಾರ ದೊರಕಿಸಿಕೊಳ್ಳಬಹುದು. ಆದರೆ ಏಕಸ್ವಾಮ್ಯ ಆಯೋಗ ನವದೆಹಲಿಯಲ್ಲಿ ಮಾತ್ರ ಇದೆ. ಸರಿಯಾಗಿ ಉಪಯೋಗಿಸಿಕೊಂಡಲ್ಲಿ ಮತ್ತು ನಿರ್ವಹಿಸಿದಲ್ಲಿ ಗ್ರಾಹಕರ ವೇದಿಕೆಯು ಬಹುಶಕ್ತಿಶಾಲಿಯಾದ ಮತ್ತು ಮುಖ್ಯವಾದ ವೇದಿಕೆಯಾಗಬಲ್ಲುದು. ಅದು ಸಾಕ್ಷ್ಯ ಮತ್ತು ವ್ಯವಹಾರ ಪ್ರಕ್ರಿಯೆಗಳ ತೊಡಕಾದ ನಿಯಮಗಳಿಗೆ ಬದ್ಧವಾಗಿಲ್ಲ. ನ್ಯಾಯಾಲಯ ಶುಲ್ಕ ಕೊಡಬೇಕಾಗಿಲ್ಲದ ಕಾರಣ

---

ಟಿಪ್ಪಣಿ: 1986ರ ಗ್ರಾಹಕರ ಸಂರಕ್ಷಣಾ ಅಧಿನಿಯಮವನ್ನು 18.6.1993ರಿಂದ ಜಾರಿಗೆ ಬರುವ ಹಾಗೆ ಗ್ರಾಹಕರ ಸಂರಕ್ಷಣಾ ತಿದ್ದುಪಡಿ ಮಾಡಲಾಗಿದೆ. ಇದರಲ್ಲಿ ಮಾಡಿರುವ ಮುಖ್ಯವಾದ ಬದಲಾವಣೆಯೆಂದರೆ, ಜಿಲ್ಲಾ ವೇದಿಕೆ, ರಾಜ್ಯ ಆಯೋಗ ಮತ್ತು ರಾಷ್ಟ್ರೀಯ ಆಯೋಗ ಇವುಗಳ ಅಧಿಕಾರ ವ್ಯಾಪ್ತಿಯ ಬದಲಾವಣೆಯಾಗಿದೆ. ಜಿಲ್ಲಾ ವೇದಿಕೆಯ ಅಧಿಕಾರ ವ್ಯಾಪ್ತಿಯನ್ನು 1 ಲಕ್ಷ ರೂ.ನಿಂದ 5 ಲಕ್ಷ ರೂ.ಗಳಿಗೂ ರಾಜ್ಯ ಆಯೋಗದ ಅಧಿಕಾರ ವ್ಯಾಪ್ತಿಯನ್ನು 10 ಲಕ್ಷದಿಂದ 20 ಲಕ್ಷ ರೂ.ಗಳಿಗೂ ಹೆಚ್ಚಿಸಲಾಗಿದೆ. ರಾಷ್ಟ್ರೀಯ ಆಯೋಗದ ಮೂಲ ಅಧಿಕಾರ ವ್ಯಾಪ್ತಿಯನ್ನು ಹಾಗೆಯೇ ಉಳಿಸಿಕೊಳ್ಳಲಾಗಿದೆಯಾದರೂ, ಅದು ಈಗ ತನ್ನ ಮೂಲ ಅಧಿಕಾರವ್ಯಾಪ್ತಿಯಲ್ಲಿ 20 ಲಕ್ಷರೂ.ಗೆ ಹೆಚ್ಚಿನ ವಿಷಯಗಳನ್ನು ವಿಚಾರಣೆಗೆ ತೆಗೆದುಕೊಳ್ಳಬಹುದು. ರಾಷ್ಟ್ರೀಯ ಆಯೋಗದ ಇತರ ಮೇಲ್ಮನವಿ ಅಧಿಕಾರ ವ್ಯಾಪ್ತಿಯಲ್ಲಿ ಬದಲಾವಣೆಯೇನೂ ಇಲ್ಲ.

ಸುಲಭ ಖರ್ಚಿನಲ್ಲಿ ಪರಿಹಾರ ಸಿಗುವುದೂ ಅಲ್ಲದೆ, ಶೀಘ್ರವಾದ ಪರಿಹಾರವೂ ಗ್ರಾಹಕರ ವೇದಿಕೆಯಿಂದ ದೊರಕುತ್ತದೆ. ಯಾವುದೇ ವ್ಯಕ್ತಿ ಅಥವಾ ಗ್ರಾಹಕರ ಸಂಸ್ಥೆ, ಗ್ರಾಹಕರುಗಳ ಪರವಾಗಿ ಸಾರ್ವತ್ರಿಕ ದೂರನ್ನು ವೇದಿಕೆಗೆ ಕೊಂಡು ಹೋಗಬಹುದು.

ಇತ್ತೀಚಿನ ವರ್ಷಗಳಲ್ಲಿ ಆಯೋಗವು ಅತಿಮುಖ್ಯವಾದ ಮತ್ತು ವಿವಿಧ ವಿಷಯಗಳ ಮೇಲೆ ನೀಡಿದ ತೀರ್ಮಾನಗಳು ಜನಸಾಮಾನ್ಯರಿಗೆ, ಅಂದರೆ, ಉತ್ಪನ್ನಗಳ ಗ್ರಾಹಕರಿಗೆ ರೈಲ್ವೆ ಮತ್ತು ವಿಮಾನ ಪ್ರಯಾಣಿಕರಿಗೆ, ವಿವಿಧ ಸರಕುಗಳನ್ನು ಕೊಳ್ಳುವವರಿಗೆ, ವಾಹನಗಳನ್ನು ಉಪಯೋಗಿಸುವವರಿಗೆ ಮತ್ತು ಗ್ರಾಹಕ ಸೇವೆಗಳನ್ನು ಪಡೆಯುವವರಿಗೆ ವರವಾಗಿ ಪರಿಣಮಿಸಿದೆ.

# ಸೇನಾ ನ್ಯಾಯಾಲಯಗಳು ನಡೆಸುವ ವಿಚಾರಣೆ

ಸ್ಥಲ ಸೇನಾ ಅಧಿನಿಯಮ 1950, ವಾಯು ಸೇನಾ ಅಧಿನಿಯಮ 1950, ಮತ್ತು ನೌಕಾ ಸೇನಾ ಅಧಿನಿಯಮ 1957 ಇವುಗಳ ಕೆಳಗೆ ಬರುವ ಯಾವುದೇ ಅಪರಾಧವನ್ನು ಸಂವಿಧಾನದ 136(2)ನೆಯ ಅನುಚ್ಛೇದದ ಅನ್ವಯ ಸರ್ವೋಚ್ಚನ್ಯಾಯಾಲಯದ ಅಧಿಕಾರ ವ್ಯಾಪ್ತಿಯಿಂದಲೂ ಮತ್ತು 227ನೆಯ ಅನುಚ್ಛೇದದ ಅನ್ವಯ ಉಚ್ಚ ನ್ಯಾಯಾಲಯದ ಅಧಿಕಾರ ವ್ಯಾಪ್ತಿಯಿಂದಲೂ ಹೊರತುಪಡಿಸಲಾಗಿದೆ. ಇದೇ ರೀತಿ, ಈ ಅಪರಾಧಗಳನ್ನು ಮಾಡಿದ್ದಾರೆಂದು ಆಪಾದನೆಗೊಳಗಾದ ರಕ್ಷಣಾ ಸೇವೆಯ ನೌಕರರುಗಳ ವಿಚಾರಣೆಯನ್ನು ಮಾಡುವುದಕ್ಕೆ ದಂಡಸಂಹಿತೆಯ ಕೆಳಗಾಗಲೀ, ಅಪರಾಧಿಕ ಪ್ರಕ್ರಿಯೆ ಸಂಹಿತೆಯ ಕೆಳಗಾಗಲೀ ಅಪರಾಧಿಕ ನ್ಯಾಯಾಲಯಗಳಿಗೆ ಅಧಿಕಾರ ವ್ಯಾಪ್ತಿಯಿಲ್ಲ. ಈ ಆಪಾದಿತರನ್ನು ಮತ್ತು ಈ ಅಪರಾಧಗಳನ್ನು ಸೇನಾ ನ್ಯಾಯಾಲಯಗಳು ವಿಚಾರಣೆ ಮಾಡುತ್ತವೆ. ಸ್ಥಳೀಯ ಪೊಲೀಸರು ರಕ್ಷಣಾಪಡೆಗಳಿಗೆ ಸೇರಿದ ನೌಕರನೊಬ್ಬನನ್ನು ಬಂಧಿಸಿ ತಮ್ಮ ಅಧೀನದಲ್ಲಿ ಇಟ್ಟುಕೊಂಡರೂ, ಅವನನ್ನು ಸೇನಾ ನ್ಯಾಯಾಲಯಗಳ ವಿಚಾರಣೆಗೆ ಗುರಿಪಡಿಸುವುದಕ್ಕಾಗಿ ಮಿಲಿಟರಿ ಅಧಿಕಾರಿಗಳ ವಶಕ್ಕೆ ಒಪ್ಪಿಸಿಬಿಡಬೇಕು. ಸೇನಾ ನ್ಯಾಯಾಲಯವು ಕಾನೂನು ಸಮ್ಮತ ನ್ಯಾಯಾಧಿಕರಣವಾದರೂ ಅದು ದೇಶದ ನ್ಯಾಯಾಂಗದ ಒಂದು ಭಾಗವಲ್ಲ. ಆದರೆ, ಇದು ಮಿಲಿಟರಿ ಅಪರಾಧವನ್ನು ವಿಚಾರಣೆ ಮಾಡುವ, ತೀರ್ಮಾನ ಕೊಡುವ ಹಾಗೂ ಶಿಕ್ಷೆ ವಿಧಿಸುವ ಏಕಮಾತ್ರ ನ್ಯಾಯಾಲಯವಾಗಿದೆ. ಸೇನಾ ನ್ಯಾಯಾಲಯಗಳ ತೀರ್ಪಿನಿಂದ ಹಿರಿಯ ನ್ಯಾಯಾಲಯಗಳಾದ ಉಚ್ಚ ನ್ಯಾಯಾಲಯ ಅಥವಾ ಸರ್ವೋಚ್ಚ ನ್ಯಾಯಾಲಯಗಳಿಗೆ ಮೇಲ್ಮನವಿ ಅಧಿಕಾರವ್ಯಾಪ್ತಿ ಇಲ್ಲ ಮತ್ತು ಆ ನ್ಯಾಯಾಲಯ ವಿಧಿಸಿದ ಶಿಕ್ಷೆಯ ಮೇಲೆ ಯಾವ ಸಿವಿಲ್ ನ್ಯಾಯಾಲಯಕ್ಕೂ ಮೇಲ್ಮನವಿ ಸಲ್ಲಿಸಲು ಅವಕಾಶವಿಲ್ಲ. ಮಿಲಿಟರಿ ನ್ಯಾಯಾಲಯದ ತೀರ್ಮಾನ ಅಥವಾ ನಡವಳಿಕೆಗಳನ್ನು ಪ್ರಶ್ನಿಸಲು ಇರುವ ಒಂದೇ ಮಾರ್ಗವೆಂದರೆ ಅನುಚ್ಛೇದ 32ರ ಕೆಳಗೆ ಸರ್ವೋಚ್ಚ ನ್ಯಾಯಾಲಯಕ್ಕೂ ಮತ್ತು ಅನುಚ್ಛೇದ 226ರ ಕೆಳಗೆ ಉಚ್ಚ ನ್ಯಾಯಾಲಯಕ್ಕೂ ರಿಟ್ ಅರ್ಜಿಗಳನ್ನು ಸಲ್ಲಿಸುವುದು. ಸಿವಿಲ್ ಪ್ರಕ್ರಿಯೆಯ ಅರ್ಥವ್ಯಾಪ್ತಿಯಲ್ಲಿ ಸೇನಾ ನ್ಯಾಯಾಲಯವನ್ನೂ ನ್ಯಾಯಾಲಯವೆಂದು ಪರಿಗಣಿಸಲಾಗಿದೆ. ಮತ್ತು ಅದರ ಮುಂದೆ ನಡೆಯುವ ನಡವಳಿಕೆಗಳು ನ್ಯಾಯಿಕ ನಡವಳಿಕೆಗಳಾಗಿವೆ. ಎಲ್ಲ ನ್ಯಾಯಾಲಯಗಳಂತೆ ಸೇನಾ ನ್ಯಾಯಾಲವೂ ಸ್ವಾಭಾವಿಕ ನ್ಯಾಯದ ನಿಯಮಗಳಿಗೆ ಬದ್ಧವಾಗಿದೆ. ವಿಷಯವೊಂದಕ್ಕೆ ಸಂಬಂಧಿಸಿದ ಹಾಗೆ ಮಿಲಿಟರಿ ಸಂಹಿತೆಯಲ್ಲಿ ವಿಶೇಷ ವಿಧಿಗಳು ಇಲ್ಲದಿದ್ದರೆ, ಸಿವಿಲ್ ನ್ಯಾಯಾಲಯಗಳು ಅನುಸರಿಸುವ ಸಾಕ್ಷ್ಯ ನಿಯಮಗಳನ್ನು ಅದು ಅನುಸರಿಸಬೇಕೆಂದು ನಿರೀಕ್ಷಿಸಲಾಗಿದೆ.

ಮಿಲಿಟರಿ ಕಾನೂನಿಗೆ ಕೆಳಗೆ ನಾಲ್ಕು ವಿಧವಾದ ಸೇನಾ ನ್ಯಾಯಾಲಯಗಳಿವೆ:

i. ಮಹಾಸೇನಾ ನ್ಯಾಯಾಲಯ.

ii. ಜಿಲ್ಲಾ ಸೇನಾ ನ್ಯಾಯಾಲಯ

iii. ಸಂಕ್ಷಿಪ್ತ ಮಹಾಸೇನಾ ನ್ಯಾಯಾಲಯ

iv. ಸಂಕ್ಷಿಪ್ತ ಸೇನಾ ನ್ಯಾಯಾಲಯ

ಮಹಾ ಸೇನಾ ನ್ಯಾಯಾಲಯವು ಅತ್ಯುನ್ನತ ಸೇನಾ ನ್ಯಾಯಾಲಯವಾಗಿದ್ದು, ಅದನ್ನು ಕೇಂದ್ರ ಸರ್ಕಾರವಾಗಲೀ, ಅಥವಾ ಸೇನಾ ಮಹಾದಂಡ ನಾಯಕರಾಗಲೀ, ಮಹಾದಂಡನಾಯಕರು ಹೊರಡಿಸಿದ ವಾರಂಟ್ ದ್ವಾರಾ ಸಭೆ ಸೇರಿಸಬಹುದು. ಮಹಾ ಸೇನಾ ನ್ಯಾಯಾಲಯದಲ್ಲಿ ಕನಿಷ್ಟ ಐವರು ಅಧಿಕಾರಿಗಳಿರಬೇಕು. ಯಾವುದೇ ಸೇನಾ ನೌಕರನನ್ನು ಆಯಾ ಅಧಿನಿಯಮಗಳಿಗೆ ಒಳಪಟ್ಟ ಅಪರಾಧಗಳಿಗಾಗಿ ವಿಚಾರಣೆ ಮಾಡಲೂ ಮತ್ತು ಯಾವುದೇ ಶಿಕ್ಷೆಯನ್ನು ವಿಧಿಸಲೂ ಮಹಾ ಸೇನಾ ನ್ಯಾಯಾಲಯಕ್ಕೆ ಅಧಿಕಾರವಿದೆ. ಇಂಥ ಸೇನಾ ನ್ಯಾಯಾಲಯಗಳನ್ನು, ಅಧಿಕಾರಿಗಳ ಮತ್ತು ತಮ್ಮ ಕೈಕೆಳಗಿನ ಸೈನಿಕರ/ನೌಕರರ ವಿಚಾರಣೆ ಮಾಡಲು ಸೇರಿಸಲಾಗುತ್ತದೆ.

ಜಿಲ್ಲಾ ಸೇನಾ ನ್ಯಾಯಾಲಯವನ್ನು ಮಹಾ ಸೇನಾ ನ್ಯಾಯಾಲಯವನ್ನು ಸೇರಿಸಲು ಅಧಿಕಾರವಿರುವ ಅಧಿಕಾರಿಯು ಅಥವಾ ಅವನಿಂದ ಅಧಿಕಾರ ಕೊಡಲ್ಪಟ್ಟ ಇನ್ನಾವುದೇ ಅಧಿಕಾರಿ ಸಭೆ ಸೇರಿಸಬಹುದು. ಜಿಲ್ಲಾ ಸೇನಾ ನ್ಯಾಯಾಲಯದಲ್ಲಿ ಕನಿಷ್ಟ ಮೂವರು ಮಂದಿ ಅಧಿಕಾರಿಗಳಿರುತ್ತಾರೆ. ಯಾವುದೇ ಅಧಿಕಾರಿ ಅಥವಾ ಕಿರಿಯ ಕಮಿಷನ್ಡ್ ಅಧಿಕಾರಿಯನ್ನು, ಅಧಿನಿಯಮಗಳಲ್ಲಿ ಶಿಕ್ಷಾರ್ಹವೆಂದು ಕಾಣಿಸಿದ ಅಪರಾಧಕ್ಕಾಗಿ ವಿಚಾರಣೆ ಮಾಡುವುದಕ್ಕೂ ಮತ್ತು ಅಧಿನಿಯಮ ಅಧಿಕೃತಗೊಳಿಸಿದ ಶಿಕ್ಷೆಯನ್ನು ವಿಧಿಸುವುದಕ್ಕಾಗಲೀ, ಜಿಲ್ಲಾ ಸೇನಾ ನ್ಯಾಯಾಲಯಕ್ಕೆ ಅಧಿಕಾರವಿದೆ. ಆದರ ಅದಕ್ಕೆ ಮರಣದಂಡನೆ ಶಿಕ್ಷೆ ಅಥವಾ ಎರಡು ವರ್ಷಗಳಿಗೆ ಮೀರಿದ ಶಿಕ್ಷೆಯನ್ನು ಕೊಡುವ ಅಧಿಕಾರವಿಲ್ಲ.

ಸಂಕ್ಷಿಪ್ತ ಮಹಾಸೇನಾ ನ್ಯಾಯಾಲಯದ ಸಭೆಯನ್ನು ಕೇಂದ್ರ ಸರ್ಕಾರದ ಆಜ್ಞಾನುಸಾರ ಆ ಸಂಬಂಧವಾಗಿ ಅಧಿಕಾರ ಪಡೆದುಕೊಂಡ ಅಧಿಕಾರಿಯಾಗಲೀ, ಅಥವಾ ಮಹಾದಂಡನಾಯಕರುಗಳಾಗಲೀ ಅಥವಾ ಇತರ ಇಂಥ ಅಧಿಕಾರಿಗಳಾಗಲೀ ಕರೆಯಬಹುದು. ಸಂಕ್ಷಿಪ್ತ ಮಹಾಸೇನಾ ನ್ಯಾಯಾಲಯವು ಕನಿಷ್ಟ ಮೂವರು ಅಧಿಕಾರಿಗಳನ್ನು ಒಳಗೊಂಡಿರುತ್ತದೆ. ಮಹಾಸೇನಾ ನ್ಯಾಯಾಲಯಕ್ಕೆ ಇರುವ ಎಲ್ಲ ಅಧಿಕಾರವು ಇದಕ್ಕೂ ಇದ್ದು, ಅಧಿನಿಯಮಕ್ಕೊಳಪಟ್ಟ ಯಾವುದೇ ವ್ಯಕ್ತಿಯನ್ನು ಅದರಲ್ಲಿ ನಿಯಮಿಸಿದ ಯಾವುದೇ ಶಿಕ್ಷಾರ್ಹವಾದ ಅಪರಾಧಕ್ಕಾಗಿ ವಿಚಾರಣೆನಡೆಸಿ, ಅದರಲ್ಲಿ ಅಧಿಕೃತಗೊಳಿಸಿದ ಯಾವುದೇ ಶಿಕ್ಷೆಯನ್ನು ಅದು ವಿಧಿಸಬಲ್ಲುದು.

ಸಂಕ್ಷಿಪ್ತ ಸೇನಾ ನ್ಯಾಯಾಲಯವನ್ನು ಆಪಾದಿತನು ಇರುವ ಯಾವುದೇ ದಳದ, ಇಲಾಖೆಯ ಅಥವಾ ಸ್ಥಾಯೀ ಸೇನಾ ತುಕಡಿಯ ದಳಪತಿಯು ಸೇರಿಸಬಹುದು. ಸಂಕ್ಷಿಪ್ತ ಸೇನಾ ನ್ಯಾಯಾಲಯದಲ್ಲಿ ಇತರ ಇಬ್ಬರು ಅಧಿಕಾರಿಗಳು, ಅಥವಾ ಇಬ್ಬರು ಕಿರಿಯ ಕಮಿಷನ್ಡ್ ಅಧಿಕಾರಿಗಳು ಅಥವಾ ಒಬ್ಬ ಅಧಿಕಾರಿ ಮತ್ತು ಒಬ್ಬ ಕಿರಿಯ ಕಮಿಷನ್ಡ್ ಅಧಿಕಾರಿ, ನ್ಯಾಯಾಲಯದ ನಡವಳಿಕೆಯುದ್ದಕ್ಕೂ ಉಪಸ್ಥಿತರಿರುತ್ತಾರೆ.

ಸಂಕ್ಷಿಪ್ತ ಸೇನಾ ನ್ಯಾಯಾಲಯವು ಅಧಿನಿಯಮದ ಕೆಳಗೆ ಬರುವ ಯಾವುದೇ ಶಿಕ್ಷಾರ್ಹವಾದ ಅಪರಾಧವನ್ನು ವಿಚಾರಣೆ ಮಾಡಬಹುದು. ತುರ್ತಾಗಿ ಕ್ರಮ ಕೈಗೊಳ್ಳಲು ಗಂಭೀರವಾದ ಕಾರಣಗಳಿದ್ದರೆ, ನ್ಯಾಯಾಲಯವನ್ನು ಕರೆದ ದಳಪತಿಯೇ ವಿಚಾರಣೆ ನಡೆಸಬಹುದು. ಆದರೆ ಯಾವುದೇ ಇತರ ಅಧಿಕಾರಿ, ಕಿರಿಯ ಕಮಿಷನ್ಡ್ ಅಧಿಕಾರಿ, ಅಥವಾ ವಾರಂಟ್ ಅಧಿಕಾರಿ ವಿಚಾರಣೆ ನಡೆಸುವ ಹಾಗಿಲ್ಲ. ಒಂದು ಅಪರಾಧಕ್ಕಾಗಿ ಅಧಿನಿಯಮ ವಿಧಿಸಿದ ಯಾವುದೇ ಶಿಕ್ಷೆಯನ್ನಾಗಲೀ ಸಂಕ್ಷಿಪ್ತ ಸೇನಾ ನ್ಯಾಯಾಲಯ ಕೊಡಬಹುದಾದರೂ, ಮರಣದಂಡನೆ ಶಿಕ್ಷೆ, ಜೀವಾವಧಿ ಶಿಕ್ಷೆ ಅಥವಾ ಒಂದು ವರ್ಷಕ್ಕೆ ಮೀರಿದ ಜೈಲು ಶಿಕ್ಷೆಯನ್ನು ಕೊಡುವ ಹಾಗಿಲ್ಲ. ಸೇನಾ ನ್ಯಾಯಾಲಯಗಳಲ್ಲಿ ಉಪಸ್ಥಿತರಿರಬಹುದಾದ ವ್ಯಕ್ತಿಗಳ ಅರ್ಹತೆಯನ್ನು ಆಯಾ ಅಧಿನಿಯಮಗಳಲ್ಲಿ ನಿಗದಿಪಡಿಸಲಾಗಿದೆ.

ಸಶಸ್ತ್ರಪಡೆಗಳಲ್ಲಿ ನ್ಯಾಯಾಧೀಶ - ಅಡ್ವೋಕೇಟ್ ಜನರಲ್ ಎಂಬ ಹುದ್ದೆಯೊಂದಿದೆ. ಪ್ರತಿಯೊಂದು ಮಹಾಸೇನಾ ನ್ಯಾಯಾಲಯದಲ್ಲಿ ನ್ಯಾಯಾಧೀಶ - ಅಡ್ವೋಕೇಟ್ ಜನರಲ್ ಕಡ್ಡಾಯವಾಗಿ ಹಾಜರಿರಬೇಕು. ಜಿಲ್ಲಾ ಅಥವಾ ಸಂಕ್ಷಿಪ್ತ ಸೇನಾ ನ್ಯಾಯಾಲಯದಲ್ಲಿ ಅವರಾಗಲೀ ಅವರ ಇಲಾಖೆಗೆ ಸೇರಿದ ಅಧಿಕಾರಿಯೊಬ್ಬರಾಗಲೀ ಹಾಜರಿರಬಹುದು. ಇಂಥ ಅಧಿಕಾರಿಯನ್ನು ನ್ಯಾ -ಅ. ಜನರಲ್‌ರವರ ಪ್ರತಿನಿಧಿಯು ನೇಮಿಸಬಹುದು. ಅವರ ಪಾತ್ರವು ಸಲಹಾಗಾರನ ಪಾತ್ರವಾಗಿದ್ದು, ನ್ಯಾಯಾಲಯದ ಒಳಗಾಗಲೀ ಅಥವಾ ಹೊರಗಾಗಲೀ, ಅವರ ಅಭಿಪ್ರಾಯವನ್ನು ಕಾನೂನಿನ ಪ್ರಶ್ನೆಯ ಮೇಲೆ ಪಡೆದುಕೊಳ್ಳಲು, ಅಭಿಯೋಜಕರಿಗಾಗಲೀ ಅಥವಾ ಆಪಾದಿತನಿಗಾಗಲೀ ಹಕ್ಕಿರುತ್ತದೆ.

ನ್ಯಾ-ಅ. ಜನರಲ್ಲನ ಕರ್ತವ್ಯಗಳು ಹೀಗಿವೆ:

i. ನ್ಯಾಯಾಲಯಕ್ಕೆ ನ್ಯಾ-ಅ. ಜನರಲ್ ಆಗಿ ನಿಯುಕ್ತನಾದ ಮೇಲೆ ಪ್ರಾಸಿಕ್ಯೂಷನ್ ಆಗಲೀ, ಅಥವಾ ಆಪಾದಿತನಾಗಲೀ ಆಪಾದನೆ ಅಥವಾ ವಿಚಾರಣೆಗೆ ಸಂಬಂಧಿಸಿದ ಕಾನೂನಿನ ಪ್ರಶ್ನೆಯ ಮೇಲೆ, ಅವನ ಅಭಿಪ್ರಾಯವನ್ನು ಅವನು ನ್ಯಾಯಾಲಯದ ಒಳಗಿರಲಿ, ಹೊರಗಿರಲಿ - ಪಡೆಯಲು ಹಕ್ಕಿದೆ. ಹೇಗಾದರೂ ಅವನು ನ್ಯಾಯಾಲಯದ ಒಳಗಡೆ ಇದ್ದಾಗ ಅವನ ಅಭಿಪ್ರಾಯವನ್ನು ನ್ಯಾಯಾಲಯದ ಅನುಮತಿ ಕೇಳಿ ಪಡೆಯಬಹುದು.

ii. ನ್ಯಾಯಾಲಯದ ಕಾರ್ಯ ವಿಧಾನದಲ್ಲಾಗಲೀ ಅಥವಾ ಆಪಾದನೆಯಲ್ಲಾಗಲೀ ಯಾವುದೇ ಕ್ರಮದೋಷವಿದ್ದರೆ, ಅದನ್ನು ನ್ಯಾಯಾಲಯದ ಗಮನಕ್ಕೆ ತರುವುದು ಅವನ ಹೊಣೆಯಾಗಿದೆ. ಆಪಾದನೆ ಅಥವಾ ನ್ಯಾಯಾಲಯದ ರಚನೆಯಲ್ಲಿ ದೌರ್ಬಲ್ಯ ಅಥವಾ ದೋಷವಿದ್ದರೆ, ನ್ಯಾಯಾಲಯವನ್ನು ಸೇರಿಸಿದ ಪ್ರಾಧಿಕಾರಕ್ಕೆ ಮತ್ತು ನ್ಯಾಯಾಲಯಕ್ಕೆ, ಅವನನ್ನು ಕೇಳಲಿ ಬಿಡಲಿ, ತಿಳಿಸಬೇಕು. ಅಲ್ಲದೆ ನ್ಯಾಯಾಲಯದ ಮುಂದಿರುವ ಯಾವುದೇ ವಿಷಯದ ಮೇಲೆ ತನ್ನ ಅಭಿಪ್ರಾಯ/ಸಲಹೆಯನ್ನು ಕೊಡಬೇಕು.

iii. ವಿಚಾರಣಾ ಕಾಲದಲ್ಲಿ ಏಳುವ ಯಾವುದೇ ಕಾನೂನಿನ ಪ್ರಶ್ನೆ, ಪದ್ಧತಿ ಅಥವಾ ಪ್ರಕ್ರಿಯೆ ಬಗ್ಗೆ ನ್ಯಾಯಾಲಯ ಅವನನ್ನು ಕೇಳಿದಾಗ, ಅವನು ತನ್ನ ಅಭಿಪ್ರಾಯವನ್ನು ಕೊಡಲು ಬದ್ಧನಾಗಿದ್ದಾನೆ.

iv. ವಾದವಿವಾದ ಮುಗಿದಮೇಲೆ, ತಾವು ತೆಗೆದುಕೊಳ್ಳಬೇಕಾದ ನಿರ್ಣಯವನ್ನು ಕುರಿತು ಸಮಾಲೋಚನೆಯನ್ನು ಪ್ರಾರಂಭಿಸಲು ವಿಚಾರಣೆಯನ್ನು ಮುಕ್ತಾಯಗೊಳಿಸುವ ಮುನ್ನ ನ್ಯಾಯಾಧೀಶ - ಅಡ್ವೋಕೇಟ್ ಜನರಲ್ ಸಾಕ್ಷ್ಯವನ್ನು ಸಂಗ್ರಹವಾಗಿ ಮನವರಿಕೆಮಾಡಿಕೊಟ್ಟು ಪ್ರಕರಣಕ್ಕೆ ಪ್ರಸ್ತುತವಾದ ಕಾನೂನನ್ನು ಕುರಿತು ನ್ಯಾಯಾಲಯಕ್ಕೆ ಸಲಹೆಕೊಡುತ್ತಾನೆ.

v. ಆಪಾದಿತನು ತಾನು ಆಪಾದಿತ ಸ್ಥಾನದಲ್ಲಿರುವ ದೆಸೆಯಿಂದಾಗಲೀ, ಅಥವಾ ಸಾಕ್ಷಿಗಳನ್ನು ಪ್ರಶ್ನಿಸಲು ಪಾಟೀ ಸವಾಲು ಮಾಡಲು, ಅಥವಾ ಅನ್ಯಥಾ, ತನ್ನ ಅಜ್ಞಾನ ಮತ್ತು ಅಸಾಹಯಕತೆಯಿಂದಾಗಲೀ ಪ್ರತಿಕೂಲ ಪರಿಣಾಮಕ್ಕೆ ಗುರಿಯಾಗದ ಹಾಗೆ ಎಚ್ಚರಿಕೆ ತೆಗೆದುಕೊಳ್ಳುವುದು ನ್ಯಾಯಾಲಯದ ಅಧ್ಯಕ್ಷನ ಕರ್ತವ್ಯದಷ್ಟೇ ನ್ಯಾ-ಅ. ಜನರಲ್‌ನ ಕರ್ತವ್ಯವೂ ಆಗಿದೆ. ಈ ಉದ್ದೇಶಕ್ಕಾಗಿ ಸತ್ಯ ಏನು ಎಂದು ತಿಳಿಯಲು, ನ್ಯಾಯಾಲಯದ ಅನುಮತಿ ಪಡೆದುಕೊಂಡು, ಸಾಕ್ಷಿಗಳನ್ನು ಕರೆಸಿ, ತನಗೆ ಸೂಕ್ತವೆಂದೂ ಅವಶ್ಯಕವೆಂದೂ ತೋರಿದ ಪ್ರಶ್ನೆಗಳನ್ನು ಅವರಿಗೆ ಕೇಳಬಹುದು.

vi. ಸೇನಾ ನ್ಯಾಯಾಲಯ ನಡೆಯುತ್ತಿರುವಾಗ ಪ್ರಾಸಿಕ್ಯೂಷನ್ ಸಾಕ್ಷಿಗಳು ಮತ್ತು ಎದುರು ಸಾಕ್ಷಿಗಳು, ಯಾವ ಸಮಯ, ತಾರೀಖು ಮತ್ತು ಸ್ಥಳದಲ್ಲಿ ಹಾಜರಾಗಬೇಕೆಂದು ಅವರಿಗೆ ಸಮನ್ಸ್ ಕಳುಹಿಸುತ್ತಾನೆ.

ತನ್ನ ಕರ್ತವ್ಯ ನಿರ್ವಹಣೆಯಲ್ಲಿ ಸಂಪೂರ್ಣ ನಿಷ್ಪಕ್ಷಪಾತವಾದ ನೀತಿ/ಧೋರಣೆಯನ್ನು ಉಳಿಸಿಕೊಳ್ಳಲು ನ್ಯಾ-ಅ. ಜನರಲ್‌ನಿಗೆ ಕಟ್ಟುಪಾಡು ಮಾಡಲಾಗಿದೆ. ತಾನು ನ್ಯಾಯಪರಿಪಾಲಕನೆಂದು ಗಮನದಲ್ಲಿಟ್ಟುಕೊಂಡಿರಲು ಅವನು ಬದ್ಧನಾಗಿದ್ದು ನ್ಯಾಯಾಲಯ ಮಧ್ಯಪ್ರವೇಶಮಾಡಬಹುದಾದಷ್ಟು ಮಾತ್ರ ಅವನೂ ತಲೆ ಹಾಕಬಹುದು. ಕೈದಿಯ ಬಗ್ಗೆ ಅವನಿಗಿರುವ ಕರ್ತವ್ಯ ನ್ಯಾಯಾಲಯಕ್ಕಿಂತ ಮಿಗಿಲಾದುದೇನೂ ಅಲ್ಲ; ನ್ಯಾಯಾಲಯವು ನ್ಯಾಯವಿತರಣೆ ಮಾಡುವಲ್ಲಿ, ಕೈದಿಯು ತನ್ನ ಅಜ್ಞಾನ, ಅನನುಭವ ಮತ್ತು ಅಸಾಮರ್ಥ್ಯದ ಕಾರಣ ತೊಂದರೆಗೀಡಾಗದ ಹಾಗೆ ಎಚ್ಚರ ವಹಿಸಲು ಬದ್ಧವಾಗಿದೆ.

## ನ್ಯಾಯಿಕ ಪುನರವಲೋಕನ ಮತ್ತು ಮೇಲ್ಮನವಿ ಪುನರ್ವಿಮರ್ಶೆ

ಮೇಲೆ ಪ್ರಸ್ತಾಪಿಸಿದ ಅಧಿನಿಯಮಗಳ ಕೆಳಗೆ, ಸೇನಾ ನ್ಯಾಯಾಲಯವು ಹೊರಡಿಸಿದ ಯಾವುದೇ ಆದೇಶದಿಂದ ಅಸಂತುಷ್ಟನಾದ ವ್ಯಕ್ತಿ, ಆ ಆದೇಶವನ್ನು ದೃಢೀಕರಿಸಲು ಅಧಿಕಾರ ಕೊಡಲ್ಪಟ್ಟ ಅಧಿಕಾರಿಗೆ ಅಥವಾ ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸಬಹುದು. ಆ ಪ್ರಾಧಿಕಾರವು ನ್ಯಾಯಾಲಯ ಹೊರಡಿಸಿದ ಆದೇಶದಲ್ಲಿ ನ್ಯೂನಾತಿರೇಕವಿಲ್ಲವೆಂದೂ, ಕಾನೂನಿನನ್ವಯವಾಗಿದೆಯೆಂದೂ, ಉಚಿತ

ವಾಗಿದೆಯೆಂದೂ, ಆದೇಶವನ್ನು ಕುರಿತ ನಡವಳಿಕೆಗಳಲ್ಲಿ ಕ್ರಮದೋಷವಿಲ್ಲವೆಂದೂ ಮತ್ತು ಶಿಕ್ಷೆಯ ಪ್ರಮಾಣ ಸಾಧುವಾಗಿದೆಯೆಂದೂ ತಾನು ಖಾತರಿಪಡಿಸಿಕೊಳ್ಳಲು ಅಗತ್ಯವಾದ ಕ್ರಮಗಳನ್ನು ತೆಗೆದುಕೊಳ್ಳಬಹುದು. ಹೀಗೆ ದೃಢೀಕರಣಗೊಳಿಸಿದ ನಂತರವೂ ಅಸಂತುಷ್ಟನಾದ ವ್ಯಕ್ತಿ, ಕೇಂದ್ರ ಸರ್ಕಾರಕ್ಕಾಗಲೀ ಮಹಾ ದಂಡನಾಯಕರಿಗಾಗಲೀ ಅಥವಾ ದೃಢೀಕರಣಮಾಡಿದ ಅಧಿಕಾರಿಗೆ ಮೇಲ್ಪಟ್ಟ, ನಿಗದಿಪಡಿಸಿದ ಅಧಿಕಾರಿಗಾಗಲೀ ಅಹವಾಲು ಸಲ್ಲಿಸಬಹುದು. ಈ ಅಹವಾಲಿನ ಮೇಲೆ, ಸಂದರ್ಭಾನುಸಾರ ಸೂಕ್ತಕಂಡ ಆದೇಶವನ್ನು ಮಾಡಬಹುದು. ಸಶಸ್ತ್ರ ಪಡೆಗಳಿಗೆ ಸಂಬಂಧಿಸಿದಂತೆ ಯಾವುದೇ ಕಾನೂನಿನ ದ್ವಾರಾ ಅಥವಾ ಕಾನೂನಿನ ಕೆಳಗೆ ರಚಿತವಾದ ನ್ಯಾಯಾಧಿಕರಣವೊಂದು, ಯಾವುದೇ ವ್ಯಾಜ್ಯ ಕಾರಣ ಅಥವಾ ವಿಷಯದಲ್ಲಿ ಕೊಟ್ಟ ಅಂತಿಮ ತೀರ್ಮಾನ ಡಿಕ್ರಿ, ಇತ್ಯರ್ಥ, ಶಿಕ್ಷೆ ಅಥವಾ ಆದೇಶದಿಂದ ಮೇಲ್ಮನವಿ ಸಲ್ಲಿಸುವುದಕ್ಕೆ ವಿಶೇಷ ಅನುಮತಿಯನ್ನು ಸರ್ವೋಚ್ಚ ನ್ಯಾಯಾಲಯವು ನೀಡುವ ಹಾಗಿಲ್ಲ. ಈ ಅಧಿಕಾರವನ್ನು ಸರ್ವೋಚ್ಚ ನ್ಯಾಯಾಲಯದ ಅಧಿಕಾರ ವ್ಯಾಪ್ತಿಯಿಂದ ಸಂವಿಧಾನವು ಹೊರತುಪಡಿಸಿದೆ. ಹೀಗೆಯೇ ಸಶಸ್ತ್ರಪಡೆಗಳಿಗೆ ಸಂಬಂಧಿಸಿದಂತೆ ಯಾವುದೇ ಕಾನೂನಿನ ದ್ವಾರಾ ಅಥವಾ ಕಾನೂನಿನ ಕೆಳಗೆ ರಚಿತವಾದ ನ್ಯಾಯಾಲಯ ಅಥವಾ ನ್ಯಾಯಾಧಿಕರಣದ ಮೇಲೆ ಯಾವುದೇ ರೀತಿಯ ಮೇಲ್ವಿಚಾರಣೆ ಅಧಿಕಾರವನ್ನು ಉಚ್ಚ ನ್ಯಾಯಾಲಯಗಳು ಚಲಾಯಿಸದಂತೆ ಪ್ರತಿಬಂಧಿಸಲಾಗಿದೆ. ಸಿವಿಲ್ ನ್ಯಾಯಾಲಯಗಳನ್ನು ಈ ರೀತಿ ಮಧ್ಯ ಪ್ರವೇಶಿಸದಂತೆ ಪ್ರತಿಬಂಧಿಸಿರುವುದು ತತ್ತ್ವಾಧಾರಿತವಾಗಿಯೇ ಇದೆ. ಮಿಲಿಟರಿ ನ್ಯಾಯಾಲಯಗಳಿಗೆ/ನ್ಯಾಯಾಧಿಕರಣಗಳಿಗೆ ಅವುಗಳ ಮುಂದಿರುವ ವ್ಯಾಜ್ಯವನ್ನು ಕುರಿತಂತೆ ಸಂಪೂರ್ಣ ತಿಳುವಳಿಕೆ ಇರುತ್ತದೆ ಎಂದು ಪರಿಗಣಿಸಲಾಗಿದ್ದು ಅವು ಆಪಾದಿತರಿಗೂ ಆಪಾದಿಸಿದವರಿಗೂ ನ್ಯಾಯಯುತವಾದ ಪಕ್ಷಪಾತರಹಿತವಾದ ನಿರ್ಣಯವನ್ನು ದೊರಕಿಸಲು ಸಾಧ್ಯ, ಹಾಗೆ ದೊರಕಿಸಿಕೊಡುತ್ತವೆ ಎಂಬುದೇ ಈ ತತ್ತ್ವದ ಅಡಿಗಲ್ಲಾಗಿದೆ.

ಮಿಲಿಟರಿ ನ್ಯಾಯಾಧಿಕರಣಗಳ ಮೇಲೆ ಮೇಲ್ಮನವಿಯ ಅಧಿಕಾರವಿಲ್ಲದಿದ್ದರೂ, ಅವುಗಳ ಮೇಲೆ ಸ್ವಲ್ಪಮಟ್ಟಿಗಾದರೂ ಉಚ್ಚನ್ಯಾಯಾಲಯ ಮತ್ತು ಸರ್ವೋಚ್ಚ ನ್ಯಾಯಾಲಯಗಳಿಗೆ ನಿಯಂತ್ರಣ ಮತ್ತು ಮೇಲ್ವಿಚಾರಣೆ ಅಧಿಕಾರ ಇದೆ.

ಸಂವಿಧಾನದ 32ನೆಯ ಮತ್ತು 226ನೆಯ ಅನುಚ್ಛೇದಗಳ ಕೆಳಗೆ ಕ್ರಮವಾಗಿ ಸರ್ವೋಚ್ಚ ನ್ಯಾಯಾಲಯಕ್ಕೆ ಮತ್ತು ಪ್ರತಿಯೊಂದು ಉಚ್ಚ ನ್ಯಾಯಾಲಯಕ್ಕೆ, ಅವುಗಳಿಗೆ ಅಧಿಕಾರ ವ್ಯಾಪ್ತಿ ಇರುವ ಪ್ರದೇಶದಲ್ಲಿ, ಯಾವುದೇ ವ್ಯಕ್ತಿ ಅಥವಾ ಪ್ರಾಧಿಕಾರಕ್ಕೆ ನಿರ್ದೇಶನಗಳನ್ನು, ಆದೇಶಗಳನ್ನು ಮತ್ತು ರಿಟ್‌ಗಳನ್ನು ನೀಡುವ ಅಧಿಕಾರವಿದೆ. ರಿಟ್‌ಗಳೆಂದರೆ ಹೇಬಿಯಸ್ ಕಾರ್ಪಸ್ ರಿಟ್, ಮ್ಯಾಂಡಮಸ್ ರಿಟ್, ಪ್ರೊಹಿಬಿಷನ್ ರಿಟ್, ಕೋ ವಾರಂಟೋ ರಿಟ್ ಮತ್ತು ಸರ್ಷಿಯೊರೇರಿ ರಿಟ್. ಈ ರಿಟ್‌ಗಳ ಉದ್ದೇಶ ಸಂವಿಧಾನದ ಮೂರನೇ ಭಾಗದಲ್ಲಿ ವಿಷದೀಕರಿಸಲಾಗಿರುವ ಮೂಲಭೂತ ಹಕ್ಕುಗಳನ್ನು ಜಾರಿಗೊಳಿಸುವುದೇ ಆಗಿದೆ. ಸಂವಿಧಾನದ ಅನುಚ್ಛೇದ 136(2) ಮತ್ತು 227ರಲ್ಲಿ ಇರುವ ನಿಷೇಧವು, ಅನುಚ್ಛೇದ 32 ಮತ್ತು 226ರಲ್ಲಿ

ಕಂಡುಬರುವುದಿಲ್ಲ; ಇದರಿಂದಾಗಿ ಅನುಚ್ಛೇದ 226ರ ಕೆಳಗೆ ಉಚ್ಚ ನ್ಯಾಯಾಲಯದ ಅಧಿಕಾರ ವ್ಯಾಪ್ತಿಗೆ ಮತ್ತು ಅನುಚ್ಛೇದ 32ರ ಕೆಳಗೆ ಸರ್ವೋಚ್ಚ ನ್ಯಾಯಾಲಯದ ಅಧಿಕಾರ ವ್ಯಾಪ್ತಿಗೆ, ಸೇನಾ ನ್ಯಾಯಾಲಯಗಳು ಸಗ್ಗುತ್ತವೆ. ಸಂವಿಧಾನದ ಅನುಚ್ಛೇದ 32ರ ಕೆಳಗೆ ಸರ್ವೋಚ್ಚ ನ್ಯಾಯಾಲಯದ ಅಧಿಕಾರ ವ್ಯಾಪ್ತಿಗೂ ಮತ್ತು ಅನುಚ್ಛೇದ 226ರ ಕೆಳಗೆ ಉಚ್ಚ ನ್ಯಾಯಾಲಯಗಳ ಅಧಿಕಾರ ವ್ಯಾಪ್ತಿಗೂ ಒಂದು ಮುಖ್ಯವಾದ ವ್ಯತ್ಯಾಸ ಇದೆ. ಅದೇನೆಂದರೆ, ಸರ್ವೋಚ್ಚ ನ್ಯಾಯಾಲಯವು ಸಂವಿಧಾನ ಖಾತರಿಗೊಳಿಸಿದ ಮೂಲಭೂತ ಹಕ್ಕುಗಳನ್ನು ಜಾರಿಗೊಳಿಸುವುದಕ್ಕೆ ಮಾತ್ರ ತನ್ನ ರಿಟ್ ಅಧಿಕಾರ ವ್ಯಾಪ್ತಿಯನ್ನು ಚಲಾಯಿಸುತ್ತದೆ. ಆದರೆ ಉಚ್ಚ ನ್ಯಾಯಾಲಯದ ಅಧಿಕಾರ ವ್ಯಾಪ್ತಿ ಇನ್ನೂ ಹೆಚ್ಚಿನ ಬಾಹುಳ್ಯದ್ದಾಗಿದೆ. ಅದು ಮೂಲಭೂತ ಹಕ್ಕುಗಳನ್ನು ಜಾರಿಗೊಳಿಸುವುದಕ್ಕೆ ಮಾತ್ರವಲ್ಲದೆ, ಇತರ ಉದ್ದೇಶಗಳಿಗೂ ರಿಟ್‌ಗಳನ್ನು ಪ್ರದಾನ ಮಾಡಬಹುದು.

ಸೇನಾ ಅಧಿನಿಯಮದ ಕೆಳಗೆ ಶಿಕ್ಷೆಗೆ ಒಳಗಾದ ಯಾವುದೇ ವ್ಯಕ್ತಿ ಅಥವಾ ಅಧಿಕಾರಿಯು ಅನುಚ್ಛೇದ 226ರ ಕೆಳಗೆ ಉಚ್ಚ ನ್ಯಾಯಾಲಯವನ್ನು ಕೋರಿಕೊಂಡಾಗ, ಆ ಪ್ರಕರಣವನ್ನು ಉಚ್ಚ ನ್ಯಾಯಾಲಯ ನ್ಯಾಯ ತೀರ್ಮಾನ ಮಾಡಿದ ಮೇಲೆ, ಪಕ್ಷಕಾರರಲ್ಲಿ ಯಾರೊಬ್ಬರೂ ಅನುಚ್ಛೇದ 136ರ ಕೆಳಗೆ ಸರ್ವೋಚ್ಚ ನ್ಯಾಯಾಲಯವನ್ನು ಸಂಪರ್ಕಿಸಬಹುದು; ಇದು ಸೇನಾ ನ್ಯಾಯಾಲಯದ ತೀರ್ಪಿನಿಂದ ಬಂದ ಮೇಲ್ಮನವಿಯೆಂದೆನಿಸಿಕೊಳ್ಳದೆ, ಉಚ್ಚ ನ್ಯಾಯಾಲಯದ ಅಂತಿಮ ತೀರ್ಮಾನದಿಂದ ಉದ್ಭವಿಸಿದ ಮೇಲ್ಮನವಿಯಾಗುತ್ತದೆ.

# ಸೀಮಾಸುಂಕ, ಅಬ್ಕಾರಿ ಮತ್ತು ಚಿನ್ನ (ನಿಯಂತ್ರಣ) ಮೇಲ್ಮನವಿ ನ್ಯಾಯಾಧಿಕರಣ

ಸೀಮಾಸುಂಕ, ಅಬ್ಕಾರಿ ಮತ್ತು ಚಿನ್ನ (ನಿಯಂತ್ರಣ) ಮೇಲ್ಮನವಿ ನ್ಯಾಯಾಧಿಕರಣವನ್ನು, ಕೇಂದ್ರ ಸರ್ಕಾರವು 1982ನೇ ಇಸವಿಯಲ್ಲಿ ಸೀಮಾಸುಂಕ ಅಧಿನಿಯಮದ 129ನೇ ಖಂಡದ ಕೆಳಗೆ ಸ್ಥಾಪನೆ ಮಾಡಿತು. ಅದರ ಹೆಸರೇ ಸೂಚಿಸುವಂತೆ, ಈ ಮೇಲ್ಮನವಿ ನ್ಯಾಯಾಧಿಕರಣವು, ಸೀಮಾಸುಂಕ ಅಧಿನಿಯಮ, 1962ರ 129-A ಖಂಡ, ಕೇಂದ್ರ ಅಬ್ಕಾರಿ ಮತ್ತು ಉಪ್ಪು ಅಧಿನಿಯಮ, 1944ರ 35ಬಿ ಖಂಡ, ಚಿನ್ನ (ನಿಯಂತ್ರಣ) ಅಧಿನಿಯಮ, 1968ರ 81ನೇ ಖಂಡ, ಇವುಗಳ ಕೆಳಗೆ ಬರುವ ಮೇಲ್ಮನವಿಗಳನ್ನು ವಿಚಾರಣೆ ಮಾಡುತ್ತದೆ. ಈ ಮೇಲ್ಮನವಿ ನ್ಯಾಯಾಧಿಕರಣದಲ್ಲಿ ನಿಹಿತಗೊಳಿಸಿರುವ ಕರ್ತವ್ಯಗಳನ್ನು ನಿಭಾಯಿಸಲು, ಕೇಂದ್ರ ಸರ್ಕಾರವು ತನಗೆ ಸೂಕ್ತ ಕಂಡಂತೆ ನೇಮಿಸಿದ ನ್ಯಾಯಿಕ ಹಾಗೂ ತಾಂತ್ರಿಕ ಸದಸ್ಯರನ್ನು ಅದು ಒಳಗೊಂಡಿದೆ.

ನ್ಯಾಯಿಕ ಸದಸ್ಯನು, ಕಡೆಯ ಪಕ್ಷ ಹತ್ತು ವರ್ಷಗಳ ಕಾಲ ಭಾರತದಲ್ಲಿ ನ್ಯಾಯಿಕ ಹುದ್ದೆಯಲ್ಲಿ ಸೇವೆ ಸಲ್ಲಿಸಿರಬೇಕು, ಇಲ್ಲವೇ ಕೇಂದ್ರ ಕಾನೂನು ಸೇವೆಯ ಸದಸ್ಯನಾಗಿರಬೇಕು, ಇಲ್ಲವೇ, ಆ ಸೇವೆಯಲ್ಲಿ ಕಡೆಯ ಪಕ್ಷ ಮೂರು ವರ್ಷಗಳ ವರೆಗೆ ಮೊದಲನೆ ದರ್ಜೆಯ ಹುದ್ದೆ ಅಥವಾ ಅದಕ್ಕೆ ಸರಿಸಮಾನವಾದ ಇಲ್ಲವೇ ಹೆಚ್ಚಿನ ಹುದ್ದೆಯಲ್ಲಿ ಕೆಲಸ ಮಾಡಿರಬೇಕು, ಇಲ್ಲವೇ ಹತ್ತು ವರ್ಷಗಳ ಕಾಲ ವಕೀಲನಾಗಿದ್ದಿರಬೇಕು. ತಾಂತ್ರಿಕ ಸದಸ್ಯನು, ಭಾರತದ ಸೀಮಾಸುಂಕ ಮತ್ತು ಕೇಂದ್ರ ಅಬ್ಕಾರಿ ಸೇವೆ, 'A' ಗುಂಪಿನ ಸದಸ್ಯನಾಗಿದ್ದು, ಕಡೆಯ ಪಕ್ಷ ಮೂರು ವರ್ಷಗಳವರೆಗೆ ಸೀಮಾಸುಂಕ ಮತ್ತು ಕೇಂದ್ರ ಅಬ್ಕಾರಿ ಕಲೆಕ್ಟರ್ ಹುದ್ದೆ ಇಲ್ಲವೇ ಅದಕ್ಕೆ ಸರಿಸಮಾನವಾದ ಅಥವಾ ಹೆಚ್ಚಿನ ಹುದ್ದೆಯಲ್ಲಿದ್ದಿರಬೇಕು. ಈ ಸದಸ್ಯರುಗಳಲ್ಲಿ ಒಬ್ಬರನ್ನು ಅಧ್ಯಕ್ಷರನ್ನಾಗಿಯೂ, ಒಬ್ಬರು ಅಥವಾ ಹೆಚ್ಚಿಗೆ ಸದಸ್ಯರನ್ನು ಉಪಾಧ್ಯಕ್ಷರನ್ನಾಗಿಯೂ ನೇಮಿಸಲಾಗುತ್ತದೆ. ಉಪಾಧ್ಯಕ್ಷರಲ್ಲಿ ಒಬ್ಬರನ್ನು ಹಿರಿಯ ಉಪಾಧ್ಯಕ್ಷರನ್ನಾಗಿ ನೇಮಿಸಲೂಬಹುದು. ಅಧ್ಯಕ್ಷರು ಲಿಖಿತ ಆದೇಶದ ಮೂಲಕ ಅವರಿಗೆ ವಹಿಸಿಕೊಟ್ಟ ಅಧಿಕಾರವನ್ನು ಹಾಗೂ ಕರ್ತವ್ಯಗಳನ್ನು ಹಿರಿಯ ಉಪಾಧ್ಯಕ್ಷರು ಮತ್ತು ಉಪಾಧ್ಯಕ್ಷರು ಚಲಾಯಿಸಬಹುದು.

ಕರನಿರ್ಧಾರದ ಉದ್ದಿಶ್ಯಕ್ಕೋಸ್ಕರ ನಿಗದಿಪಡಿಸಿದ ಸುಂಕದ ದರ ಮತ್ತು ಸರಕುಗಳ ಮೌಲ್ಯಗಳಿಗೆ ಸಂಬಂಧಿಸಿದ ಹಾಗೆ ಮಾಡಿದ ಯಾವುದೇ ತೀರ್ಮಾನ ಅಥವಾ ಆದೇಶದ ವಿರುದ್ಧ ಮಾಡಿದ ಮೇಲ್ಮನವಿಗಳನ್ನು, ಕಡೆಯ ಪಕ್ಷ ಇಬ್ಬರು ಸದಸ್ಯರಿರುವ (ಅವರೊಳ್ಳಬ್ಬರು ನ್ಯಾಯಿಕ ಸದಸ್ಯರು, ಇನ್ನೊಬ್ಬರು ತಾಂತ್ರಿಕ ಸದಸ್ಯರು) ಪೀಠವು ವಿಚಾರಣೆ ಮಾಡುತ್ತದೆ. ಈ ಪೀಠಗಳನ್ನು ವಿಶೇಷ ಪೀಠಗಳೆಂದು ಕರೆಯಲಾಗುತ್ತದೆ. ಇಂಥ ಪೀಠಗಳು ಈಗ ಐದು ಇದ್ದು ಇವುಗಳು ತಮ್ಮ ನಡವಳಿಕಗಳನ್ನು ನಂ. 2, ವೆಸ್ಟ್ ಬ್ಲಾಕ್, ಆರ್.ಕೆ. ಪುರಂ, ನವದೆಹಲಿ, ಇಲ್ಲಿ

ನಡೆಸುತ್ತಿವೆ. ಇತರ ಪೀಠಗಳಲ್ಲೂ ಸಾಮಾನ್ಯವಾಗಿ ಒಬ್ಬ ನ್ಯಾಯಿಕ ಸದಸ್ಯ ಮತ್ತು ಒಬ್ಬ ತಾಂತ್ರಿಕ ಸದಸ್ಯರನ್ನೊಳಗೊಂಡು ಇಬ್ಬರು ಸದಸ್ಯರುಗಳಿರುತ್ತಾರೆ. ಈ ಇತರೆ ಪೀಠಗಳು, ಸುಂಕದ ದರ ಮತ್ತು ಸರಕುಗಳ ಮೌಲ್ಯಗಳಿಗೆ ಸಂಬಂಧಿಸಿಲ್ಲದ ವಿಷಯಗಳನ್ನು ಕುರಿತಾದ ಮೇಲ್ಮನವಿಗಳನ್ನು ವಿಚಾರಣೆ ಮಾಡುತ್ತವೆ. ಈ ಪೀಠಗಳನ್ನು ಪ್ರಾದೇಶಿಕ ಪೀಠಗಳೆಂದು ಹೆಸರಿಸಲಾಗಿದೆ. ಸದ್ಯದಲ್ಲಿ ನಾಲ್ಕು ಪ್ರಾದೇಶಿಕ ಪೀಠಗಳು ಕೆಲಸ ಮಾಡುತ್ತಿವೆ. ಅವುಗಳೆಂದರೆ, ಕೇಂದ್ರ ಪ್ರಾದೇಶಿಕ ಪೀಠ, ನವದೆಹಲಿ, ಪೂರ್ವ ಪ್ರಾದೇಶಿಕ ಪೀಠ, ಕಲ್ಕತ್ತಾ, ದಕ್ಷಿಣ ಪ್ರಾದೇಶಿಕ ಪೀಠ, ಚೆನ್ನೈ, ಪಶ್ಚಿಮ ಪ್ರಾದೇಶಿಕ ಪೀಠ, ಮುಂಬೈ.

ಇದಲ್ಲದೆ, ಅಧ್ಯಕ್ಷರು ಏಕಸದಸ್ಯ ಪೀಠವನ್ನೂ ಸಹ ರಚಿಸಲು ಅಧಿಕಾರ ಹೊಂದಿದ್ದಾರೆ. ಏಕ ಸದಸ್ಯ ಪೀಠಗಳು, ಕರನಿರ್ಧರಣೆಯ ಉದ್ದೇಶಕ್ಕಾಗಿ ನಿಗದಿಪಡಿಸುವ ಅಬ್ಕಾರಿ ಸುಂಕದ ದರ, ಸರಕುಗಳ ಮೌಲ್ಯ ಅಥವಾ ಸುಂಕದಲ್ಲಿನ ವ್ಯತ್ಯಾಸ ಇವುಗಳಿಗೆ ಸಂಬಂಧಿಸಿಲ್ಲದ ಮೇಲ್ಮನವಿಗಳನ್ನು, ಮತ್ತು ಜುಲ್ಮಾನೆ ಅಥವಾ ದಂಡ ರೂ. 50,000/-ವನ್ನು ಮೀರದೆ ಇರುವ ಪ್ರಕರಣಗಳಲ್ಲಿ ಸಲ್ಲಿಸಿದ ಮೇಲ್ಮನವಿಗಳನ್ನು ಇತ್ಯರ್ಥಗೊಳಿಸಬಹುದು. ಮೇಲ್ಮನವಿ ನ್ಯಾಯಾಧಿಕರಣವು, ಪಕ್ಷಕಾರರಿಗೆ ತಮ್ಮ ವಾದವನ್ನು ಮಂಡಿಸಲು ಅವಕಾಶಕೊಟ್ಟು, ಯಾವ ತೀರ್ಮಾನ/ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಲಾಗಿತ್ತೋ ಅದನ್ನು ದೃಢೀಕರಿಸುವ ಇಲ್ಲವೇ ಮಾರ್ಪಾಡು ಮಾಡುವ ಇಲ್ಲವೇ ರದ್ದುಗೊಳಿಸುವ ಆಜ್ಞೆಗಳನ್ನು ತನಗೆ ಸೂಕ್ತ ಕಂಡಂತೆ ಮಾಡಲು ಅಧಿಕಾರ ಹೊಂದಿದೆ. ಇಲ್ಲದಿದ್ದರೆ, ಯಾವ ಪ್ರಾಧಿಕಾರ ಮಾಡಿದ ತೀರ್ಮಾನ/ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಲಾಗಿತ್ತೋ ಆ ಪ್ರಾಧಿಕಾರಕ್ಕೆ ಪ್ರಕರಣವನ್ನು ಹಿಂದಿರುಗಿಸಿ, ತಾನು ಕೊಟ್ಟ ನಿರ್ದೇಶನಗಳನ್ನು ಗಮನದಲ್ಲಿಟ್ಟುಕೊಂಡು, ಅವಶ್ಯಕತೆಬಿದ್ದರೆ ಹೆಚ್ಚಿನ ಸಾಕ್ಷ್ಯವನ್ನು ಪಡೆದುಕೊಂಡು, ಹೊಸದಾಗಿ ತೀರ್ಮಾನಕೊಡುವಂತೆ ಆಜ್ಞೆಯನ್ನು ಮಾಡಬಹುದು. ಮೇಲ್ಮನವಿ ಪ್ರಾಧಿಕಾರವು ತನ್ನ ತೀರ್ಮಾನವನ್ನು ತಾನೇ ಪುನರವಲೋಕನ ಮಾಡುವ ಹಾಗಿಲ್ಲ. ಹೇಗಾದರೂ, ಮೇಲ್ನೋಟಕ್ಕೆ ದಾಖಲೆಗಳಿಂದ ಗೋಚರಿಸುವ ತಪ್ಪುಗಳಿದ್ದರೆ, ಇಂಥ ತಪ್ಪುಗಳನ್ನು ಕಲೆಕ್ಟರ್ ಆಗಲಿ, ಮೇಲ್ಮನವಿದಾರನಾಗಲೀ ಆಜ್ಞೆಯ ತಾರೀಖಿನಿಂದ ನಾಲ್ಕು ವರ್ಷಗಳ ಒಳಗೆ ನ್ಯಾಯಾಧಿಕರಣದ ಗಮನಕ್ಕೆ ತಂದರೆ, ತಾನು ಮಾಡಿದ ಯಾವುದೇ ಆದೇಶವನ್ನು ಅದು ತಿದ್ದುಪಡಿ ಮಾಡಬಹುದು.

ಸಾಮಾನ್ಯವಾಗಿ ಮೇಲ್ಮನವಿ ನ್ಯಾಯಾಧಿಕರಣವು, ಕೆಳಗಿನ ಪ್ರಾಧಿಕಾರಗಳು ಸರಕುಗಳ ಮೇಲೆ ವಿಧಿಸಿದ ಸುಂಕ, ಅಥವಾ ಹೇರಿದ ದಂಡವನ್ನು ಠೇವಣಿ ಇಟ್ಟ ಮೇಲೆ ಮೇಲ್ಮನವಿಗಳನ್ನು ಸ್ವೀಕರಿಸುತ್ತದೆ. ಆದರೆ ಇಂಥ ಠೇವಣಿಯನ್ನು ಒತ್ತಾಯಮಾಡಿದರೆ, ಪಕ್ಷಗಾರನಿಗೆ ಮುಗ್ಗಟ್ಟು ಆಗುತ್ತದೆ ಎಂದು ಅದಕ್ಕೆ ಅನಿಸಿದರೆ, ಆ ಸಂದರ್ಭದಲ್ಲಿ ಸುಂಕ/ದಂಡದ ಪೂರ ಮೊಬಲಗನ್ನು ಇಲ್ಲವೇ ಭಾಗಶಃ ಮೊಬಲಗನ್ನು ಠೇವಣಿ ಮಾಡುವಂತೆ ಒತ್ತಾಯಿಸದೇ ಮೇಲ್ಮನವಿಯನ್ನು ವಿಚಾರಣೆ ಮಾಡಲು ಅದಕ್ಕೆ ಅಧಿಕಾರವಿದೆ. ಆದರೆ, ಹೀಗೆ ಠೇವಣಿಯಿಂದ ವಿನಾಯಿತಿ ನೀಡುವುದಕ್ಕೆ, ರಾಜಸ್ವದ ಹಿತದೃಷ್ಟಿಯಿಂದ, ತನಗೆ ಸೂಕ್ತವೆನಿಸಿದ ನಿಬಂಧನೆಗಳನ್ನು

ಅದು ವಿಧಿಸಬಹುದು. ಮೇಲ್ಮನವಿ ಪ್ರಾಧಿಕಾರದ ಪೀಠಗಳ ತೀರ್ಮಾನಗಳನ್ನು ಹೆಚ್ಚಿನ ಸದಸ್ಯರುಗಳು ನಿರ್ಧರಿಸಿದಂತೆ ಮಾಡಲಾಗುತ್ತದೆ. ಪೀಠದ ಸದಸ್ಯರುಗಳಿಗೆ ಯಾವುದೇ ಒಂದು ಅಂಶದ ಮೇಲೆ ಸಮಸಮನಾಗಿ ಅಭಿಪ್ರಾಯಬೇಧವಿದ್ದರೆ, ಅವರು ಆ ಅಂಶ ಅಥವಾ ಅಂಶಗಳನ್ನು ಅಧ್ಯಕ್ಷರ ಪರಾಮರ್ಶೆಗೆ ಕಳುಹಿಸಬೇಕು. ಅಧ್ಯಕ್ಷರು ಆ ಅಂಶ ಅಥವಾ ಅಂಶಗಳನ್ನು ತಾವೇ ವಿಚಾರಣೆ ಮಾಡಬಹುದು ಅಥವಾ ನ್ಯಾಯಾಧಿಕರಣದ ಇತರ ಸದಸ್ಯ/ಸದಸ್ಯರುಗಳಿಗೆ ಪರಾಮರ್ಶೆಗೆ ಕಳುಹಿಸಬಹುದು. ಇಂಥ ಅಂಶ/ಅಂಶಗಳ ಮೇಲಿನ ತೀರ್ಮಾನವನ್ನು ಒಟ್ಟಾರೆ ಅಧಿಕ ಸಂಖ್ಯೆಯ ಸದಸ್ಯರುಗಳ ಅಭಿಪ್ರಾಯದಂತೆ ತೆಗೆದುಕೊಳ್ಳಲಾಗುತ್ತದೆ.

ಪಕ್ಷಗಾರರಲ್ಲೊಬ್ಬರ ಕೋರಿಕೆಯಂತೆ, ಮೇಲ್ಮನವಿ ನ್ಯಾಯಾಧಿಕರಣವು, ಯಾವುದೇ ಕಾನೂನಿನ ಪ್ರಶ್ನೆಯನ್ನು, ಪ್ರಕರಣದ ಸಂಗತಿಗಳ ದಾಖಲೆಯನ್ನು ಸಿದ್ಧಪಡಿಸಿ, ಉಚ್ಚನ್ಯಾಯಾಲಯದ ಪರಾಮರ್ಶೆಗೆ ಕಳುಹಿಸಬಹುದಾಗಿದೆ. ಉಚ್ಚನ್ಯಾಯಾಲಯದ ಪರಾಮರ್ಶೆಗೆ ಬಂದ ಪ್ರಕರಣವನ್ನು ಕನಿಷ್ಟ ಇಬ್ಬರು ನ್ಯಾಯಾಧೀಶರುಗಳು ಇರುವ ಪೀಠ ವಿಚಾರಣೆ ಮಾಡುತ್ತದೆ. ಉಚ್ಚ ನ್ಯಾಯಾಲಯದ ತೀರ್ಮಾನ ಹೆಚ್ಚಿನ ನ್ಯಾಯಾಧೀಶರ ಅಭಿಪ್ರಾಯದಂತೆ ಆಗುತ್ತದೆ. ಯಾವುದೇ ಒಂದು ವಿಷಯದ ಮೇಲೆ, ವಿವಿಧ ಉಚ್ಚ ನ್ಯಾಯಾಲಯಗಳು ಭಿನ್ನಾಭಿಪ್ರಾಯ ಹೊಂದಿದ್ದರೆ, ಮೇಲ್ಮನವಿ ನ್ಯಾಯಾಧಿಕರಣವು, ಆ ವಿಷಯವನ್ನು ರಾಷ್ಟ್ರಾಧ್ಯಕ್ಷರ ಮೂಲಕ ಸರ್ವೋಚ್ಚ ನ್ಯಾಯಾಲಯಕ್ಕೆ ನೇರವಾಗಿ ಪರಾಮರ್ಶೆ ಮಾಡಬಹುದು. ತನ್ನ ಪರಾಮರ್ಶೆಗೆ ಬಂದ ಯಾವುದೇ ವಿಷಯವನ್ನು, ವಿಚಾರಣೆ ಮಾಡಿದ ನಂತರ ಸರ್ವೋಚ್ಚನ್ಯಾಯಾಲಯ ತೀರ್ಮಾನಿಸುತ್ತದೆ. ಸರ್ವೋಚ್ಚ ನ್ಯಾಯಾಲಯದ ಅಥವಾ ಉಚ್ಚ ನ್ಯಾಯಾಲಯದ ಅಭಿಪ್ರಾಯ/ತೀರ್ಮಾನ ಬಂದ ನಂತರ ಮೇಲ್ಮನವಿ ನ್ಯಾಯಾಧಿಕರಣವು ಆ ಅಭಿಪ್ರಾಯ/ತೀರ್ಮಾನಕ್ಕನುಗುಣವಾಗಿ ತನ್ನ ಮುಂದಿರುವ ಮೇಲ್ಮನವಿಯನ್ನು ತೀರ್ಮಾನಿಸುತ್ತದೆ. ಮೇಲ್ಮನವಿ ನ್ಯಾಯಾಧಿಕರಣವು ಸಂಗತಿಗಳನ್ನು ನಿರ್ಧರಿಸುವ ಕಟ್ಟಕಡೆಯ ಪ್ರಾಧಿಕಾರ. ಹೇಗಾದರೂ, ತನ್ನ ಪರಾಮರ್ಶೆಗಾಗಿ ಬಂದ ಯಾವುದಾದರೂ ವಿಷಯದ ಮೇಲೆ ಉಚ್ಚ ನ್ಯಾಯಾಲಯ ಕೊಟ್ಟ ತೀರ್ಪಿನ ಮೇಲೆ ಸರ್ವೋಚ್ಚ ನ್ಯಾಯಾಲಯಕ್ಕೆ ಮೇಲ್ಮನವಿ ಮಾಡಬಹುದು. ಆದರೆ ಹಾಗೆ ಮೇಲ್ಮನವಿ ಸಲ್ಲಿಸಲು, ಇದು ಯೋಗ್ಯವಾದ ಪ್ರಕರಣವೆಂದು ಉಚ್ಚ ನ್ಯಾಯಾಲಯ ಶಿಫಾರಸು ಪತ್ರ ಕೊಡಬೇಕು. ಕರನಿರ್ಧರಿಸುವ ಉದ್ದೇಶಕ್ಕಾಗಿ ನಿಗದಿಪಡಿಸಿದ ಸುಂಕದ ದರ ಮತ್ತು ಸರಕುಗಳ ಮೌಲ್ಯಕ್ಕೆ ಸಂಬಂಧಿಸಿದಂತೆ ಮೇಲ್ಮನವಿ ನ್ಯಾಯಾಧಿಕರಣ ಮಾಡಿದ ಆಜ್ಞೆಯ ಮೇಲೂ ಸರ್ವೋಚ್ಚನ್ಯಾಯಾಲಯಕ್ಕೆ ಮೇಲ್ಮನವಿ ಮಾಡಬಹುದು. ಇಲ್ಲಿ ಹೇಳಿರುವ ಸಂದರ್ಭಗಳನ್ನು ವಿನಾಯಿಸಿ ಮೇಲ್ಮನವಿ ನ್ಯಾಯಾಧಿಕರಣದ ತೀರ್ಮಾನವೇ ಅಂತಿಮವಾಗಿದ್ದು, ಇಬ್ಬರು ಪಕ್ಷಗಾರರೂ ಅದಕ್ಕೆ ಬದ್ಧರಾಗಿರುತ್ತಾರೆ. ಸೀಮಾಸುಂಕ ಅಧಿನಿಯಮ, 1962, ಇದಕ್ಕೆ ಒಳಪಟ್ಟು, ಮೇಲ್ಮನವಿ ನ್ಯಾಯಾಧಿಕರಣವು, ತನ್ನದೇ ಆದ ಹಾಗೂ ಪೀಠಗಳ ಪ್ರಕ್ರಿಯೆಯನ್ನು ಅಲ್ಲದೆ ಪೀಠಗಳು ಎಲ್ಲಿ ಕೂರಬೇಕೆಂಬುದನ್ನು ನಿರ್ಧರಿಸುವುದು ಸೇರಿದಂತೆ,

ನಿಯಂತ್ರಿಸಿಕೊಳ್ಳಲು ಅಧಿಕಾರ ಹೊಂದಿದೆ. ಈ ಅಧಿಕಾರ ತನ್ನ ಕರ್ತವ್ಯಗಳನ್ನು ನಿರ್ವಹಿಸುವಾಗ ಉದ್ಭವಿಸುವ ಎಲ್ಲಾ ವಿಷಯಗಳಿಗೂ ವಿಸ್ತರಿಸುತ್ತದೆ. ಸಿವಿಲ್ ಪ್ರಕ್ರಿಯಾ ಸಂಹಿತೆ, 1908ರ ಕೆಳಗೆ ಒಂದು ಸಿವಿಲ್ ನ್ಯಾಯಾಲಯದಲ್ಲಿ ನಿಹಿತವಾಗಿರುವ ಅಧಿಕಾರಗಳು, ಅಂದರೆ ದಸ್ತಾವೇಜುಗಳನ್ನು ಕಂಡುಹಿಡಿಯುವುದು ಮತ್ತು ಪರಿಶೀಲನೆ, ಯಾವನೇ ವ್ಯಕ್ತಿಯನ್ನು ಒತ್ತಾಯವಾಗಿ ಹಾಜರುಮಾಡಿಸಿ, ಅವನನ್ನು ಸತ್ಯ ಪ್ರತಿಜ್ಞೆಯ ಮೇಲೆ ವಿಚಾರಣೆ ಮಾಡುವುದು ಲೆಕ್ಕ ಪುಸ್ತಕಗಳನ್ನು ಇತರ ದಸ್ತಾವೇಜುಗಳನ್ನು ಹಾಜರುಪಡಿಸುವಂತೆ ನಿರ್ಬಂಧಿಸುವುದು ಮತ್ತು ಆಯೋಗಗಳನ್ನು ನೇಮಕ ಮಾಡುವುದು, ಈ ಅಧಿಕಾರಗಳು ಮೇಲ್ಮನವಿ ನ್ಯಾಯಾಧಿಕರಣದಲ್ಲೂ ನಿಹಿತವಾಗಿವೆ. ನ್ಯಾಯಾಧಿಕರಣದ ಮುಂದೆ ಇರುವ ನಡವಳಿಕೆಗಳು ಭಾರತ ದಂಡಸಂಹಿತೆಯ 193ನೆಯ ಮತ್ತು 228ನೆಯ ಖಂಡಗಳ ಅರ್ಥವ್ಯಾಪ್ತಿಯಲ್ಲಿ ಬರುವ ನ್ಯಾಯಿಕ ನಡವಳಿಕೆಗಳೆಂದೇ ಪರಿಗಣಿಸಲಾಗಿದೆ. 1973ರ ದಂಡ ಪ್ರಕ್ರಿಯಾ ಸಂಹಿತೆಯ 195ನೆಯ ಖಂಡ ಮತ್ತು 26ನೇ ಅಧ್ಯಾಯ ಉದ್ದೇಶಗಳಿಗೋಸ್ಕರ, ನ್ಯಾಯಾಧಿಕರಣವನ್ನು ವ್ಯವಹಾರ ನ್ಯಾಯಾಲಯವೆಂದೇ ಪರಿಗಣಿಸಲಾಗಿದೆ.

ಮೇಲ್ಮನವಿ ನ್ಯಾಯಾಧಿಕರಣದ ಮುಂದೆ ಮೇಲ್ಮನವಿಯನ್ನು ವಿಚಾರಣೆ ಮಾಡುವಾಗ, ಪಕ್ಷಗಾರನು ತನ್ನ ಪರವಾಗಿ ವಾದ ಮಾಡಲು ವಕೀಲರನ್ನು ನೇಮಿಸಿಕೊಳ್ಳಬಹುದು. ಅಥವಾ ತನ್ನ ಪ್ರತಿನಿಧಿಗೆ ಅಧಿಕಾರ ಕೊಡಬಹುದು. ಪ್ರತಿನಿಧಿ ಎಂದರೆ ಅವನ ನೌಕರನೂ ಆಗಬಹುದು. ಅಂದರೆ, ನ್ಯಾಯಾಧಿಕರಣದ ಮುಂದೆ ಪಕ್ಷಗಾರನ ಪರ ಹಾಜರಾಗುವವನು, ವಕೀಲನಲ್ಲದೆ, ಬೇರೆ ಯಾವ ವ್ಯಕ್ತಿಯಾದರೂ ಆಗಬಹುದು. ಅಂಥ ವ್ಯಕ್ತಿ ಹಾಜರಾಗಿ ಪಕ್ಷಗಾರನ ಪರ ವಾದ ಮಂಡಿಸಬಹುದು.

# ಸಹಕಾರಿ ಮೇಲ್ಮನವಿ ನ್ಯಾಯಾಲಯಗಳು

ವಿವಿಧ ಸಹಕಾರಿ ಸಂಘಗಳ ಅಧಿನಿಯಮಗಳ ಕೆಳಗಡೆ, ರಾಜ್ಯಗಳ ಮೇಲ್ಮನವಿ ನ್ಯಾಯಾಲಯಗಳನ್ನೂ ಮತ್ತು ನ್ಯಾಯಾಧಿಕರಣಗಳನ್ನೂ ಹೆಚ್ಚು ಕಡಿಮೆ ಎಲ್ಲಾ ರಾಜ್ಯಗಳಲ್ಲೂ ಸ್ಥಾಪಿಸಲಾಗಿದೆ. ಇವುಗಳಲ್ಲಿ ಸಾಧಾರಣವಾಗಿ, ರಾಜ್ಯ ಸರ್ಕಾರವು ಕಾಲಕಾಲಕ್ಕೆ ಅವಶ್ಯಕವೆಂದು ನಿರ್ಧರಿಸಿದ ಹಾಗೆ, ಒಬ್ಬ ಅಧ್ಯಕ್ಷ ಮತ್ತು ಇತರ ಸದಸ್ಯರುಗಳು ಇರುತ್ತಾರೆ.

ಸಹಕಾರ ಸಂಘಗಳ ಅಧಿನಿಯಮಗಳು ಸಹಕಾರಿ ನ್ಯಾಯಾಲಯಗಳನ್ನು ಸ್ಥಾಪಿಸಿವೆ. ಈ ನ್ಯಾಯಾಲಯಗಳು, ಸಹಕಾರ ಸಂಘದ ಅಂಗರಚನೆ, ಅದರ ಸಮಿತಿಗಳ ಅಧಿಕಾರಿಗಳ ಚುನಾವಣೆಗಳು (ನಿರ್ದಿಷ್ಟ ಸಂಘಗಳ ಸಮಿತಿಗಳು ಮತ್ತು ಅಧಿಕಾರಿಗಳ ಚುನಾವಣೆಗಳನ್ನು ಹೊರತುಪಡಿಸಿ) ಸರ್ವಸದಸ್ಯರ ಸಭೆಗಳು, ಸಂಘದ ವ್ಯಾಪಾರದ ನಿರ್ವಹಣೆ, ಈ ವಿಷಯಗಳಿಗೆ ಸಂಬಂಧಿಸಿದ ವ್ಯಾಜ್ಯಗಳನ್ನು ವಿಚಾರಣೆ ಮಾಡುತ್ತವೆ. ಇವುಗಳನ್ನು ನ್ಯಾಯಾಲಯದ ಗಮನಕ್ಕೆ ತರುವವರೆಂದರೆ, ವ್ಯಾಜ್ಯದ ಪಕ್ಷಕಾರ ಅಥವಾ ಪಕ್ಷಕಾರರುಗಳು, ಆ ಸಂಘವು ಸದಸ್ಯತ್ವ ಹೊಂದಿರುವ ಸಂಯುಕ್ತ ಸಂಘ, ಅಥವಾ ಸಂಘದ ಒಬ್ಬ ಸಾಲಿಗ, ಇತ್ಯಾದಿ ಆಗಿರಬಹುದು. ಸಹಕಾರಿ ನ್ಯಾಯಾಲಯಗಳು ಆಯಾ ರಾಜ್ಯಗಳ ಅಥವಾ ಆ ರಾಜ್ಯದ ಒಂದು ಭಾಗದ ಮೇಲೆ ಅಧಿಕಾರ ವ್ಯಾಪ್ತಿಯನ್ನು ಹೊಂದಿರುತ್ತವೆ.

ಸಹಕಾರ ಸಂಘಗಳ ಅಧಿನಿಯಮದ ಕೆಳಗೆ ವ್ಯಾಜ್ಯವನ್ನು ವಿಚಾರಣೆ ಮಾಡುವ ಸಹಕಾರಿ ನ್ಯಾಯಾಲಯಕ್ಕೆ, ವ್ಯವಹಾರ ನ್ಯಾಯಾಲಯಗಳಿಗೆ 1908ರ ವ್ಯವಹಾರ ಪ್ರಕ್ರಿಯಾ ಸಂಹಿತೆಯು ನಿಹಿತಗೊಳಿಸಿರುವ ಅಧಿಕಾರದ ರೀತಿಯಲ್ಲೇ ಸಾಕ್ಷಿಗಳಿಗೆ ಹಾಜರಾಗಲು ಸಮನ್ಸ್ ಕಳುಹಿಸುವ, ಹಾಗೆಯೇ ಪಕ್ಷಗಾರರನ್ನು ಕರೆಯಿಸುವ ಅವರನ್ನು ಪ್ರತಿಜ್ಞಾಪೂರ್ವಕವಾಗಿ ಸಾಕ್ಷ್ಯವನ್ನು ಕೊಡುವಂತೆ ಒತ್ತಾಯಿಸುವ ಇತ್ಯಾದಿ ಅಧಿಕಾರಗಳು ನಿಹಿತವಾಗಿವೆ.

ಯಾವುದೇ ಪಕ್ಷಗಾರ, ಸಹಕಾರಿ ನ್ಯಾಯಾಲಯ ಅಥವಾ ರಿಜಿಸ್ಟ್ರಾರ್‌ರವರು ಕೊಟ್ಟ ಯಾವುದೇ ತೀರ್ಮಾನ ಅಥವಾ ಆದೇಶದಿಂದ ಅಸಂತುಷ್ಟನಾದರೆ, ಅವನು ಸಹಕಾರಿ ಮೇಲ್ಮನವಿ ನ್ಯಾಯಾಲಯಕ್ಕೆ ಮೇಲ್ಮನವಿ ಮಾಡಬಹುದು. ಈ ಸಹಕಾರಿ ಮೇಲ್ಮನವಿ ನ್ಯಾಯಾಲಯಗಳು, ಮೇಲ್ಮನವಿಯಲ್ಲಾಗಲೀ ಅಥವಾ ಪುನರ್ವಿಮರ್ಶೆಯಲ್ಲಾಗಲೀ ಕೊಟ್ಟ ಆದೇಶ/ಆಜ್ಞೆಗಳು ಅಂತಿಮವಾದವುಗಳಾಗಿದ್ದು, ಅವನ್ನು ಯಾವ ವ್ಯವಹಾರ ನ್ಯಾಯಾಲಯದಲ್ಲಾಗಲೀ ಅಥವಾ ರಾಜಸ್ವ ನ್ಯಾಯಾಲಯದಲ್ಲೇ ಆಗಲಿ ಪ್ರಶ್ನಿಸುವ ಹಾಗಿಲ್ಲ. ಆದರೆ ಅನುಚ್ಛೇದ 226 ಮತ್ತು 227ರ ಕೆಳಗೆ ಉಚ್ಚ ನ್ಯಾಯಾಲಯದ ಅಧಿಕಾರ ವ್ಯಾಪ್ತಿಗೂ ಮತ್ತು ಅನುಚ್ಛೇದ 136ರ ಕೆಳಗೆ ಸರ್ವೋಚ್ಚ ನ್ಯಾಯಾಲಯದ ಅಧಿಕಾರ ವ್ಯಾಪ್ತಿಗೆ ಚ್ಯುತಿಯೇನೂ ಇಲ್ಲ. ಸೂಕ್ತವಾದ ಪ್ರಕರಣಗಳಲ್ಲಿ ಬಾಧಿತನಾದ ಪಕ್ಷಗಾರ ಉಚ್ಚ

ನ್ಯಾಯಾಲಯವನ್ನಾಗಲೀ ಅಥವಾ ಸರ್ವೋಚ್ಚ ನ್ಯಾಯಾಲಯವನ್ನಾಗಲೀ ಮೊರೆ ಹೋಗಬಹುದು.

# ಚುನಾವಣಾ ಆಯೋಗ

ಸಂವಿಧಾನದ 324ನೆಯ ಅನುಚ್ಛೇದವು 'ಚುನಾವಣಾ ಆಯೋಗ'ವೆಂದು ಹೆಸರಿಸಲಾದ ಒಂದು ಸ್ವತಂತ್ರ ನಿಕಾಯದ ರಚನೆಯನ್ನು ಮಾಡುವುದಕ್ಕೆ ವಿಧಾಯಕವನ್ನು ಒಳಗೊಂಡಿದ್ದು, ಅದಕ್ಕೆ ಈ ಕೆಳಗಿನ ವಿಶೇಷ ಅಧಿಕಾರಗಳನ್ನು ನಿಹಿತಗೊಳಿಸಿದೆ:

i. ಪಾರ್ಲಿಮೆಂಟಿನ ಮತ್ತು ಪ್ರತಿ ರಾಜ್ಯದ ಶಾಸನ ಸಭೆಗಳ ಎಲ್ಲ ಚುನಾವಣೆಗಳಿಗೆ ಮತದಾರರ ಪಟ್ಟಿಯನ್ನು ಸಿದ್ಧಪಡಿಸುವ, ಅಲ್ಲದೆ ರಾಷ್ಟ್ರಪತಿ ಮತ್ತು ಉಪರಾಷ್ಟ್ರಪತಿಯವರ ಸ್ಥಾನಗಳಿಗೆ ಚುನಾವಣೆಗಳನ್ನು ನಡೆಸುವ ಮೇಲ್ವಿಚಾರಣೆ, ನಿರ್ದೇಶನ ಮತ್ತು ನಿಯಂತ್ರಣ. 'ಮೇಲ್ವಿಚಾರಣೆ', 'ನಿರ್ದೇಶನ' ಮತ್ತು 'ನಿಯಂತ್ರಣ' ಎಂಬ ಪದಗಳು, ಕಾನೂನಿನಲ್ಲಿ ಹೇಳದೇ ಬಿಟ್ಟ, ಮುಂಗಾಣಲಾಗದಾದ ಸಂದರ್ಭಗಳಲ್ಲಿ ಕಾರ್ಯ ಪ್ರವೃತ್ತರಾಗಲು ಚುನಾವಣಾ ಆಯೋಗಕ್ಕೆ ಅಧಿಕಾರ ಇದೆ ಎನ್ನುವ ಅರ್ಥವನ್ನು ಒಳಗೊಂಡಿದೆ; ಅಲ್ಲದೆ ಚುನಾವಣೆ ನಡೆಸಲು ಅವಶ್ಯಕವಾದ ಕ್ರಮಗಳನ್ನು ಎಂದರೆ ಮತದಾನ ಕೇಂದ್ರಗಳನ್ನು ಆರಿಸಿಕೊಳ್ಳುವುದು, ಮರು ಮತದಾನವನ್ನು ನಡೆಸುವುದು, ಅಥವಾ ಮತದಾರರ ಪಟ್ಟಿಯ ವಿಶೇಷ ಸಂಸ್ಕರಣೆ ಮಾಡುವುದರ ಮೂಲಕ ಯಾವುದೇ ಚುನಾವಣೆ ಕ್ಷೇತ್ರಕ್ಕೆ ಸೇರದ ಪ್ರದೇಶವನ್ನು ಕೈಬಿಡುವುದು, ಇವುಗಳನ್ನು ಕೈಗೊಳ್ಳುವ ಅಧಿಕಾರವನ್ನೂ ಕೊಟ್ಟಿದೆ. ಈ ಅಧಿಕಾರಗಳು, ಅನುಚ್ಛೇದ 327 ಅಥವಾ 328ರ ಕೆಳಗೆ ಪಾರ್ಲಿಮೆಂಟು ಅಂಗೀಕರಿಸಿದ ಯಾವುದೇ ಕಾನೂನಿಗೆ ಒಳಪಟ್ಟಿವೆ.

ii. 1951ರ ಪ್ರಜಾಪ್ರಾತಿನಿಧ್ಯ ಅಧಿನಿಯಮದ 169ನೆಯ ಖಂಡದ ಕೆಳಗೆ, ಚುನಾವಣಾ ಚಿನ್ಹೆಗಳಿಗೆ ಸಂಬಂಧಪಟ್ಟ ಆಜ್ಞೆಗಳನ್ನು ಮಾಡಲು, ರಾಜಕೀಯ ಪಕ್ಷಗಳಿಗೆ ಚಿನ್ಹೆಗಳನ್ನು ಹಂಚಿಕೆಮಾಡುವ ವಿಷಯದಲ್ಲಿ ಉದ್ಭವಿಸುವ ವ್ಯಾಜ್ಯಗಳನ್ನು ಪರಿಹರಿಸಲು ಮತ್ತು ಈ ಉದ್ದೇಶಕ್ಕಾಗಿ ಪಕ್ಷಗಳನ್ನು ಮಾನ್ಯತೆ ಮಾಡುವುದಕ್ಕೆ ಮತ್ತು ಮಾನ್ಯತೆಯನ್ನು ಹಿಂತೆಗೆದುಕೊಳ್ಳುವುದಕ್ಕೆ ಚುನಾವಣಾ ಆಯೋಗಕ್ಕೆ ಅಧಿಕಾರ ಇದೆ. ಈ ಪ್ರಸಂಗದಲ್ಲಿ, ಒಂದೇ ಪಕ್ಷದೊಳಗಿನ ಪ್ರತಿಕಕ್ಷಿ ಗುಂಪುಗಳ ಸ್ಥಾನಮಾನವನ್ನು ನಿರ್ಧರಿಸಲು, ಆಯೋಗಕ್ಕೆ ಅಧಿಕಾರ ಇದೆ. ಪಕ್ಷಗಳ ವಿಲೀನ ಅಥವಾ ವಿಭಜನೆಯ ಪರಿಣಾಮವನ್ನು ನಿರ್ಧರಿಸಲು, ಮತ್ತು ಈ ಉದ್ದೇಶಕ್ಕಾಗಿ ಒಂದು ರಾಜಕೀಯ ಪಕ್ಷದೊಳಗಿನ ಸಿಡಿದುಹೋದ ಗುಂಪುಗಳ ನಡುವಿನ ವ್ಯಾಜ್ಯಗಳನ್ನು ತೀರ್ಮಾನ ಮಾಡಲೂ, ಆಯೋಗಕ್ಕೆ ಅಧಿಕಾರವಿದೆ.

iii. ಪಾರ್ಲಿಮೆಂಟಿನ ಅಥವಾ ವಿಧಾನಸಭಾ ಸದಸ್ಯನನ್ನು ಕ್ರಮವಾಗಿ ಅನುಚ್ಛೇದ 103(2)ರ ಮತ್ತು 192(2)ರ ಕೆಳಗೆ ಅನರ್ಹತೆಗೊಳಿಸುವ ಪ್ರಶ್ನೆಯ ಮೇಲೆ ರಾಷ್ಟ್ರಪತಿಯವರಿಗಾಗಲೀ ಅಥವಾ ಯಾವುದೇ ರಾಜ್ಯದ

ರಾಜ್ಯಪಾಲರಿಗಾಗಲೀ ಚುನಾವಣಾ ಆಯೋಗವು ಸಲಹೆಯನ್ನು ಕೊಡಬಹುದು.

ಒಕ್ಕೂಟದ ಮತ್ತು ರಾಜ್ಯಗಳ ಸಮಗ್ರ ಚುನಾವಣಾ ಯಂತ್ರವು ಈ ಕೇಂದ್ರೀಕೃತ ನಿಕಾಯದ ಕೈಗಳಲ್ಲಿ ಇದೆ; ಮತದಾರರ ಪಟ್ಟಿಯನ್ನು ಸಿದ್ಧಪಡಿಸುವುದರಲ್ಲಿ ಮತ್ತು ಸಂಸ್ಕರಣದಲ್ಲಿ ನಿರತರಾದ, ಚುನಾವಣೆ ಅಧಿಕಾರಿಗಳಿಗೆ, ಮತಗಟ್ಟೆ/ಮತದಾನ ಅಧಿಕಾರಿಗಳಿಗೆ ಮತ್ತು ಇತರರಿಗೆ, ಯಾವುದೇ ಸ್ಥಳೀಯ ಸರ್ಕಾರದಿಂದ ಭಾರತದ ಯಾವುದೇ ಪ್ರಜೆಗೆ ಅನ್ಯಾಯವಾಗದ ಹಾಗೆ, ಮಾರ್ಗದರ್ಶಿ ಆಜ್ಞೆಗಳನ್ನು ಕೊಡಲು ಚುನಾವಣಾ ಆಯೋಗಕ್ಕೆ ಅಧಿಕಾರ ಇದೆ. ಪ್ರಾದೇಶಿಕ ಕಮಿಷನರುಗಳು ಆಯೋಗಕ್ಕೆ ನೆರವು ನೀಡುತ್ತಾರೆ. ಈ ಕಮಿಷನರುಗಳು ರಾಜ್ಯ ಸರ್ಕಾರಗಳ ನಿಯಂತ್ರಣಕ್ಕೆ ಒಳಪಟ್ಟಿಲ್ಲದೆ, ನೇರವಾಗಿ ಆಯೋಗದ ಕೆಳಗೆ ಕೆಲಸ ಮಾಡುತ್ತಾರೆ. ಮುಖ್ಯ ಚುನಾವಣಾ ಕಮಿಷನರ್ ಅವರ ಶಿಫಾರಸಿನ ಮೇರೆಗೆ ಮಾತ್ರ ಅವರನ್ನು ಕೆಲಸದಿಂದ ತೆಗೆಯಬಹುದೇ ವಿನಾ, ಅನ್ಯಥಾ ಇಲ್ಲ.

ಕಾರ್ಯಾಂಗದ ನಿಯಂತ್ರಣದಿಂದ ಚುನಾವಣಾ ಆಯೋಗವು ಮುಕ್ತವಾಗಿದೆ; ಅದರ ಸದಸ್ಯರುಗಳನ್ನು ಹಾಗೂ ಪ್ರಾದೇಶಿಕ ಕಮಿಷನರುಗಳನ್ನು ಮುಖ್ಯ ಚುನಾವಣಾ ಕಮಿಷನರ್ ಅವರ ಶಿಫಾರಸು ಇಲ್ಲದೆ ರಾಷ್ಟ್ರಪತಿಯವರು ತೆಗೆದುಹಾಕುವ ಹಾಗಿಲ್ಲ. ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶರೊಬ್ಬರನ್ನು ಅಧಿಕ್ಷೇಪದಿಂದ ತೆಗೆದು ಹಾಕುವುದಕ್ಕೆ ಸಂಬಂಧಿಸಿದ ಹಾಗೆ ಸಂವಿಧಾನದ 124(4)ನೆಯ ಅನುಚ್ಛೇದದಲ್ಲಿ ಅವಕಾಶವಿರುವ ರೀತಿಯಲ್ಲಿ ಮಾತ್ರವಲ್ಲದೆ ಮುಖ್ಯ ಚುನಾವಣಾ ಕಮಿಷನರ್ ಅವರನ್ನು ಅನ್ಯಥಾ ತೆಗೆಯಲಾಗುವುದಿಲ್ಲ. ಅಲ್ಲದೆ, ಅವರ ನೇಮಕವಾದನಂತರ, ಅವರಿಗೆ ಅನಾನುಕೂಲವಾಗುವ ರೀತಿಯಲ್ಲಿ ಮುಖ್ಯ ಚುನಾವಣಾ ಕಮಿಷನರ್ ಅವರ ಸೇವಾ ನಿಬಂಧನೆಗಳನ್ನು ಬದಲಾಯಿಸುವ ಹಾಗಿಲ್ಲ;

ತತ್ಕಾಲದಲ್ಲಿ ಅಧಿಕಾರದಲ್ಲಿರುವ ಪಕ್ಷದ ಹತೋಟಿಯಿಂದ ಚುನಾವಣೆಗಳು ಮುಕ್ತವಾಗಿರುವಂತೆ ಖಾತರಿಪಡಿಸಿಕೊಳ್ಳುವುದೇ, ಈ ಉಪಬಂಧಗಳ ಕೆಳಗೆ ಇರುವ ಉದ್ದೇಶವಾಗಿದೆ. ಹೀಗಿಲ್ಲದಿದ್ದರೆ, ಪ್ರಾತಿನಿಧಿಕ ಪ್ರಜಾಪ್ರಭುತ್ವವು ತನ್ನ ಅರ್ಥವನ್ನೇ ಕಳೆದುಕೊಳ್ಳುತ್ತದೆ.

## ಮೇಲ್ಮನವಿಗಳು

i. ಅನುಚ್ಛೇದ 136(1) ಅರ್ಥವ್ಯಾಪ್ತಿಯಲ್ಲಿ ಚುನಾವಣಾ ಆಯೋಗವು ಒಂದು ನ್ಯಾಯಾಧಿಕರಣವಾಗಿದೆ. ಹೇಗೆಂದರೆ, ಅದು ಸಂವಿಧಾನದಿಂದ ಅಸ್ತಿತ್ವಕ್ಕೆ ಬಂದಿದ್ದು, ಅದಕ್ಕೆ ನಿಹಿತವಾಗಿರುವ ಅಧಿಕಾರಗಳಲ್ಲಿ ಕೆಲವು ನ್ಯಾಯ ನಿರ್ಣಯ ಕೊಂಡುವಂಥದ್ದಾಗಿದೆ. ಉದಾಹರಣೆಗೆ, ಪಕ್ಷಗಳಿಗೆ ಚುನಾವಣಾ ಚಿಹ್ನೆಗಳ ಹಂಚಿಕೆ ಮತ್ತು ಈ ಸಂಬಂಧದಲ್ಲಿ ತಲೆದೋರುವ ವಿವಾದಗಳನ್ನು ತೀರ್ಮಾನಿಸುವುದು. ಹೀಗಾಗಿ, ಆಯೋಗದ ಆದೇಶಗಳ ಮೇಲೆ ಮೇಲ್ಮನವಿಮಾಡಲು ಅನುಚ್ಛೇದ 136ರ ಕೆಳಗೆ ಸರ್ವೋಚ್ಚ ನ್ಯಾಯಾಯಕ್ಕೆ ವಿಶೇಷ ಅನುಮತಿ ಅರ್ಜಿಯನ್ನು ಸಲ್ಲಿಸಬಹುದು.

ii. ಆಯೋಗದ ಯಾವುದೇ ಆಜ್ಞೆ/ಆದೇಶ ಸಂವೈಧಾನಿಕ ಸಿಂದುತ್ವವನ್ನು ಒಳಗೊಂಡಿದ್ದರೆ ಅಂಥ ಆಜ್ಞೆ/ಆದೇಶವನ್ನು ಅನುಚ್ಛೇದ 32ರ ಕೆಳಗೆ ಸರ್ವೋಚ್ಚ ನ್ಯಾಯಾಲಯದಲ್ಲಿ ಪ್ರಶ್ನಿಸಬಹುದಾಗಿದೆ.

iii. ಉಚ್ಚ ನ್ಯಾಯಾಲಯವೂ ಸೇರಿದಂತೆ ಬೇರೆಯಾವ ನ್ಯಾಯಾಲಯಗಳಿಗೂ, ಚುನಾವಣಾ ಆಯೋಗದ ಮೇಲೆ, ನಿಯಂತ್ರಣವಾಗಲೀ ಅಥವಾ ಮೇಲ್ಮನವಿ/ಮೇಲ್ವಿಚಾರಣೆ ಅಧಿಕಾರವಾಗಲೀ ಇಲ್ಲ.

# ಕುಟುಂಬ ನ್ಯಾಯಾಲಯಗಳು

1984ನೆಯ ಇಸವಿಯವರೆಗೆ, ಹಿಂದೂ, ಕ್ರಿಶ್ಚಿಯನ್, ಮುಸ್ಲಿಂ ಮತ್ತು ಪಾರ್ಸೀ ಕಾನೂನುಗಳ ಕೆಳಗೆ ವಿವಾಹ ವಿಚ್ಛೇದನ ಕೋರಿದ ದಾವೆಯನ್ನು ಮತ್ತು ಜೀವನಾಂಶಕೋರಿದ ಅರ್ಜಿಯನ್ನು ಸಾಧಾರಣ ನ್ಯಾಯಾಲಯಗಳು, ಅದರಲ್ಲೂ ಜಿಲ್ಲಾ ನ್ಯಾಯಾಲಯಗಳು ತೀರ್ಮಾನ ಮಾಡುತ್ತಿದ್ದವು; ಜಿಲ್ಲಾ ನ್ಯಾಯಾಲಯಗಳಿಗೆ, ಆಯಾ ಅಧಿನಿಯಮಗಳ ಕೆಳಗೆ ಈ ವಿಷಯಗಳನ್ನು ಕುರಿತಾದ ಅಧಿಕಾರ ವ್ಯಾಪ್ತಿಯನ್ನು ನಿಹಿತಗೊಳಿಸಲಾಗಿತ್ತು. ಈ ನ್ಯಾಯಾಲಯಗಳು ಅನುಸರಿಸುತ್ತಿದ್ದ ಪ್ರಕ್ರಿಯೆಯನ್ನು, ಕ್ರಮವಾಗಿ ವ್ಯವಹಾರ ಪ್ರಕ್ರಿಯಾ ಸಂಹಿತೆ ಮತ್ತು ದಂಡ ಪ್ರಕ್ರಿಯಾ ಸಂಹಿತೆಯಲ್ಲಿ ಉಪಬಂಧಗೊಳಿಸಲಾಗಿತ್ತು. ಇದು ತೊಡಕಾದ ಸುತ್ತು ಬಳಸಿನ ಪ್ರಕ್ರಿಯೆಯಾಗಿದ್ದು, ನ್ಯಾಯಾಲಯಗಳಿಗೆ ತಾವೇ ತನಿಖೆಮಾಡುವ ಅಧಿಕಾರ ಕಾನೂನಿನನ್ವಯ ಇರಲಿಲ್ಲ. ಆದುದರಿಂದ, ಇಂಥ ಮೊಕದ್ದಮೆಗಳು ಅಂತಿಮ ನಿರ್ಧಾರವನ್ನು ಮುಟ್ಟಲು ಅನೇಕ ವೇಳೆ ದೀರ್ಘಕಾಲವನ್ನು ತೆಗೆದುಕೊಳ್ಳುತ್ತಿದ್ದವು.

ಪರಿಣಾಮಕಾರಿಯಾದ ಹಾಗೂ ಕಡಿಮೆ ವೆಚ್ಚದ ಪರಿಹಾರಗಳನ್ನು ನೀಡಲು, 1984ರ ಕುಟುಂಬ ನ್ಯಾಯಾಲಯಗಳ ಅಧಿನಿಯಮದ ಕೆಳಗೆ ಕುಟುಂಬ ನ್ಯಾಯಾಲಯಗಳನ್ನು ಸ್ಥಾಪಿಸಲಾಯಿತು. ಪಕ್ಷಗಾರರ ನಡುವೆ ಅನ್ಯೋನ್ಯ ಒಪ್ಪಂದ ಉಂಟುಮಾಡುವುದಕ್ಕೆ ತನ್ನ ವಿವೇಚನೆಯನ್ನು ಉಪಯೋಗಿಸುವ ಅಧಿಕಾರವನ್ನು ಅಧಿನಿಯಮ ನ್ಯಾಯಾಲಯಕ್ಕೆ ಕೊಡಮಾಡಿದೆ.

21.8.1984ನೆಯ ತಾರೀಖಿನ ಭಾರತದ ರಾಜಪತ್ರ, ಭಾಗ II, ಖಂಡ 2ರಲ್ಲಿ ಕುಟುಂಬ ನ್ಯಾಯಾಲಯಗಳನ್ನು ಸ್ಥಾಪಿಸಿರುವುದರ ಉದ್ದೇಶ ಮತ್ತು ಕಾರಣಗಳನ್ನು ವಿಷದೀಕರಿಸಲಾಗಿದೆ. ವಿವಾಹಗಳ ಮತ್ತು ಕುಟುಂಬ ವ್ಯವಹಾರಗಳ ಹಾಗೂ ಅವಕ್ಕೆ ಸೇರಿದ ಇತರ ವಿಷಯಗಳಿಗೆ ಸಂಬಂಧಿಸಿದ ವ್ಯಾಜ್ಯಗಳನ್ನು ಶೀಘ್ರವಾಗಿ ಇತ್ಯರ್ಥಪಡಿಸುವುದಕ್ಕಾಗಿ ಸಂಧಾನ ಮಾರ್ಗಕ್ಕೆ ಒತ್ತಾಸೆ ಕೊಡುವುದೇ ಆ ಉದ್ದೇಶವಾಗಿದೆ.

ಒಂದು ದಾವೆಯ ಅಥವಾ ನಡವಳಿಕೆಗಳ ವಸ್ತು ವಿಷಯವನ್ನು ಕುರಿತಂತೆ ಇತ್ಯರ್ಥಕ್ಕೆ ಬರಲು, ಅಥವಾ ಪಕ್ಷಗಾರರ ಆಪಾದನೆ/ನಿರಾಕರಣೆಯಲ್ಲಿ ಸತ್ಯವೇನು ಎಂಬುದನ್ನು ಗುರುತಿಸಲು, ಕುಟುಂಬ ನ್ಯಾಯಾಲಯಗಳು ತಮ್ಮದೇ ಆದ ಪ್ರಕ್ರಿಯೆಯನ್ನು ರಚಿಸಿಕೊಳ್ಳಬಹುದು.

ಈ ನ್ಯಾಯಾಲಯಗಳು ವಿಚಾರಣೆಗೆ ಸ್ವೀಕರಿಸಬಹುದಾದ ವಿಷಯಗಳೆಂದರೆ:

i. ಪತಿಯಾಗಲೀ, ಪತ್ನಿಯಾಗಲೀ ತನ್ನ ವಿವಾಹವನ್ನು ಶೂನ್ಯವೆಂದು ಘೋಷಿಸಬೇಕೆಂದೋ, ರದ್ದುಗೊಳಿಸಬೇಕೆಂದೋ ಅಥವಾ ವಿಚ್ಛೇದನ ಬೇಕೆಂದೋ ಕೋರಿಕೊಂಡ ದಾವೆ ಅಥವಾ ನಡವಳಿಕೆ.

ii. ವಿವಾಹದ ಸಿಂಧುತ್ವದ ಬಗ್ಗೆ ಅಥವಾ ಯಾವುದೇ ವ್ಯಕ್ತಿಯ ವೈವಾಹಿಕ ಸ್ಥಿತಿಯು ಬಗ್ಗೆ ಘೋಷಣೆಯನ್ನು ಕೋರಿಕೊಂಡ ದಾವೆ ಅಥವಾ ನಡವಳಿಕೆ.

iii. ಸತಿಪತಿಗಳ ಆಸ್ತಿಯನ್ನು ಕುರಿತ ಅಥವಾ ಅವರಲ್ಲಿ ಒಬ್ಬರ ಆಸ್ತಿಯನ್ನು ಕುರಿತ, ಅವರ ನಡುವಿನ ದಾವೆ ಅಥವಾ ನಡವಳಿಕೆ.

iv. ವೈವಾಹಿಕ ಸಂಬಂಧದಿಂದ ಉದ್ಭವವಾದ ಸಂದರ್ಭಗಳಲ್ಲಿ ಪ್ರತಿಬಂಧಕಾಜ್ಞೆಯನ್ನು ಕೋರಿದ ದಾವೆ ಮತ್ತು ನಡವಳಿಕೆ.

v. ಒಬ್ಬ ವ್ಯಕ್ತಿಯ ಔರಸತ್ವದ ಬಗ್ಗೆ ಘೋಷಣೆಯನ್ನು ಕೋರಿದ ದಾವೆ ಮತ್ತು ನಡವಳಿಕೆ.

vi. ಜೀವನಾಂಶಕ್ಕಾಗಿ ದಾವೆ ಮತ್ತು ನಡವಳಿಕೆ.

vii. ಅಪ್ರಾಪ್ತ ವಯಸ್ಕನ ಪಾಲಕತ್ವಕ್ಕೆ ಅಥವಾ ಅವನನ್ನು ವಶದಲ್ಲಿಟ್ಟುಕೊಳ್ಳುವುದಕ್ಕೆ ಅಥವಾ ಅವನನ್ನು ಸಂಪರ್ಕಿಸಲು ಅವಕಾಶ ಕೋರಿದುದಕ್ಕೆ ಸಂಬಂಧಿಸಿದ ದಾವೆ ಅಥವಾ ನಡವಳಿಕೆ.

ತಮ್ಮ ಅಧಿಕಾರ ವ್ಯಾಪ್ತಿಯನ್ನು ಹೆಚ್ಚು ಸಾಮರ್ಥ್ಯಪೂರ್ಣವಾಗಿ, ಹೆಚ್ಚು ಪರಿಣಾಮಕಾರಿಯಾಗಿ ಮತ್ತು ಅಧಿನಿಯಮದ ಉದ್ದೇಶಗಳಿಗನುಸಾರವಾಗಿ ಚಲಾಯಿಸಲು ಸಾಧ್ಯವಾಗುವಂತೆ ಸಮಾಜ ಕಲ್ಯಾಣ ಸಂಸ್ಥೆಗಳು (ನಿಯೋಗಗಳು) ಮತ್ತು ಮಧ್ಯಸ್ಥಿಕೆದಾರರುಗಳು (ಕೌನ್ಸಿಲರ್ಸ್) ಇವರುಗಳೊಂದಿಗೆ ಸಹಯೋಗಮಾಡಲು ಅಧಿನಿಯಮದ 5ನೆಯ ಮತ್ತು 6ನೆಯ ಖಂಡಗಳು ನ್ಯಾಯಾಲಯಕ್ಕೆ ಅಧಿಕಾರ ಕೊಟ್ಟಿವೆ.

ಕುಟುಂಬ ನ್ಯಾಯಾಲಯದ ಮಧ್ಯವರ್ತಿ ಆದೇಶಗಳನ್ನು ಹೊರತುಪಡಿಸಿ, ಅದುಕೊಟ್ಟ ಯಾವುದೇ ಅಂತಿಮ ತೀರ್ಮಾನ ಅಥವಾ ಆದೇಶದ ಮೇಲೆ, ಕಾನೂನಿನ ಪ್ರಶ್ನೆ ಮತ್ತು ಸಂಗತಿಯ ಪ್ರಶ್ನೆ ಎರಡಕ್ಕೂ ಸಂಬಂಧಿಸಿದಂತೆ, ಉಚ್ಚ ನ್ಯಾಯಾಲಯಕ್ಕೆ ಮೇಲ್ಮನವಿ ಮಾಡಬಹುದು.

*ವಕೀಲರುಗಳು ಹಾಜರಾಗುವುದಕ್ಕೆ ಅವಕಾಶವಿಲ್ಲದಿರುವುದು ಕುಟುಂಬ ನ್ಯಾಯಾಲಯಗಳ ಒಂದು ವೈಶಿಷ್ಟ್ಯ. ಸಲಹೆಕೊಡುವುದು ಮತ್ತು ಸಂಧಾನ ಮಾಡುವುದು ಈ ನ್ಯಾಯಾಲಯದ ನಡವಳಿಕೆಗಳ ವಿಶೇಷ ಲಕ್ಷಣ.

ಸಾಧಾರಣವಾಗಿ, ಬಹುಮಟ್ಟಿನ ಪ್ರಕರಣಗಳಲ್ಲಿ ವಕೀಲರುಗಳು ಹಾಜರಾಗುವುದು ಕುಟುಂಬ ನ್ಯಾಯಾಲಯಗಳಿಗೆ ಬೇಕಿಲ್ಲ. ಜಟಿಲವಾದ ನಡವಳಿಕೆಗಳನ್ನು ಮತ್ತು ನಿಯಮಗಳನ್ನು ಅನುಸರಿಸುವುದರಲ್ಲಿ ಸ್ವಲ್ಪ ಕಷ್ಟವನ್ನು ಎದುರಿಸಬೇಕಾದ್ದಾಗ್ಯೂ ಏನಾದರೂ ಕೊರತೆ ಉಂಟಾದಲ್ಲಿ ಕುಟುಂಬ ಸಂಸ್ಥೆಗಳ ಮತ್ತು ಮಧ್ಯಸ್ಥಿಕೆದಾರರುಗಳ ನೆರವಿನಿಂದ ಆ ಕೊರತೆಯನ್ನು ತುಂಬಲಾಗುತ್ತದೆ.

---

*ಭಾಷಾಂತರಕಾರನ ಟಿಪ್ಪಣಿ: ಕರ್ನಾಟಕ ರಾಜ್ಯದಲ್ಲಿರುವ ಕುಟುಂಬ ನ್ಯಾಯಾಲಯಗಳ ಅಧಿನಿಯಮದ ಕೆಳಗೆ ರೂಪಿಸಲಾದ ನಿಯಮಗಳಲ್ಲಿ, 13ನೇ ನಿಯಮದಡಿ ಅರ್ಜಿಸಲ್ಲಿಸಿ ವಕೀಲರುಗಳನ್ನು ನೇಮಕಮಾಡಿಕೊಳ್ಳಲು ಅವಕಾಶವಿದೆ.

ನ್ಯಾಯಾಧೀಶನು ಕಾಲಕ್ರಮದಲ್ಲಿ ಶೀಘ್ರನ್ಯಾಯವನ್ನೂ ಮತ್ತು ರಾಜೀ ಪರಿಹಾರವನ್ನು ದೊರಕಿಸಿಕೊಡಬಲ್ಲನು.

ಹೇಗಾದರೂ, ಜಟಿಲವಾದ ಪ್ರಕರಣಗಳಲ್ಲಿ, ವ್ಯಾಜ್ಯಗಳನ್ನು ಬೇಗ ವಿಲೇಮಾಡುವುದಕ್ಕಾಗಿ, ಪಕ್ಷಗಾರರು ಇಷ್ಟಪಟ್ಟಲ್ಲಿ ಮತ್ತು ನ್ಯಾಯಾಧೀಶರಿಗೆ ಸೂಕ್ತವೆಂದು ತೋರಿದರೆ, ವಕೀಲರುಗಳು ಹಾಜರಾಗುವುದಕ್ಕೆ ಅನುಮತಿಸಬಹುದು.

ಸಾಧಾರಣ ವ್ಯಾಜ್ಯಗಳಲ್ಲಿ ಅನುಸರಿಸುವ ನಡವಳಿಕೆಗಳನ್ನು ಬಿಟ್ಟು, ಹೆಚ್ಚು ಹಣ ಮತ್ತು ಸಮಯದ ವ್ಯಯವಿಲ್ಲದೆ, ಶೀಘ್ರ ನ್ಯಾಯವನ್ನು ದೊರಕಿಸಿಕೊಡಬಲ್ಲ ತಮ್ಮದೇ ಆದ ಪ್ರಕ್ರಿಯೆಯನ್ನು ರೂಪಿಸಿಕೊಳ್ಳುವುದರ ಮೇಲೆ ಕುಟುಂಬ ನ್ಯಾಯಾಲಯದ ಸಾರ್ಥಕತೆ ಅವಲಂಬಿತವಾಗಿದೆ.

ಕುಟುಂಬ ನ್ಯಾಯಾಲಯದ ತೀರ್ಮಾನದಿಂದ ಉಚ್ಚ ನ್ಯಾಯಾಲಯಗಳಿಗೂ ಮತ್ತು ಸಂವಿಧಾನದ ಅನುಚ್ಛೇದ 136ರ ಕೆಳಗೆ ಸರ್ವೋಚ್ಚ ನ್ಯಾಯಾಲಯಕ್ಕೂ ಮೇಲ್ಮನವಿ ಸಲ್ಲಿಸಬಹುದು.

# ವಿದೇಶಿ ವಿನಿಮಯ ಮೇಲ್ಮನವಿ ಮಂಡಳಿ

ವಿದೇಶಿ ವಿನಿಮಯ ಮೇಲ್ಮನವಿ ಮಂಡಲಿಯನ್ನು 1973ರ ವಿದೇಶಿ ವಿನಿಮಯ ನಿಯಂತ್ರಣ ಅಧಿನಿಯಮದ 52ನೆಯ ಖಂಡದಲ್ಲಿ ಉಪಬಂಧಿಸಿರುವಂತೆ ಸ್ಥಾಪಿಸಲಾಗಿದೆ. 1973ರ ವಿದೇಶಿ ವಿನಿಮಯ ನಿಯಂತ್ರಣ ಅಧಿನಿಯಮದ ಉಲ್ಲಂಘನೆ ಅಥವಾ ಅದರ ಕೆಳಗೆ ಮಾಡಿದ ಅಪರಾಧಗಳಿಗಾಗಿ, ಅಧಿನಿಯಮದ 50ನೆಯ ಮತ್ತು 51ನೆಯ ಖಂಡಗಳ ಕೆಳಗೆ ಕೊಟ್ಟ ಯಾವುದೇ ನ್ಯಾಯ ತೀರ್ಮಾನದ ಆದೇಶದಿಂದ ಅಸಂತುಷ್ಟನಾದ ವ್ಯಕ್ತಿ, ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ, ಈ ಮಂಡಲಿಗೆ ಮೇಲ್ಮನವಿಯನ್ನು ಸಲ್ಲಿಸಬಹುದು. ಈ ಮೇಲ್ಮನವಿ, ಕಾನೂನಿನ ಪ್ರಶ್ನೆಯನ್ನೂ ಮತ್ತು ಸಂಗತಿಯ ಪ್ರಶ್ನೆಯನ್ನೂ ಒಳಗೊಂಡಿರಬಹುದು. ಈ ಮಂಡಲಿಯ ಪ್ರಧಾನ ಪೀಠ ದೆಹಲಿಯಲ್ಲಿದೆ.

ಈ ಮಂಡಲಿಯಲ್ಲಿ ಒಬ್ಬ ಅಧ್ಯಕ್ಷರು ಮತ್ತು ನಾಲ್ಕು ಮಂದಿಯನ್ನು ಮೀರದ ಸದಸ್ಯರುಗಳು ಇರುತ್ತಾರೆ. ಅಧ್ಯಕ್ಷರ ಹುದ್ದೆಗೆ ನೇಮಕ ಹೊಂದಲು, ಕಡೆಯ ಪಕ್ಷ ಹತ್ತು ವರ್ಷಗಳವರೆಗಾದರೂ ಒಂದು ಸಿವಿಲ್ ನ್ಯಾಯಿಕ ಹುದ್ದೆಯಲ್ಲಿದ್ದಿರಬೇಕು, ಅಥವಾ ಕೇಂದ್ರ ಸರ್ಕಾರದ ಕಾನೂನು ಸೇವೆ, ಮೊದಲನೆ ದರ್ಜೆಯಲ್ಲಿ ಕಡೆಯ ಪಕ್ಷ ಮೂರು ವರ್ಷಗಳವರೆಗಾದರೂ ಸದಸ್ಯನಾಗಿದ್ದಿರಬೇಕು, ಅಥವಾ ಕಡೆಯ ಪಕ್ಷ ಹತ್ತು ವರ್ಷಗಳವರೆಗೆ ವಕೀಲಿ ವೃತ್ತಿ ಮಾಡುತ್ತಿರುವವರಾಗಿರಬೇಕು.

ಮಂಡಲಿಯ ಅಧಿಕಾರಗಳನ್ನು ಮತ್ತು ಕರ್ತವ್ಯಗಳನ್ನು ಅಧ್ಯಕ್ಷರು ಮತ್ತು ಇನ್ನೊಬ್ಬರು ಸದಸ್ಯರು ಅಥವಾ ಅಧ್ಯಕ್ಷರು ರಚಿಸಿದ ಇಬ್ಬರು ಸದಸ್ಯರನ್ನೊಳಗೊಂಡ ಪೀಠವು ಚಲಾಯಿಸಬಹುದು.

ಮಂಡಲಿಗೆ ಪುನರ್ವಿಲೋಕನಾ ಅಧಿಕಾರವೂ ಇದೆ. ಅದು ತಾನಾಗಿಯೋ ಅಥವಾ ಬೇರೆ ರೀತಿಯಲ್ಲೋ, ನ್ಯಾಯ ನಿರ್ಣಯ ಮಾಡುವ ಅಧಿಕಾರಿಯ ಆದೇಶದ ಕಾನೂನು ಬದ್ಧತೆ, ಔಚಿತ್ಯ ಅಥವಾ ಅದು ನ್ಯೂನತೆಯಿಂದ ಮುಕ್ತ ಎಂಬುದನ್ನು ಪರೀಕ್ಷಿಸಲು ದಾಖಲೆಗಳನ್ನು ತರಿಸಿಕೊಂಡು ತನಗೆ ಯೋಗ್ಯವೆಂದು ತೋರುವ ಆದೇಶವನ್ನು ಮಾಡಬಹುದು.

ಮೇಲ್ಮನವಿ ಮಂಡಲಿಯು, ಪಕ್ಷಗಾರರ ವಾದವಿವಾದಗಳನ್ನು ಕೇಳಿದ ನಂತರ ಮತ್ತು ತನಗೆ ಯೋಗ್ಯವೆಂದು ಕಂಡುಬಂದ ಮುಂದಿನ ತಪಾಸಣೆ/ವಿಚಾರಣೆಯನ್ನು ಮಾಡಿ, ಅಧಿಕಾರಿಯ ನ್ಯಾಯ ನಿರ್ಣಯದ ಆದೇಶವನ್ನು ಸ್ಥಿರಕರಿಸಬಹುದು, ಮಾರ್ಪಾಡು ಮಾಡಬಹುದು ಅಥವಾ ತಳ್ಳಿಹಾಕಬಹುದು. ಸಿ.ಇ.ಜಿ.ಎ.ಟಿ. ಏಕಸ್ವಾಮ್ಯ ಆಯೋಗ, ಗ್ರಾಹಕರ ದೂರುಗಳ ಪರಿಹಾರ ಆಯೋಗ, ಇವುಗಳಂತಲ್ಲದೆ ಈ ಮಂಡಲಿಯ ಆದೇಶದಿಂದ, ಕಾನೂನು ಪ್ರಶ್ನೆಯ ಮೇಲೆ ಮಾತ್ರ ಉಚ್ಚ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಬಹುದು. ಇಂಥ ಮೇಲ್ಮನವಿಯನ್ನು ಆದೇಶ ಕೈಸೇರಿದ 60ದಿನಗಳ ಒಳಗಾಗಿ ಸಲ್ಲಿಸಬೇಕು. ಸಂಗತಿಗಳ ನಿರ್ಣಯ, ಜುಲ್ಮಾನೆ ಅಥವಾ ದಂಡವನ್ನು ಹೆಚ್ಚಿಸಿದುದನ್ನು ಅಥವಾ ಇಳಿಸಿದುದನ್ನು

ಪ್ರಶ್ನಿಸುವ ಮೇಲ್ಮನವಿಗಳಿಗೆ ಅವಕಾಶ ಮಾಡಿಕೊಟ್ಟಿಲ್ಲ. ವಿದೇಶೀ ವಿನಿಮಯ ಮಂಡಲಿಯ ಆಜ್ಞೆ ಅಥವಾ ಆದೇಶವೇ ಅಂತಿಮವಾದುದು. ಆದರೂ, ಈ ವಿಷಯಗಳಲ್ಲಿ ಮಂಡಲಿಯ ಆದೇಶದ ಮೇಲಾಗಲೀ, ಅಥವಾ ಮೇಲ್ಮನವಿಯಲ್ಲಿ ಉಚ್ಚ ನ್ಯಾಯಾಲಯ ಕೊಟ್ಟ ಆದೇಶದ ಮೇಲಾಗಲೀ ಸರ್ವೋಚ್ಚ ನ್ಯಾಯಾಲಯವನ್ನು ಸಂಪರ್ಕಿಸುವುದಕ್ಕೆ ಸಂವಿಧಾನದ 136ನೇ ಅನುಚ್ಛೇದದಂತೆ, ಅವಕಾಶವಿದೆ.

# ಕಳ್ಳ ಸಾಗಣೆದಾರರ, ಮುಟ್ಟುಗೋಲು ಹಾಕಿಕೊಂಡ ಆಸ್ತಿಯ ಮೇಲ್ಮನವಿ ನ್ಯಾಯಾಧಿಕರಣ

ಕಳ್ಳ ಸಾಗಣೆದಾರರು ಮತ್ತು ವಿದೇಶಿ ವಿನಿಮಯ ಕೈವಾಡದಾರರು ಕಾನೂನಿಗೆ ವಿರುದ್ಧವಾಗಿ ಸಂಪಾದಿಸಿದ ಆಸ್ತಿಗಳನ್ನು ಮುಟ್ಟುಗೋಲು ಹಾಕಿಕೊಳ್ಳಲು, 1976ರಲ್ಲಿ ಕೇಂದ್ರ ಸರ್ಕಾರವು, ಕಳ್ಳಸಾಗಣೆದಾರರ ಮತ್ತು ವಿದೇಶೀ ವಿನಿಮಯ ಕೈವಾಡದಾರರ (ಆಸ್ತಿಮುಟ್ಟುಗೋಲು) ಅಧಿನಿಯಮವನ್ನು ಜಾರಿಗೆ ತಂದಿತು. ಹೀಗೆ ಮುಟ್ಟುಗೋಲು ಹಾಕಿಕೊಳ್ಳುವುದಕ್ಕೆ ಈ ಅಧಿನಿಯಮದ ಕೆಳಗೆ ಕೇಂದ್ರ ಸರ್ಕಾರ ನೇಮಕ ಮಾಡಿದ ಸಕ್ಷಮ ಪ್ರಾಧಿಕಾರವು ಆಜ್ಞೆ ಮಾಡಬೇಕು. ಈ ಪ್ರಾಧಿಕಾರಕ್ಕೆ ಆಸ್ತಿಯನ್ನು ಮುಟ್ಟುಗೋಲು ಹಾಕಿಕೊಳ್ಳಲು ಮತ್ತು ಕೆಲವು ಪ್ರಕರಣಗಳಲ್ಲಿ ಮುಟ್ಟುಗೋಲಿಗೆ ಬದಲಾಗಿ ಜುಲ್ಮಾನೆ ವಿಧಿಸಲೂ ಅಧಿಕಾರವಿದೆ. ಅಲ್ಲದೆ ಕೆಲವು ನ್ಯಾಸಗಳ ವಿರುದ್ಧ ಮಾಡಿದ ಆಪಾದನೆಗಳ ಪ್ರಕರಣದಲ್ಲಿ, ಆ ನ್ಯಾಸಗಳು ಆಸ್ತಿಯಲ್ಲಿ ತೊಡಗಿಸಿದ ಹಣದ ಮೂಲ ಯಾವುದೆಂದು ತಪಾಸಣೆಮಾಡಿ ಅಂಥ ಆಸ್ತಿಗಳನ್ನೂ ಕೂಡ ಮುಟ್ಟುಗೋಲು ಹಾಕಿಕೊಳ್ಳಬಹುದು.

ಅಧಿನಿಯಮದ ಅನುಸಾರ, ಅಸಂತುಷ್ಟನಾದ ಪಕ್ಷಗಾರ, ಮೇಲ್ಕಂಡ ಯಾವುದೇ ಕ್ರಮಗಳ ವಿರುದ್ಧ ಅಧಿನಿಯಮದ ಕೆಳಗೆ ವಿಚಾರಣೆ ಮಾಡುವುದಕ್ಕೆ ಕೇಂದ್ರ ಸರ್ಕಾರದಿಂದ ರಚಿತವಾದ ಒಂದು ಮೇಲ್ಮನವಿ ನ್ಯಾಯಾಧಿಕರಣಕ್ಕೆ ಮೇಲ್ಮನವಿಯನ್ನು ಸಲ್ಲಿಸಬಹುದು. ಈ ನ್ಯಾಯಾಧಿಕರಣವು ಒಬ್ಬ ಅಧ್ಯಕ್ಷರನ್ನು ಮತ್ತು ಕೇಂದ್ರ ಸರ್ಕಾರವು ಸೂಕ್ತವೆಂದು ನಿಗದಿಮಾಡಿದ ಸಂಖ್ಯೆಯ ಸದಸ್ಯರುಗಳನ್ನು ಒಳಗೊಂಡಿರುತ್ತದೆ. ವರ್ತಮಾನದಲ್ಲಿ ನ್ಯಾಯಾಧಿಕರಣವು ಒಬ್ಬ ಅಧ್ಯಕ್ಷರನ್ನೂ ಮತ್ತು ಇಬ್ಬರು ಸದಸ್ಯರುಗಳನ್ನೂ ಒಳಗೊಂಡಿದೆ.

ಅಧ್ಯಕ್ಷರು, ಸರ್ವೋಚ್ಚ ನ್ಯಾಯಾಲಯದ ಅಥವಾ ಉಚ್ಚ ನ್ಯಾಯಾಲಯದ ನ್ಯಾಯಾಧೀಶನಾಗಿರಬೇಕು, ಇಲ್ಲವೇ ಆಗಿದ್ದಿರಬೇಕು, ಇಲ್ಲವೇ ನ್ಯಾಯಾಧೀಶನಾಗುವ ಅರ್ಹತೆ ಪಡೆದಿರಬೇಕು. ನ್ಯಾಯಾಧಿಕರಣದ ಪ್ರಧಾನ ಕಛೇರಿಯು ದೆಹಲಿಯಲ್ಲಿದ್ದು, ಎಲ್ಲಾ ಮೇಲ್ಮನವಿಗಳೂ ಸಾಧಾರಣವಾಗಿ ದೆಹಲಿಯಲ್ಲೇ ವಿಚಾರಣೆಯಾಗುತ್ತವೆ. ಆದರೆ, ಸಾರ್ವಜನಿಕ ಹಿತದೃಷ್ಟಿಯಿಂದ ಈ ಮೇಲ್ಮನವಿಗಳನ್ನು ಅಧ್ಯಕ್ಷರ ವಿವೇಚನೆಗೊಳಪಟ್ಟು, ಬೊಂಬಾಯಿ (ಮುಂಬೈ) ಕಲ್ಕತ್ತಾ ಅಥವಾ ಮದರಾಸಿನಲ್ಲಿ (ಚೆನ್ನೈ) ಅಥವಾ ಇನ್ನಾವುದೇ ಸ್ಥಳದಲ್ಲಿ ವಿಚಾರಣೆ ಮಾಡಬಹುದು.

ಮೇಲ್ಮನವಿಯನ್ನು ಸಕ್ಷಮ ಪ್ರಾಧಿಕಾರದ ಆಜ್ಞೆಯ ತಾರೀಖಿನಿಂದ 45ದಿವಸಗಳ ಒಳಗೆ ದಾಖಲು ಮಾಡಬೇಕು. 60 ದಿವಸಗಳವರೆಗೆ ಅವಕಾಶ ನೀಡುವ ವಿವೇಚನಾಧಿಕಾರ, ನ್ಯಾಯಾಧಿಕರಣಕ್ಕೆ ಇದೆ. ಈ ನ್ಯಾಯಾಧಿಕರಣದ ಮುಂದೆ ಮೇಲ್ಮನವಿಯನ್ನು ದಾಖಲೆ ಮಾಡಲು ಯಾವ ಶುಲ್ಕವನ್ನೂ ಕೊಡಬೇಕಾಗಿಲ್ಲ.

ಮೇಲ್ಮನವಿಯನ್ನು ಒಮ್ಮೆ ಸ್ವೀಕರಿಸಿದ ಮೇಲೆ, ನ್ಯಾಯಾಧಿಕರಣವು

(ಮೇಲ್ಮನವಿದಾರನ ಕೋರಿಕೆ ಮೇರೆಗೆ ಅವನಿಗೆ ಸಾಕಷ್ಟು ಅವಕಾಶ ಕೊಟ್ಟು ಅಲ್ಲದ ಅದಕ್ಕೆ ಸೂಕ್ತ ಕಂಡಹಾಗೆ ಮುಂದಿನ ವಿಚಾರಣೆಯನ್ನು ಮಾಡಿದ ನಂತರ), ಮೇಲ್ಮನವಿಗೊಳಪಟ್ಟ ಆದೇಶವನ್ನು ಸ್ಥಿರೀಕರಿಸಬಹುದು, ಮಾರ್ಪಾಡು ಮಾಡಬಹುದು, ಇಲ್ಲವೇ ತಳ್ಳಿಹಾಕಬಹುದು. ನ್ಯಾಯಾಧಿಕರಣದ ಮುಂದೆ ನಡೆಯುವ ವಿಚಾರಣೆಗಳಿಗೆ ಸಾರ್ವಜನಿಕರಿಗೆ ಪ್ರವೇಶವಿಲ್ಲ. ವಿಚಾರಣಾ ಅವಧಿಯಲ್ಲಿ ಮೇಲ್ಮನವಿದಾರನನ್ನು ಅವನ/ಅವಳ ಅಧಿಕೃತ ಪ್ರತಿನಿಧಿಯು ಪ್ರತಿನಿಧಿಸಬಹುದು. ಈ ಪ್ರತಿನಿಧಿಯು ಕಂಪನಿ ಕಾರ್ಯದರ್ಶಿ ಆಗಿರಬಹುದು. ಸನ್ನದು ಲೆಕ್ಕಿಗನಾಗಿರಬಹುದು (ಚಾರ್ಟರ್ಡ್ ಅಕೌಂಟೆಂಟ್) ಅಥವಾ ಒಬ್ಬ ವಕೀಲನಾಗಿರಬಹುದು. ಸಿವಿಲ್ ಪ್ರಕ್ರಿಯಾ ಸಂಹಿತೆ, 1908ರ ಕೆಳಗೆ ಒಂದು ದಾವೆಯನ್ನು ವಿಚಾರಣೆ ಮಾಡಲು ಸಿವಿಲ್ ನ್ಯಾಯಾಲಯಕ್ಕೆ ಇರುವ ಅಧಿಕಾರ ನ್ಯಾಯಾಧಿಕರಣಕ್ಕೂ ಇದೆ.

ಮೇಲ್ಮನವಿಯನ್ನು ತೀರ್ಮಾನ ಮಾಡುವ ತನ್ನ ಅಧಿಕಾರವನ್ನು ಚಲಾಯಿಸಲು, ಸೀಮಾ ಸುಂಕ ಮತ್ತು ಕೇಂದ್ರ ಅಬ್ಕಾರಿ ಇಲಾಖೆಯ ಅಧಿಕಾರಿಗಳ, ವರಮಾನ ತೆರಿಗೆ ಇಲಾಖೆಯ ಅಧಿಕಾರಿಗಳ, 1973ರ ವಿದೇಶಿ ವಿನಿಮಯ ನಿಯಂತ್ರಣ ಅಧಿನಿಯಮದ ಕೆಳಗೆ ನೇಮಕವಾದ ಜಾರಿ ನಿರ್ದೇಶನಾಲಯದ ಅಧಿಕಾರಿಗಳ, ಅಥವಾ ಪೊಲೀಸ್ ಇಲಾಖೆಯ ಅಧಿಕಾರಿಗಳ, ಸಹಾಯವನ್ನು ನ್ಯಾಯಾಧಿಕರಣವು ಕೇಳಿ ಪಡೆದುಕೊಳ್ಳಬಹುದು.

ನ್ಯಾಯಾಧಿಕರಣದ ಯಾವುದೇ ಆಜ್ಞೆಯ ವಿರುದ್ಧ ಮೇಲ್ಮನವಿಗೆ ಅವಕಾಶವಿಲ್ಲ. ನ್ಯಾಯಾಧಿಕರಣವು ತೀರ್ಮಾನ ಮಾಡಲು ಸಕ್ಷಮತೆ ಇರುವ ಯಾವುದೇ ವಿಷಯವನ್ನು ವಿಚಾರಣೆಮಾಡಲು, ಯಾವುದೇ ಸಿವಿಲ್ ನ್ಯಾಯಾಲಯಕ್ಕೆ ಅಧಿಕಾರ ವ್ಯಾಪ್ತಿ ಇಲ್ಲ. ಹೀಗಾಗಿ, ಮೇಲ್ಮನವಿ ನ್ಯಾಯಾಧಿಕರಣ ಮಾಡಿರುವ ಆಜ್ಞೆಯಿಂದ ಮೇಲ್ಮನವಿದಾರ ಅಸಂತುಷ್ಟನಾದರೆ, ಸಂವಿಧಾನದ 226ನೆಯ ಅನುಚ್ಛೇದದ ಕೆಳಗೆ ಉಚ್ಚ ನ್ಯಾಯಾಲಯಕ್ಕೂ, ಅಥವಾ 32ನೆಯ ಅನುಚ್ಛೇದದ ಕೆಳಗೆ ಸರ್ವೋಚ್ಚ ನ್ಯಾಯಾಲಯಕ್ಕೂ, ರಿಟ್ ಅರ್ಜಿಯನ್ನು ಸಲ್ಲಿಸಬಹುದು ಅಥವಾ ಅನುಚ್ಛೇದ 136ರ ಕೆಳಗೆ ಸರ್ವೋಚ್ಚ ನ್ಯಾಯಾಲಯಕ್ಕೆ ವಿಶೇಷ ಅನುಮತಿ ಅರ್ಜಿಯನ್ನು ಸಲ್ಲಿಸಬಹುದು.

# ಆದಾಯ ತೆರಿಗೆ ಮೇಲ್ಮನವಿ ನ್ಯಾಯಾಧಿಕರಣ

ಆದಾಯ ತೆರಿಗೆ ಮೇಲ್ಮನವಿ ನ್ಯಾಯಾಧಿಕರಣವು, 1961ರ ಆದಾಯ ತೆರಿಗೆ ಅಧಿನಿಯಮದ ಕೆಳಗೆ ರಚಿತವಾಗಿದೆ. ಅದು ಕೇಂದ್ರ ಸರ್ಕಾರವು ಯುಕ್ತವೆಂದು ನಿರ್ಧರಿಸಿದ ಸಂಖ್ಯೆಯ ನ್ಯಾಯಿಕ ಸದಸ್ಯರು ಮತ್ತು ಲೆಕ್ಕಿಗ ಸದಸ್ಯರುಗಳನ್ನು ಒಳಗೊಂಡಿದೆ. ಈ ಸದಸ್ಯರುಗಳನ್ನು ಕೇಂದ್ರ ಸರ್ಕಾರವೇ ನೇಮಕ ಮಾಡುತ್ತದೆ. ನ್ಯಾಯಿಕ ಸದಸ್ಯನಾಗಿ ನೇಮಕಹೊಂದಬಹುದಾದ ವ್ಯಕ್ತಿ (ಅ) ಭಾರತದ ಪ್ರದೇಶದಲ್ಲೆಲ್ಲಿಯಾದರೂ ಹತ್ತು ವರ್ಷಗಳಿಗೆ ಕಮ್ಮಿ ಇಲ್ಲದಂತೆ ನ್ಯಾಯಿಕ ಹುದ್ದೆಯಲ್ಲಿದ್ದಿರಬೇಕು ಅಥವಾ (ಆ) ಹತ್ತು ವರ್ಷಗಳಿಗೆ ಕಮ್ಮಿ ಇಲ್ಲದಂತೆ ವಕೀಲಿ ವೃತ್ತಿ ನಡೆಸುತ್ತಿರುವವರಾಗಿರಬೇಕು. ಹೀಗೆಯೇ, ಹತ್ತುವರ್ಷಗಳಿಗೆ ಕಮ್ಮಿ ಇಲ್ಲದಂತೆ ಚಾರ್ಟರ್ಡ್ ಅಕೌಂಟೆಂಟ್ ವೃತ್ತಿಯಲ್ಲಿ ಅನುಭವ ಹೊಂದಿದ ಅಥವಾ ಆದಾಯ ತೆರಿಗೆ ಸೇವೆ - 'ಎ' ಗುಂಪಿಗೆ ಸೇರಿದ್ದು, ಮೂರು ವರ್ಷಗಳ ಕಾಲ ಆದಾಯ ತೆರಿಗೆ ಕಮಿಷನರ್ ಹುದ್ದೆಯಲ್ಲಿದ್ದವರನ್ನು ಲೆಕ್ಕಿಗ ಸದಸ್ಯನನ್ನಾಗಿ ನೇಮಿಸಬಹುದು. ನ್ಯಾಯಾಧಿಕರಣದ ಅಧ್ಯಕ್ಷರನ್ನು ಸಾಮಾನ್ಯವಾಗಿ, ನ್ಯಾಯಿಕ ಸದಸ್ಯರುಗಳಿಂದಲೇ ಆರಿಸಲಾಗುವುದು. ನ್ಯಾಯಾಧಿಕರಣದ ಪೀಠಗಳು, ಅಹಮದಾಬಾದ್, ಅಲಹಾಬಾದ್, ಮುಂಬೈ, ಕಲ್ಕತ್ತಾ, ದೆಹಲಿ, ಚೆನ್ನೈ (ಮದರಾಸು) ಮುಂತಾದ ಪಟ್ಟಣಗಳಲ್ಲಿ ಕೂರುತ್ತವೆ. ಅದು ಕಾನೂನು ಮಂತ್ರಾಲಯದ ನಿಯಂತ್ರಣದಲ್ಲಿ ಕಾರ್ಯ ನಿರ್ವಹಿಸುತ್ತದೆಯೇ ವಿನಾ ವಿತ್ತ ಮಂತ್ರಾಲಯದ ಅಧೀನಕ್ಕೆ ಒಳಪಟ್ಟಿಲ್ಲ. ಹೀಗಾಗಿ ಅದು ಆದಾಯ ತೆರಿಗೆ ಪ್ರಾಧಿಕಾರವೆನಿಸಿಕೊಳ್ಳುವುದಿಲ್ಲ. ಸದಸ್ಯರುಗಳು ಸ್ವತಂತ್ರರಾಗಿ ತಮ್ಮ ತೀರ್ಮಾನವನ್ನು ಕೊಡುವುದನ್ನು ಇದು ನಿಶ್ಚಯಗೊಳಿಸುವುದೂ ಅಲ್ಲದೆ ತೆರಿಗೆದಾರನಲ್ಲಿ ವಿಶ್ವಾಸವನ್ನೂ ಮೂಡಿಸುತ್ತದೆ.

ಡೆಪ್ಯುಟಿ ಕಮಿಷನರ್ (ಮೇಲ್ಮನವಿ), ಡೆಪ್ಯುಟಿ ಕಮಿಷನರ್, ಕಮಿಷನರ್ (ಮೇಲ್ಮನವಿ), ಕಮಿಷನರ್, ಮುಖ್ಯ ಕಮಿಷನರ್, ಮಹಾ ನಿರ್ದೇಶಕರು ಅಥವಾ ಆದಾಯ ತೆರಿಗೆ ನಿರ್ದೇಶಕರು ಇವರುಗಳು ಹೊರಡಿಸಿದ ಆಜ್ಞೆ/ಆದೇಶದಿಂದ ಅಸಂತುಷ್ಟನಾದ ಪಕ್ಷಕಾರನು ನ್ಯಾಯಾಧಿಕರಣದ ಮುಂದೆ ಮೇಲ್ಮನವಿಯನ್ನು ಸಲ್ಲಿಸಬಹುದು. ಆಜ್ಞೆ ಮಾಡಿದ ತಾರೀಖಿನಿಂದ ಅರವತ್ತು ದಿವಸಗಳ ಒಳಗೆ ಈ ಮೇಲ್ಮನವಿಯನ್ನು ಸಲ್ಲಿಸಬೇಕು. ಒಂದು ಲಕ್ಷ ರೂಪಾಯಿಗಳ ವರೆಗಿನ ಆದಾಯ ಕುರಿತಾದ ಮೇಲ್ಮನವಿಗೆ ಕೊಡಬೇಕಾದ ನಾಮಮಾತ್ರ ಶುಲ್ಕ 250.00 ರೂಪಾಯಿಗಳು. ತೆರಿಗೆದಾರನ ಆದಾಯ ಒಂದು ಲಕ್ಷಕ್ಕೂ ಮೀರಿದ್ದಲ್ಲಿ 1,500.00 ರೂಪಾಯಿ ಶುಲ್ಕ ಕೊಡಬೇಕು.

ಮೇಲ್ಮನವಿಯು ಇಬ್ಬರು ಪಕ್ಷಗಾರರಿಗೂ ವಾದ ಮಂಡಿಸಲು ಅವಕಾಶ ಕೊಟ್ಟು ವಿಷಯವನ್ನು ನ್ಯಾಯಾಧಿಕರಣ ಇತ್ಯರ್ಥಗೊಳಿಸುತ್ತದೆ. ವಿಚಾರಣೆ ಸಮಯದಲ್ಲಿ ಪಕ್ಷಗಾರರು ಗೈರು ಹಾಜರಾದರೆ, ವಿಚಾರಣೆ ತಾರೀಖನ್ನು ಮುಂದೂಡಬಹುದು ಅಥವಾ ಮೇಲ್ಮನವಿಯನ್ನ ಏಕಪಕ್ಷೀಯವಾಗಿ ತೀರ್ಮಾನಿಸಬಹುದು. ತೆರಿಗೆದಾರನು

ತಾನೇ ಸ್ವತಃ ಅಥವಾ ಅಧಿಕೃತ ಏಜೆಂಟ್ ಅಥವಾ ವಕೀಲರ ಮೂಲಕ ನ್ಯಾಯಾಧಿಕರಣದ ಮುಂದೆ ಹಾಜರಾಗಬಹುದು. ನ್ಯಾಯಾಧಿಕರಣವು, ನ್ಯಾಯಾಲಯಗಳಿಗೆ ಅನ್ವಯಿಸುವ ಸಾಕ್ಷನಿಯಮಗಳಿಗೆ ಬದ್ಧವಾಗಿಲ್ಲದೆ ತಾನೇ ತನ್ನ ನಡವಳಿಕೆಗಳನ್ನು ನಿಯಂತ್ರಿಸಿಕೊಳ್ಳುವ ಅಧಿಕಾರವನ್ನು ಹೊಂದಿದೆ. ಅದು ಪಕ್ಷಗಾರರಿಗೆ ಮೌಖಿಕ ವಾದವನ್ನು ಮಂಡಿಸಲು ಅವಕಾಶಕೊಟ್ಟು ಸೂಕ್ತವಾದ ಆಜ್ಞೆ/ಆದೇಶಗಳನ್ನು ಹೊರಡಿಸುತ್ತದೆ. ನ್ಯಾಯಾಧಿಕರಣದ ಆಜ್ಞೆ ಆದೇಶಗಳು ಬರವಣಿಗೆಯಲ್ಲಿದ್ದು ಪೀಠದ ಸದಸ್ಯರುಗಳಿಂದ ಸಹಿಮಾಡಲ್ಪಡುತ್ತವೆ. ಈ ಆಜ್ಞೆ/ಆದೇಶಗಳನ್ನು ತೆರಿಗೆದಾರನಿಗೂ ಮತ್ತು ಆದಾಯ ತೆರಿಗೆ ಕಮಿಷನರ್ ಅವರಿಗೂ ತಿಳಿಸಲಾಗುತ್ತದೆ.

ನ್ಯಾಯಾಧಿಕರಣದ ಮುಂದಿರುವ ನಡವಳಿಕೆಗಳನ್ನು ನ್ಯಾಯಿಕ ನಡವಳಿಕೆಗಳೆಂದೇ ಪರಿಗಣಿಸಲಾಗುತ್ತದೆ. ಅಲ್ಲದೆ ನ್ಯಾಯಾಧಿಕರಣಕ್ಕೆ 1908ರ ಸಿವಿಲ್ ಪ್ರಕ್ರಿಯಾ ಸಂಹಿತೆಯ ಕೆಳಗೆ ಸಿವಿಲ್ ನ್ಯಾಯಾಲಯಗಳಿಗಿರುವ ಅಧಿಕಾರಗಳಿವೆ. ಸುಳ್ಳು ಸಾಕ್ಷ್ಯವನ್ನು ಕೊಟ್ಟು ಮತ್ತು ಇಂಥ ಸಾಕ್ಷ್ಯವನ್ನು ಸೃಷ್ಟಿಸಿದ ವ್ಯಕ್ತಿಗಳನ್ನು ಅಭಿಯೋಜನೆಗೆ ಒಳಪಡಿಸಲು ನಿರ್ದೇಶಿಸಿ ಅವರನ್ನು 1860ರ ಭಾರತ ದಂಡ ಸಂಹಿತೆಯ ಕೆಳಗೆ ಶಿಕ್ಷಿಸಲೂಬಹುದು.

ತನ್ನ ನಿಂದನೆ ಮಾಡಿದವರ ಮೇಲೆ ಸೂಕ್ತ ಕ್ರಮವನ್ನು ನ್ಯಾಯಾಧಿಕರಣ ತೆಗೆದುಕೊಳ್ಳಬಹುದು. ಅದು ಲೆಕ್ಕದ ಪುಸ್ತಕಗಳನ್ನು ತಡೆಹಿಡಿದು ತನ್ನ ವಶದಲ್ಲೇ ಉಳಿಸಿಕೊಳ್ಳಬಹುದು. ಮೇಲ್ಮನವಿ ಇತ್ಯರ್ಥವಾಗುವವರೆಗಿನ ಅವಧಿಯಲ್ಲಿ ತೆರಿಗೆ ವಸೂಲಿ ಕ್ರಮಗಳನ್ನು ತಡೆಹಿಡಿಯುವ ಅಧಿಕಾರ ನ್ಯಾಯಾಧಿಕರಣಕ್ಕೆ ಇದೆ. ಇಂಥ ಅಧಿಕಾರ ಅದರ ಮೇಲ್ಮನವಿ ಅಧಿಕಾರ ವ್ಯಾಪ್ತಿಗೆ ಪ್ರಾಸಂಗಿಕವಾಗಿಯೂ ಪೂರಕವಾಗಿಯೂ ಇದೆ.

ಕಾನೂನಿನ ಮತ್ತು ಸಂಗತಿಯ ಪ್ರಶ್ನೆಗಳ ಮೇಲೆ ನ್ಯಾಯಾಧಿಕರಣದ ತೀರ್ಮಾನಗಳು ಅಂತಿಮವಾದ ತೀರ್ಮಾನಗಳು. ಕಾನೂನಿನ ಪ್ರಶ್ನೆಗಳೂ ಸೇರಿದಂತೆ ನ್ಯಾಯಾಧಿಕರಣದ ತೀರ್ಮಾನದ ವಿರುದ್ಧ ಯಾವ ನಿಯಮಬದ್ಧ ಮೇಲ್ಮನವಿಗೂ ಅಧಿನಿಯಮದಲ್ಲಿ ಅವಕಾಶವಿಲ್ಲ. ಆದರೆ ಯಾವುದೇ ಕಾನೂನಿನ ಪ್ರಶ್ನೆಯ ಮೇಲೆ, ಪಕ್ಷಕಾರರಲ್ಲೊಬ್ಬರ ಪ್ರಾರ್ಥನೆ ಮೇರೆಗೆ ಉಚ್ಚ ನ್ಯಾಯಾಲಯಕ್ಕೆ ಪರಾಮರ್ಶೆ ಮಾಡಬಹುದು. ಅಥವಾ ವಿವಿಧ ಉಚ್ಚ ನ್ಯಾಯಾಲಯಗಳಲ್ಲಿ ಅಭಿಪ್ರಾಯಭೇದವಿದೆಯೆಂದು ನ್ಯಾಯಾಧಿಕರಣಕ್ಕೆ ಅನಿಸಿದರೆ, ನೇರವಾಗಿ ಸರ್ವೋಚ್ಚ ನ್ಯಾಯಾಲಯಕ್ಕೂ ಪರಾಮರ್ಶೆ ಮಾಡಬಹುದು. ನ್ಯಾಯಾಧಿಕರಣ ಪರಾಮರ್ಶೆಗೆ ಕಳುಹಿಸಿದ ಪ್ರಕರಣವೊಂದರಲ್ಲಿ ಉಚ್ಚ ನ್ಯಾಯಾಲಯ ನೀಡಿದ ತೀರ್ಮಾನದ ಮೇಲೆ, ಇದು ಮೇಲ್ಮನವಿ ಮಾಡಲು ಯೋಗ್ಯವಾದುದೆಂದು ಉಚ್ಚ ನ್ಯಾಯಾಲಯ ಪ್ರಮಾಣಪತ್ರ ಕೊಟ್ಟಲ್ಲಿ ಸರ್ವೋಚ್ಚ ನ್ಯಾಯಾಲಯಕ್ಕೆ ಮೇಲ್ಮನವಿ ಮಾಡಬಹುದು. ಹಾಗೆ ಪ್ರಮಾಣಪತ್ರ ಸಿಗದಿದ್ದರೆ, ಅಸಂತುಷ್ಟನಾದ ಪಕ್ಷಗಾರ ಸಂವಿಧಾನದ ಅನುಚ್ಛೇದ 136ರ ಕೆಳಗೆ ಸರ್ವೋಚ್ಚ ನ್ಯಾಯಾಲಯದ ಅಧಿಕಾರ ವ್ಯಾಪ್ತಿಯ ಮೊರೆ ಹೋಗಬಹುದು.

# ಕೈಗಾರಿಕಾ ನ್ಯಾಯಾಧಿಕರಣ

1947ರ ಕೈಗಾರಿಕಾ ವಿವಾದಗಳ ಅಧಿನಿಯಮದ ಕೆಳಗೆ, ಕೇಂದ್ರ ಸರ್ಕಾರವು ತನಗೆ ಯಾವುದೇ ರೀತಿಯಲ್ಲಿ ಸಂಬಂಧಿಸಿದ ಕೈಗಾರಿಕಾ ವ್ಯಾಜ್ಯಗಳಿಗಾಗಿ ಕೈಗಾರಿಕಾ ನ್ಯಾಯಾಧಿಕರಣವನ್ನು ಸ್ಥಾಪಿಸಬಹುದು. ಆದರೆ ಕೇಂದ್ರ ಸರ್ಕಾರಕ್ಕೆ ನೇರವಾದ ಆಸಕ್ತಿಯಿಲ್ಲದಿದ್ದರೆ, ಆಗ ರಾಜ್ಯ ಸರ್ಕಾರವೇ ನ್ಯಾಯಾಧಿಕರಣವನ್ನು ರಚಿಸುತ್ತದೆ.

ಕೈಗಾರಿಕಾ ನ್ಯಾಯಾಧಿಕರಣದಲ್ಲಿ, ಒಬ್ಬರು ಅಥವಾ ಅದಕ್ಕಿಂತ ಹೆಚ್ಚಿಗೆ ಸದಸ್ಯರುಗಳು ಇರಬಹುದು. ಈ ಸದಸ್ಯರನ್ನು ಸಂದರ್ಭಾನುಸಾರ ಕೇಂದ್ರ ಸರ್ಕಾರ ಇಲ್ಲವೇ ರಾಜ್ಯ ಸರ್ಕಾರ ನೇಮಿಸುತ್ತದೆ. ನ್ಯಾಯಾಧಿಕರಣದಲ್ಲಿ ಎರಡು ಅಥವಾ ಎರಡಕ್ಕಿಂತ ಹೆಚ್ಚಿಗೆ ಸದಸ್ಯರುಗಳು ಇದ್ದರೆ, ಅವರಲ್ಲೊಬ್ಬರನ್ನು ನ್ಯಾಯಾಧಿಕರಣದ ಅಧ್ಯಕ್ಷರನ್ನಾಗಿ ನೇಮಿಸಲಾಗುತ್ತದೆ. ಕೆಲವು ನ್ಯಾಯಾಧಿಕರಣದಲ್ಲಿ ಒಬ್ಬರೇ ಸದಸ್ಯರು ಇರಬಹುದು. ನ್ಯಾಯಾಧಿಕರಣದ ಅಧ್ಯಕ್ಷರಿಗೆ ನ್ಯಾಯಿಕ ಅರ್ಹತೆಗಳು ಇರಬೇಕು. ಅಂದರೆ ಅವರು:

i. ಉಚ್ಚ ನ್ಯಾಯಾಲಯದ ನ್ಯಾಯಾಧೀಶನಾಗಿರಬೇಕು ಅಥವಾ ಆಗಿದ್ದಿರಬೇಕು; ಅಥವಾ

ii. ಜಿಲ್ಲಾ ನ್ಯಾಯಾಧೀಶನಾಗಿರಬೇಕು, ಇಲ್ಲವೇ ಆಗಿದ್ದಿರಬೇಕು; ಅಥವಾ

iii. ಉಚ್ಚ ನ್ಯಾಯಾಲಯದ ನ್ಯಾಯಾಧೀಶನಾಗಿ ನೇಮಕ ಹೊಂದಲು ಅರ್ಹತೆಗಳಿರಬೇಕು.

ಅಧ್ಯಕ್ಷರಲ್ಲದ ಇತರ ಸದಸ್ಯರುಗಳಿಗೆ ನಿಗದಿಪಡಿಸಿದ ಅರ್ಹತೆಗಳಿರಬೇಕು. ನ್ಯಾಯಾಧಿಕರಣಕ್ಕೆ ಬಂದ ಕೈಗಾರಿಕಾ ವಿವಾದವು ಬ್ಯಾಂಕ್ ಅಥವಾ ವಿಮಾ ಕಂಪನಿಗೆ ಸಂಬಂಧಿಸಿದ್ದರೆ, ಕೇಂದ್ರ ಸರ್ಕಾರದ ಅಥವಾ ರಾಜ್ಯ ಸರ್ಕಾರದ ಅಭಿಪ್ರಾಯದಂತೆ, ಸದಸ್ಯರಲ್ಲೊಬ್ಬರಿಗೆ ಬ್ಯಾಂಕಿನ ಅಥವಾ ವಿಮೆಯ ಬಗ್ಗೆ ವಿಶೇಷ ಜ್ಞಾನವಿರಲೇಬೇಕಾಗುತ್ತದೆ. ನ್ಯಾಯಾಧಿಕರಣದ ಅಧಿಕಾರವ್ಯಾಪ್ತಿಯು ಯಾವುದೇ ಕೈಗಾರಿಕಾ ವಿವಾದಕ್ಕೆ ವಿಸ್ತರಿಸುತ್ತದೆ. ಅಂದರೆ ಮಾಲೀಕರ ಮತ್ತು ಅವರ ನೌಕರರ ನಡುವಿನ ವ್ಯಾಜ್ಯ ವಿಷಯಗಳು ಅದರ ಅಧಿಕಾರ ವ್ಯಾಪ್ತಿಯಲ್ಲಿ ಬರುತ್ತದೆ.

ವೇತನ, ವೇತನಕೊಡುವ ಅವಧಿ ಮತ್ತು ರೀತಿ, ಪರಿಹಾರ ಮತ್ತು ಇತರ ಭತ್ಯೆಗಳು, ಕೆಲಸ ಮಾಡುವ ಮತ್ತು ವಿಶ್ರಾಂತಿಯ ಸಮಯ, ಹೆರಿಗೆ ರಜ ಮತ್ತು ವೇತನ, ರಜಾ ದಿನಗಳು, ಬೋನಸ್, ಲಾಭದಲ್ಲಿ ಪಾಲು, ಭವಿಷ್ಯನಿಧಿ, ಉಪದಾನ, ಸ್ಥಾಯೀ ಆದೇಶಗಳ ಹೊರಗೆ ಪಾಳಿಯಲ್ಲಿ ಕೆಲಸ ಮಾಡುವುದು, ದರ್ಜೆಗಳ ವರ್ಗೀಕರಣ, ಶಿಸ್ತಿಗೆ ಸಂಬಂಧಿಸಿದ ನಿಯಮಗಳು, ಸಮನ್ವಯೀಕರಣ, ಕೆಲಸಗಾರರನ್ನು ತೆಗೆದು ಹಾಕುವುದು, ಉದ್ಯಮಗಳನ್ನು ಮುಚ್ಚುವುದು ಮತ್ತು ನಿಗದಿಪಡಿಸಿದ ಯಾವುದೇ ಇತರ ವಿಷಯ.

ನೇಮಕ, ನೇಮಕ ಮಾಡದೇ ಇರುವುದು, ನೇಮಕಾತಿಯ ನಿಯಮಗಳು, ಕೆಲಸ

ಮಾಡುವ ನಿಬಂಧನೆಗಳು ಇವುಗಳಿಗೆ ಸಂಬಂಧಿಸಿದ ಕಾರ್ಮಿಕರ ಮತ್ತು ಮಾಲೀಕರ ನಡುವಣ ಎಲ್ಲ ವ್ಯಾಜ್ಯಗಳನ್ನೂ ನ್ಯಾಯಾಧಿಕರಣಕ್ಕೆ ಕಳುಹಿಸಲಾಗುತ್ತದೆ.

ನ್ಯಾಯಾಧಿಕರಣ ಅನುಸರಿಸಬೇಕಾದತ ಪ್ರಕ್ರಿಯೆಯನ್ನು ಅಧಿನಿಯಮ ಮತ್ತು ಅಧಿನಿಯಮದ ಕೆಳಗೆ ವಿಧಿಸಲಾದ ನಿಯಮಗಳು ನಿಗದಿಮಾಡಿವೆ. ನ್ಯಾಯಾಧಿಕರಣವು ನ್ಯಾಯಿಕ ಸ್ವರೂಪದ್ದಾಗಿರುವುದರಿಂದ ಅದು ನ್ಯಾಯಿಕವಾಗಿಯೇ ವರ್ತಿಸಬೇಕಾಗಿದೆ. ಅದಕ್ಕೆ ನ್ಯಾಯಾಲಯದ ಕೆಲವು ಲಕ್ಷಣಗಳೂ ಇವೆ. ಕಾನೂನು, ನ್ಯಾಯದ ಮೂಲ ತತ್ವಗಳು, ನೀತಿ ಮತ್ತು ಮನಃಸಾಕ್ಷಿಯನ್ನು ಅನ್ವಯಿಸಿ ಅದು ನ್ಯಾಯ ತೀರ್ಮಾನ ಮಾಡಬೇಕು. ನ್ಯಾಯಾಧಿಕರಣಕ್ಕೆ ಸಿವಿಲ್ ನ್ಯಾಯಾಲಯಕ್ಕೆ ಇರುವ ಅಧಿಕಾರಗಳು ನಿಹಿತವಾಗಿವೆ. ಅಂದರೆ ಅದು ಸಾಕ್ಷಿದಾರನನ್ನು ಹಾಜರಾಗುವಂತೆ ಒತ್ತಾಯಿಸಿ, ಪ್ರಮಾಣ ಪೂರ್ವಕ ಅವನ ಹೇಳಿಕೆಯನ್ನು ಪಡೆದುಕೊಳ್ಳಬಹುದು; ದಸ್ತಾವೇಜುಗಳನ್ನು ಹಾಜರುಪಡಿಸುವಂತೆ ಒತ್ತಾಯಿಸಿಬಹುದು. ಸಾಕ್ಷಿಗಳ ವಿಚಾರಣೆಗೆ ಆಯೋಗವನ್ನು ನೇಮಿಸಬಹುದು. 1860ರ ಭಾರತ ದಂಡಸಂಹಿತೆಯ 193ನೆಯ ಮತ್ತು 228ನೆಯ ಖಂಡಗಳ ಅರ್ಥವ್ಯಾಪ್ತಿಯಲ್ಲಿ, ನ್ಯಾಯಿಕ ನಡವಳಿಕೆಗಳೆಂದು ಭಾವಿಸಲಾದ ವಿಚಾರಣೆ ಮತ್ತು ತನಿಖೆಗಳನ್ನು ಮಾಡಬಹುದು. ದಂಡಸಂಹಿತೆಯ 21ನೆಯ ಖಂಡದ ಕೆಳಗೆ, ನ್ಯಾಯಾಧಿಕರಣದ ಪ್ರತಿಯೊಬ್ಬ ಸದಸ್ಯನನ್ನು ಸಾರ್ವಜನಿಕ ಸೇವಕ ಎಂದು ಭಾವಿಸಲಾಗಿದೆ.

ಸರ್ಕಾರದ ರಾಜಪತ್ರದಲ್ಲಿ ನ್ಯಾಯಾಧಿಕರಣದ ಐತೀರ್ಪು ಅಥವಾ ನ್ಯಾಯ ನಿರ್ಣಯವನ್ನು ಪ್ರಸಿದ್ಧಿಸಲಾಗುತ್ತದೆ. ಹಾಗೆ ಕ್ರಮಬದ್ಧವಾಗಿ ಪ್ರಸಿದ್ಧಿಸಲಾದ ಐತೀರ್ಪು ಅಂತಿಮವಾಗುತ್ತದೆ. ಅದನ್ನು ನ್ಯಾಯಾಧಿಕರಣದ ಎಲ್ಲ ಸದಸ್ಯರುಗಳೂ ಸಹಿ ಮಾಡಲೇಬೇಕು. ಎಲ್ಲ ಸದಸ್ಯರು ಸಹಿ ಮಾಡದೇ ಹೋದರೆ ತೀರ್ಪು ಕಾನೂನು ಬಾಹಿರವೂ, ಜಾರಿ ಮಾಡಲು ಯೋಗ್ಯವಲ್ಲದ್ದೂ ಆಗುತ್ತದೆ.

ನ್ಯಾಯಾಧಿಕರಣದ ನಡವಳಿಕೆಗಳು ನ್ಯಾಯಿಕ ನಡವಳಿಕೆಗಳಾಗಿದ್ದು, ಅದರ ಐತೀರ್ಪುಗಳು ಮತ್ತು ನಿರ್ಣಯಗಳು ಸಂವಿಧಾನದ 226ನೆಯ ಅನುಚ್ಛೇದದ ಕೆಳಗೆ, ಉಚ್ಚ ನ್ಯಾಯಾಲಯದ ರಿಟ್ ಅಧಿಕಾರ ವ್ಯಾಪ್ತಿಗೆ ಒಳಪಟ್ಟಿವೆ. ನ್ಯಾಯಾಧಿಕರಣವು, ಸಂವಿಧಾನದ 227ನೆಯ ಅನುಚ್ಛೇದದ ಕೆಳಗೆ ಉಚ್ಚ ನ್ಯಾಯಾಲಯದ ಮೇಲ್ವಿಚಾರಣೆ ಅಧಿಕಾರ ವ್ಯಾಪ್ತಿಗೆ ಒಳಪಟ್ಟಿದೆ. ನ್ಯಾಯಾಧಿಕರಣದ ಐತೀರ್ಪನ್ನು, ಭಾರತ ಸಂವಿಧಾನದ 136ನೆಯ ಅನುಚ್ಛೇದದ ಕೆಳಗೆ, ಸರ್ವೋಚ್ಚ ನ್ಯಾಯಾಲಯದಲ್ಲಿ ನೇರವಾಗಿ ಪ್ರಶ್ನಿಸಬಹುದು. ಏಕೆಂದರೆ, ಆ ಅನುಚ್ಛೇದದ ಕೆಳಗೆ ಯಾವುದೇ ನ್ಯಾಯಾಲಯದ ಅಥವಾ ನ್ಯಾಯಾಧಿಕರಣದ ಆಜ್ಞೆ/ಆದೇಶದ ವಿರುದ್ಧ, ವಿಶೇಷ ಅನುಮತಿಯನ್ನು ನೀಡಿ ಮೇಲ್ಮನವಿಗಳನ್ನು ಸ್ವೀಕರಿಸುವ ಅಧಿಕಾರ ಮತ್ತು ವಿವೇಚನೆ, ಸರ್ವೋಚ್ಚ ನ್ಯಾಯಾಲಯದಲ್ಲಿ ನಿಹಿತವಾಗಿದೆ.

# ರೇಲ್ವೆ ದರಗಳ ನ್ಯಾಯಾಧಿಕರಣ

ಭಾರತದ ರೇಲ್ವೆ ದರಗಳ ನ್ಯಾಯಾಧಿಕರಣವನ್ನು ಭಾರತೀಯ ರೇಲ್ವೆಗಳ ಅಧಿನಿಯಮ, 1989ರ ಕೆಳಗೆ ಸ್ಥಾಪಿಸಲಾಯಿತು. ಅದು ಒಬ್ಬ ಅಧ್ಯಕ್ಷರನ್ನು ಮತ್ತು ಇಬ್ಬರು ಸದಸ್ಯರುಗಳನ್ನು ಒಳಗೊಂಡಿದೆ. ಅಧ್ಯಕ್ಷರು ಸರ್ವೋಚ್ಚ ನ್ಯಾಯಾಲಯದ ಅಥವಾ ಉಚ್ಚ ನ್ಯಾಯಾಲಯದ ನ್ಯಾಯಾಧೀಶನಾಗಿರಬೇಕು ಇಲ್ಲವೇ ಆಗಿದ್ದಿರಬೇಕು. ಇಬ್ಬರು ಸದಸ್ಯರುಗಳಲ್ಲಿ ಒಬ್ಬರಿಗೆ, ಕೇಂದ್ರ ಸರ್ಕಾರದ ಅಭಿಪ್ರಾಯದಲ್ಲಿ, ದೇಶದ ವಾಣಿಜ್ಯ, ಔದ್ಯಮಿಕ ಮತ್ತು ಆರ್ಥಿಕ ಸ್ಥಿತಿಗಳ ಬಗ್ಗೆ ವಿಶೇಷವಾದ ಜ್ಞಾನ ಮತ್ತು ಅನುಭವ ಇರಬೇಕು. ಇನ್ನೊಬ್ಬ ಸದಸ್ಯರಿಗೆ, ಅದೇ ಕೇಂದ್ರ ಸರ್ಕಾರದ ಅಭಿಪ್ರಾಯದಲ್ಲಿ, ರೇಲ್ವೆಗಳ ವಾಣಿಜ್ಯ ವಹಿವಾಟಿನ ಬಗ್ಗೆ ವಿಶೇಷಜ್ಞಾನ ಮತ್ತು ಅನುಭವ ಇರಬೇಕು. ಇವರುಗಳನ್ನು ಕೇಂದ್ರ ಸರ್ಕಾರ ನೇಮಕ ಮಾಡುತ್ತದೆ. ಅವರ ನೇಮಕದ ಅವಧಿಯನ್ನು ನೇಮಕಾತಿ ಆಜ್ಞೆಯಲ್ಲಿ, ನಿರ್ದಿಷ್ಟಗೊಳಿಸಲಾಗುತ್ತದೆಯಾದರೂ ಅದು ಐದು ವರ್ಷಗಳನ್ನು ಮೀರುವ ಹಾಗಿಲ್ಲ. ರೇಲ್ವೆ ಆಡಳಿತ ವಿಧಿಸಿದ ದರಗಳು ದುಬಾರಿಯಾಗಿವೆ, ತಾರತಮ್ಯ ಮಾಡುವಂಥದ್ದಾಗಿವೆ, ಸಕಾರಣವಿಲ್ಲದೆ ಇತರ ರುಸುಮುಗಳನ್ನು ಹೇರಲಾಗಿದೆ, ಅಥವಾ ಯಾವನೊಬ್ಬ ವ್ಯಕ್ತಿಗೆ ಅಕ್ರಮವಾಗಿ ರಿಯಾಯಿತಿ ಕೊಡಲಾಗಿದೆ ಎಂಬಿತ್ಯಾದಿ ರೇಲ್ವೆ ಆಡಳಿತದ ವಿರುದ್ಧದ ದೂರುಗಳನ್ನು ವಿಚಾರಣೆ ಮಾಡಲು ನ್ಯಾಯಾಧಿಕರಣಕ್ಕೆ ಅಧಿಕಾರವಿದೆ. ಯಾವುದೇ ಸರಕಿನ ವರ್ಗೀಕರಣ, ಕಟ್ಟೆ ಸುಂಕ, ತಡವಾಗಿ ಬಿಡಿಸಿಕೊಂಡ ಸರಕಿಗೆ ದಂಡ, ಪ್ರಯಾಣಿಕರ ಪ್ರಯಾಣದ ತೆರ, ಲಗೇಜುಗಳ ತೆರ, ಭಾಂಗಿಗಳ ತೆರ, ಭಾರವಾದ ವಸ್ತುಗಳ ತೆರ, ಮಿಲಿಟರಿ ಸಂಚಾರದ ತೆರ ಇತ್ಯಾದಿಗಳನ್ನು ನಿಗದಿಪಡಿಸುವುದು, ಒಂದೇ ಗಂಟಿನಲ್ಲಿ ಕೊಡಬೇಕಾದ ದರಗಳು, ಇವುಗಳನ್ನು ಕುರಿತು ಕೇಂದ್ರ ಸರ್ಕಾರ ಮಾಡಿದ ಪರಾಮರ್ಶೆಗಳನ್ನು ಸಹ ನ್ಯಾಯಾಧಿಕರಣ ವಿಚಾರಣೆ ಮಾಡಬಹುದು. ಕೇಂದ್ರ ಸರ್ಕಾರ ಸಿದ್ಧಪಡಿಸಿದ ಅಸೆಸರುಗಳ ಪಟ್ಟಿಯಿಂದ ಆಯ್ದುಕೊಂಡ ಅಸೆಸರುಗಳ (ಬೆಲೆಕಟ್ಟುವವರ) ನೆರವನ್ನು ಪಡೆದುಕೊಂಡು ನ್ಯಾಯಾಧಿಕರಣ ಕೆಲಸ ಮಾಡುತ್ತದೆ. ಈ ಅಸೆಸರುಗಳ ಪಟ್ಟಿಯಲ್ಲಿ, ವ್ಯಾಪಾರದ, ಉದ್ಯಮದ, ವ್ಯವಸಾಯ ಕ್ಷೇತ್ರದ ಪ್ರತಿನಿಧಿಗಳು ಮತ್ತು ರೇಲ್ವೆಗಳ ಬಗ್ಗೆ ಪ್ರಾಯೋಗಿಕ ತಿಳುವಳಿಕೆ ಇರುವಂಥ ವ್ಯಕ್ತಿಗಳು ಇರುತ್ತಾರೆ. ನ್ಯಾಯಾಧಿಕರಣದ ತೀರ್ಮಾನದಿಂದ ಪರಿಣಾಮವಾಗುವ ಹಿತಾಸಕ್ತಿಗಳೊಡನೆ ಸಮಾಲೋಚಿಸಿ, ಈ ಪಟ್ಟಿಯನ್ನು ತಯಾರಿಸಲಾಗುತ್ತದೆ.

ನ್ಯಾಯಾಧಿಕರಣದ ಮುಂದಿರುವ ಪಕ್ಷಗಾರ ತನ್ನ ಅಧಿಕೃತ ಏಜೆಂಟ್ ಅಥವಾ ವಕೀಲರ ಮೂಲಕ ವಿಚಾರಣೆಯಲ್ಲಿ ಭಾಗವಹಿಸಬಹುದು. ಬಹುಮತಾಭಿಪ್ರಾಯದಂತೆ, ನ್ಯಾಯಾಧಿಕರಣ ತೀರ್ಮಾನಕ್ಕೆ ಬರುತ್ತದೆ. ಅದರ ತೀರ್ಮಾನವೇ ಅಂತಿಮ ತೀರ್ಮಾನ. ಈ ತೀರ್ಮಾನವನ್ನು 'ಡಿಕ್ರಿ' ಎಂದು ಪರಿಗಣಿಸಿ ಸಿವಿಲ್ ನ್ಯಾಯಾಲಯದ ಮೂಲಕ ಜಾರಿಗೊಳಿಸಬಹುದು.

ನ್ಯಾಯಾಧಿಕರಣ ಆಜ್ಞೆ ಮಾಡಿದ ತಾರೀಖಿನಿಂದ ಒಂದು ವರ್ಷದೊಳಗೆ ರೇಲ್ವೆ ಆಡಳಿತ ಅರ್ಜಿ ಸಲ್ಲಿಸಿದರೆ ತನ್ನ ಆಜ್ಞೆಯ ಪುನರೀಕ್ಷಣೆಯನ್ನು ಮಾಡಬಹುದು. ಆದರೆ ಹಾಗೆ ಮಾಡಬೇಕಾದರೆ ತಾನು ಆಜ್ಞೆ ಮಾಡಿದ ತಾರೀಖಿನಿಂದೀಚೆಗೆ ಪರಿಸ್ಥಿತಿಯಲ್ಲಿ ಸಾರಭೂತವಾದ ಬದಲಾವಣೆಯಾಗಿದೆಯೆಂದು ಅದಕ್ಕೆ ಮನವರಿಕೆ ಆಗಿರಬೇಕು.

ನ್ಯಾಯಾಧಿಕರಣವು ವ್ಯವಹರಿಸಿ ತೀರ್ಮಾನ ಮಾಡಲು ಅಧಿಕಾರ ಹೊಂದಿರುವ ಯಾವುದೇ ವಿಷಯಗಳನ್ನು ಕುರಿತು ದಾವೆಯನ್ನಾಗಲೀ ಅಥವಾ ನಡವಳಿಕೆಗಳನ್ನಾಗಲೀ ಬೇರೆಲ್ಲೂ ಹೂಡುವ ಹಾಗಿಲ್ಲ.

ನ್ಯಾಯಾಧಿಕರಣದ ನಡವಳಿಕೆಗಳನ್ನು ನಡೆಸುವವರು ಸರ್ವೋಚ್ಚ ನ್ಯಾಯಾಲಯದ ಅಥವಾ ಉಚ್ಚ ನ್ಯಾಯಾಲಯದ ನ್ಯಾಯಾಧೀಶರಾಗಿರುವುದರಿಂದ ವಿಚಾರಣೆ ನಿಷ್ಪಕ್ಷಪಾತವಾಗಿರುತ್ತದೆ ಎಂಬ ಭರವಸೆ ಇದೆ. ವ್ಯಕ್ತಿಯೊಬ್ಬನ ಮತ್ತು ಆಡಳಿತದ ನಡುವಣ ವ್ಯಾಜ್ಯಗಳನ್ನು ತೀರ್ಮಾನ ಮಾಡಬೇಕಾಗಿರುವುದರಿಂದ ಇದು ಬಹಳ ಅಮೂಲ್ಯವಾದ ರಕ್ಷಣೆಯಾಗಿದೆ.

ನ್ಯಾಯಾಧಿಕರಣದ ಆಜ್ಞೆಯ ಮೇಲೆ, ಸಂವಿಧಾನದ 136ನೆಯ ಅನುಚ್ಛೇದದ ಕೆಳಗೆ ಸರ್ವೋಚ್ಚ ನ್ಯಾಯಾಲಯಕ್ಕೆ ಮೇಲ್ಮನವಿ ಇದೆ.

# ಭಯೋತ್ಪಾದಕರು ಮತ್ತು ವಿಧ್ವಂಸಕ ಕೃತ್ಯಗಳ ನ್ಯಾಯಾಧಿಕರಣ

ಭಯೋತ್ಪಾದಕ ಚಟುವಟಿಕೆಗಳು ಅಗಾಧವಾಗಿ ಉಲ್ಬಣಿಸಿ, ಸಾಮಾನ್ಯ ನ್ಯಾಯಾಲಯಗಳಿಗೆ ಅವುಗಳನ್ನು ಎದುರಿಸಲು ಸಾಧ್ಯವಾಗುತ್ತಿಲ್ಲವಾದ ಕಾರಣ, ಈ ಭಯೋತ್ಪಾದಕ ಮತ್ತು ವಿಧ್ವಂಸಕ ಚಟುವಟಿಕೆಗಳ ಮತ್ತು ತತ್ಸಂಬಂಧದ ವಿಷಯಗಳೊಡನೆ ಸೆಣಸಲು, ಕೇಂದ್ರ ಸರ್ಕಾರವು ವಿಶೇಷ ಉಪಬಂಧಗಳನ್ನೊಳಗೊಂಡ ಒಂದು ಅಧಿನಿಯಮವನ್ನು ಜಾರಿಗೆ ತಂದಿದೆ. ಇಂಥ ಕೃತ್ಯಗಳನ್ನೆಸಗಿದವರೆಂದು ಅನುಮಾನಿಸಲ್ಪಟ್ಟ ವ್ಯಕ್ತಿಗಳನ್ನು ವಿಚಾರಣೆಮಾಡಲು ವಿಶೇಷ ನ್ಯಾಯಾಧಿಕರಣವನ್ನು (ಉದ್ದಿಷ್ಟಿತ ನ್ಯಾಯಾಲಯಗಳು) ಸ್ಥಾಪಿಸಲು ಅಧಿನಿಯಮವು ಅವಕಾಶ ಕಲ್ಪಿಸಿದೆ. ಶಿಕ್ಷೆ ಕೊಡುವುದೂ ಅಲ್ಲದೆ, ಇಂಥ ವ್ಯಕ್ತಿಗಳ ಆಸ್ತಿಯನ್ನು ಮುಟ್ಟುಗೋಲು ಹಾಕಿಕೊಳ್ಳಲೂ ಸಹ ಅಧಿನಿಯಮ ಉಪಬಂಧಿಸಿದೆ.

ಕೇಂದ್ರ ಸರ್ಕಾರವು ಈ ಅಧಿನಿಯಮದ 9ನೆಯ ಖಂಡದ ಕೆಳಗೆ ರಚಿಸಿದ ಈ ಉದ್ದಿಷ್ಟಿತ ನ್ಯಾಯಾಲಯಗಳಿಗೆ ಮಾತ್ರವೇ ಅದೇ ಅಧಿನಿಯಮದ 3ನೆಯ ಖಂಡದ ಕೆಳಗೆ ವಿವರಿಸಿರುವ ಇಂಥ ಅಪರಾಧಗಳನ್ನು ವಿಚಾರಣೆ ಮಾಡಲು ಅಧಿಕಾರ ವ್ಯಾಪ್ತಿ ಇದೆ.

ಕೇಂದ್ರ ಸರ್ಕಾರವಾಗಲೀ ಅಥವಾ ಒಂದು ರಾಜ್ಯ ಸರ್ಕಾರವಾಗಲೀ ಅಧಿಕೃತ ರಾಜಪತ್ರದಲ್ಲಿ ಅಧಿಸೂಚನೆಯನ್ನು ಪ್ರಸಿದ್ಧಿಸುವುದರ ಮೂಲಕ, ಆ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಿದ ಕ್ಷೇತ್ರ ಅಥವಾ ಕ್ಷೇತ್ರಗಳಿಗೆ, ಇಲ್ಲವೇ ಒಂದು ವರ್ಗ ಅಥವಾ ಗುಂಪಿಗೆ ಸೇರಿದ ಪ್ರಕರಣಗಳಿಗಾಗಿ ಒಂದು ಅಥವಾ ಒಂದಕ್ಕಿಂತ ಹೆಚ್ಚು ಉದ್ದೇಶಿತ ನ್ಯಾಯಾಲಯಗಳನ್ನು ರಚಿಸಲು ಅಧಿಕಾರಹೊಂದಿದೆ. ಉದ್ದೇಶಿತ ನ್ಯಾಯಾಲಯದ ಅಗ್ರಪೀಠದಲ್ಲಿ, ನ್ಯಾಯಾಧೀಶರೊಬ್ಬರಿರುತ್ತಾರೆ. ಇವರನ್ನು ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರ ಸಹಮತಪಡೆದುಕೊಂಡು ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರವು ನೇಮಕ ಮಾಡಬಹುದಲ್ಲದೆ ಹೆಚ್ಚಿನ ನ್ಯಾಯಾಧೀಶರುಗಳನ್ನೂ ಸಹ ಅವು ನೇಮಕ ಮಾಡಬಹುದು.

ಈ ಉದ್ದೇಶಿತ ನ್ಯಾಯಾಲಯಗಳಿಗೆ, ಅಧಿನಿಯಮದ ಕೆಳಗೆ ಉಲ್ಲೇಖಿತವಾದ ಅಪರಾಧಗಳನ್ನು ವಿಚಾರಣೆಮಾಡಲು, ಅನ್ವಯಿಸುವ ಸಂದರ್ಭಗಳಲ್ಲೆಲ್ಲಾ ಪ್ರತ್ಯೇಕ ಅಧಿಕಾರ ವ್ಯಾಪ್ತಿಯನ್ನು ಕೊಡಲಾಗಿದೆ. ಅಧಿನಿಯಮದ ಖಂಡಗಳು 11 ಮತ್ತು 11(3)(ಎ) ಕೆಳಗೆ ವಿವರಿಸಿರುವ ಭಯೋತ್ಪಾದಕ ಕೃತ್ಯಗಳನ್ನು ವಿಚಾರಣೆ ಮಾಡಲು ಬೇರೆ ಯಾವ ನ್ಯಾಯಾಲಯಕ್ಕೂ ಅಧಿಕಾರವಿಲ್ಲ.

ಪ್ರತಿಯೊಂದು ಉದ್ದೇಶಿತ ನ್ಯಾಯಾಲಯಕ್ಕೂ ಒಬ್ಬ ಸಾರ್ವಜನಿಕ ಅಭಿಯೋಜಕನನ್ನೂ, ಅಲ್ಲದೆ ಹೆಚ್ಚುವರಿ ಅಥವಾ ವಿಶೇಷ ಅಭಿಯೋಜಕರನ್ನೂ ಕೇಂದ್ರ/ರಾಜ್ಯ ಸರ್ಕಾರ ನೇಮಕ ಮಾಡುತ್ತದೆ.

ಉದ್ದೇಶಿತ ನ್ಯಾಯಾಲಯವು ವಿಚಾರಣೆಗಾಗಿ ಆಪಾದಿತನನ್ನು ತನಗೆ ವಹಿಸಿಕೊಡದಿದ್ದರೂ, ಅಪರಾಧದ ಸಂಗತಿಗಳನ್ನೊಳಗೊಂಡ ದೂರುಗಳು ಬಂದ

ಮೇಲೆ, ಅಥವಾ ಇಂಥ ಸಂಗತಿಗಳ ಪೊಲೀಸ್ ವರದಿಯ ಮೇಲೆ, ಅದು ಯಾವುದೇ ಅಪರಾಧವನ್ನು ಸಂಜ್ಞಾನಕ್ಕೆ ತೆಗೆದುಕೊಳ್ಳಬಹುದು. ಈ ನ್ಯಾಯಾಲಯದ ನಡವಳಿಕೆಗಳನ್ನೆಲ್ಲಾ, ನ್ಯಾಯಾಧೀಶರ ಕೊಠಡಿಯಲ್ಲಿ ಪ್ರತ್ಯೇಕವಾಗಿ ನಡೆಸಲಾಗುತ್ತದೆ. ಆದರೆ ಸಾರ್ವಜನಿಕ ಅಭಿಯೋಜಕರು ನ್ಯಾಯಾಲಯವನ್ನು ಕೋರಿಕೊಂಡರೆ, ಯಾವುದೇ ನಡವಳಿಕೆಗಳನ್ನು ಪೂರ್ಣವಾಗಿ ಅಥವಾ ಭಾಗಶಃ ಮುಕ್ತ ನ್ಯಾಯಾಲಯದಲ್ಲಿ ನಡೆಸಬಹುದು. ಉದ್ದೇಶಿತ ನ್ಯಾಯಾಲಯವು ಮಾಡುತ್ತಿರುವ ಯಾವುದೇ ಅಪರಾದದ ವಿಚಾರಣೆಯು, ಆ ಅಪರಾಧಿಯು ಉದ್ದೇಶಿತ ನ್ಯಾಯಾಲಯವಲ್ಲದ ನ್ಯಾಯಾಲಯವೊಂದರಲ್ಲಿ ಎದುರಿಸುತ್ತಿರುವ ಪ್ರಕರಣದ ಮೇಲೆ ಆದ್ಯತೆ ಪಡೆಯುತ್ತದೆ. ಈ ಪ್ರಕರಣಗಳ ವಿಚಾರಣೆಯನ್ನು ಇತರ ಪ್ರಕರಣಗಳಿಗಿಂತ ಮೊದಲು ನಡೆಸಲಾಗುತ್ತದೆ ಮತ್ತು ಅವು ತೀರ್ಮಾನವಾಗುವವರೆಗೂ, ಆ ಇತರ ಪ್ರಕರಣಗಳನ್ನು ಸ್ಥಗಿತಗೊಳಿಸಲಾಗುತ್ತದೆ.

ಉದ್ದೇಶಿತ ನ್ಯಾಯಾಲಯದ ಯಾವುದೇ ಅಂತಿಮ ತೀರ್ಮಾನ, ಶಿಕ್ಷೆ ಅಥವಾ ಆದೇಶದ ಮೇಲೆ (ಮಧ್ಯವರ್ತಿ ಆದೇಶವನ್ನು ಹೊರತುಪಡಿಸಿ) ಉಚ್ಚ ನ್ಯಾಯಾಲಯಕ್ಕೆ ಮೇಲ್ಮನವಿಯನ್ನು ಸಲ್ಲಿಸುವ ಹಕ್ಕಿದೆ. ಈ ಮೇಲ್ಮನವಿ, ಕಾನೂನಿನ ಪ್ರಶ್ನೆಯ ಮೇಲೆ ಆದರೂ ಅಥವಾ ಸಂಗತಿಗಳ ಪ್ರಶ್ನೆಯ ಮೇಲಾದರೂ ಇರಬಹುದಾಗಿದ್ದು ಆಜ್ಞೆಯ ತಾರೀಖಿನಿಂದ ಮೂವತ್ತು ದಿವಸಗಳ ಒಳಗೆ ಸಲ್ಲಿಸಬೇಕು. ಮಧ್ಯವರ್ತಿ ಆಜ್ಞೆಗಳ ಮೇಲೆ ಸಂವಿಧಾನದ 136ನೆಯ ಅನುಚ್ಛೇದದ ಕೆಳಗೆ ಸರ್ವೋಚ್ಚ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಬಹುದು.

# ಮೋಟಾರ್ ಅಪಘಾತಗಳ ಕೇಳಿಕೆ ನ್ಯಾಯಾಧಿಕರಣ

ಮೊದಲಿಗೆ, ಮೋಟಾರ್ ಅಪಘಾತಗಳಿಂದ ಸಂಭವಿಸುವ ಸಾವುನೋವುಗಳಿಗಾಗಿ ಪರಿಹಾರ ಕೇಳಿಕೆಯನ್ನು ಸಿವಿಲ್ ನ್ಯಾಯಾಲಯಗಳಲ್ಲಿ ದಾವೆಗಳನ್ನು ಹೂಡಿಯೇ ಪಡೆದುಕೊಳ್ಳಬೇಕಾಗಿತ್ತು. ಈ ದಾವೆಗಳ ಇತ್ಯರ್ಥ ಅತಿ ದೀರ್ಘಕಾಲ ತೆಗೆದುಕೊಳ್ಳುತ್ತಿದ್ದುದೂ ಅಲ್ಲದೆ, ಎಡರುತೊಡರುಗಳಿಂದ ತುಂಬಿರುತ್ತಿದ್ದವು. ತಮ್ಮ ಪರಿಹಾರ ಕೇಳಿಕೆಯು ಇತ್ಯರ್ಥವಾಗಲು ದೀರ್ಘಕಾಲ ತೆಗೆದುಕೊಳ್ಳುತ್ತಿದ್ದುದರಿಂದ ಕ್ಲೇಮುದಾರರಿಗೆ ವಿಪರೀತ ಅನಾನುಕೂಲ ಉಂಟಾಗುತ್ತಿತ್ತು. ಸಾಲದ್ದಕ್ಕೆ, ಅಪಘಾತಕ್ಕೆ ಗುರಿಯಾದವನು ನ್ಯಾಯಾಲಯ ಶುಲ್ಕವನ್ನೂ ಕೊಡಬೇಕಾಗಿದ್ದಿತು. ಅಪಘಾತಕ್ಕೆ ಬಲಿಯಾದವರು ಮತ್ತು ಅವರ ಸಂಬಂಧಿಗಳು ತಮ್ಮ ಪರಿಹಾರ ಕೇಳಿಕೆ ಮೊಕದ್ದಮೆಗಳಿಗೆ ತೆರಬೇಕಾದ ನ್ಯಾಯಾಲಯ ಶುಲ್ಕ ಮತ್ತು ಹೊರಬೇಕಾದ ಖರ್ಚುಗಳಿಗೆ ಹಣವನ್ನು ಹೊಂದಿಸಲು ಅನೇಕ ವೇಳೆ ಪಡುಪಾಟಲು ಪಡಬೇಕಾಗಿತ್ತು. ಕಣ್ಣಿಗೆ ಕುಕ್ಕುವ ಈ ಅನ್ಯಾಯವನ್ನು ತಪ್ಪಿಸಲು, ಮೋಟಾರು ವಾಹನಗಳ ಅಧಿನಿಯಮದ 165ನೆಯ ಖಂಡದಲ್ಲಿ, ಮೋಟಾರು ಅಪಘಾತ ಕೇಳಿಕೆ ನ್ಯಾಯಾಧಿಕರಣಗಳನ್ನು ಸ್ಥಾಪಿಸಲು, ಒಂದು ಉಪಬಂಧವನ್ನು ಸೇರಿಸಲಾಯಿತು. ಈ ನ್ಯಾಯಾಧಿಕರಣ, ಸಿವಿಲ್ ನ್ಯಾಯಾಲಯಗಳ ಆಮೆ ವೇಗದ ಪ್ರಕ್ರಿಯೆಗಳಿಗೆ ಒಂದು ಬದಲಿ ವ್ಯವಸ್ಥೆಯನ್ನು ಕೊಟ್ಟಿದೆ. ಈ ನ್ಯಾಯಾಧಿಕರಣದ ಉದ್ದೇಶ, ಸಿವಿಲ್ ನ್ಯಾಯಾಲಯಗಳ ಪ್ರಕ್ರಿಯೆಗಳ ಸಂಕೋಲೆಗಳಿಂದ ಬಿಡಿಸಿಕೊಂಡು, ಸುಲಭ ಖರ್ಚಿನಲ್ಲಿ, ಒಂದು ಗೊತ್ತಾದ ಕಾಲದ ಚೌಕಟ್ಟಿನಲ್ಲಿ ನ್ಯಾಯಾಧಿಕರಣಕ್ಕೆ ಸಾಧುವೆಂದು ತೋರಿದ ಪರಿಹಾರಧನವನ್ನು ನೀಡುವುದೇ ಆಗಿದೆ.

ಅಧಿನಿಯಮದ ಕೆಳಗೆ ಒಂದಕ್ಕಿಂತ ಹೆಚ್ಚು ನ್ಯಾಯಾಧಿಕರಣಗಳನ್ನು ಸ್ಥಾಪಿಸಬಹುದು. ಅವುಗಳ ಪ್ರಾದೇಶಿಕ ಅಧಿಕಾರ ವ್ಯಾಪ್ತಿಯನ್ನು ಆ ನ್ಯಾಯಾಧಿಕರಣಗಳನ್ನು ಸ್ಥಾಪಿಸಲು ಹೊರಡಿಸಿದ ಅಧಿಸೂಚನೆಯೇ ನಿರ್ದಿಷ್ಟಪಡಿಸುತ್ತದೆ. ರಾಜ್ಯದ ಒಂದು ಪ್ರದೇಶದಲ್ಲಿ ಮಹಾನಗರಗಳಲ್ಲಿರುವಂತೆಯೇ ಎರಡು ಅಥವಾ ಹೆಚ್ಚಿಗೆ ನ್ಯಾಯಾಧಿಕರಣಗಳನ್ನು ಸ್ಥಾಪಿಸಿದರೆ, ಅವುಗಳ ನಡುವೆ ಪ್ರಕರಣಗಳ ಹಂಚಿಕೆಯನ್ನು ರಾಜ್ಯ ಸರ್ಕಾರ ಸೂಕ್ತವಾಗಿ ಹೊಂದಾಣಿಕೆ ಮಾಡುತ್ತದೆ.

ಸರ್ಕಾರಕ್ಕೆ ಅಪೇಕ್ಷಣೀಯವೆಂದೆನಿಸದಷ್ಟು ಸಂಖ್ಯೆಯಲ್ಲಿ ಸದಸ್ಯರುಗಳು ಈ ನ್ಯಾಯಾಧಿಕರಣದಲ್ಲಿರಬಹುದು. ಸದಸ್ಯರಲ್ಲೊಬ್ಬರು ನ್ಯಾಯಾಧಿಕರಣದ ಅಧ್ಯಕ್ಷರಾಗಿರುತ್ತಾರೆ. ಸಾಧಾರಣವಾಗಿ ಉಚ್ಚ ನ್ಯಾಯಾಲಯದ ನ್ಯಾಯಾಧೀಶರೋ ಅಥವಾ ಜಿಲ್ಲಾ ನ್ಯಾಯಾಧೀಶರೋ, ಅಥವಾ ಉಚ್ಚ ನ್ಯಾಯಾಲಯದ ನ್ಯಾಯಾಧೀಶನಾಗಿ ನೇಮಕ ಹೊಂದಲು ಅರ್ಹತೆ ಇರುವ ವ್ಯಕ್ತಿ ನ್ಯಾಯಾಧಿಕರಣದ ಅಧ್ಯಕ್ಷನಾಗಿರುತ್ತಾನೆ. ಮೋಟಾರು ಅಪಘಾತ ಕೇಳಿಕೆ ನ್ಯಾಯಾಧಿಕರಣವು, ಉಚ್ಚ

ನ್ಯಾಯಾಲಯದ ಅಧೀನ ನ್ಯಾಯಾಲಯವಾಗಿದ್ದು, ಒಂದು ನ್ಯಾಯಾಧಿಕರಣದ ಮುಂದಿರುವ ಪ್ರಕರಣವನ್ನು ಅದೇ ರಾಜ್ಯದಲ್ಲಿ ಇರುವ ಇನ್ನೊಂದು ನ್ಯಾಯಾಧಿಕರಣಕ್ಕೆ ಉಚ್ಚ ನ್ಯಾಯಾಲಯವು ವರ್ಗಾಯಿಸಬಹುದು. ಕೇಳಿಕೆ ನ್ಯಾಯಾಧಿಕರಣದ ಐತೀರ್ಪಿನಿಂದ ಮೇಲ್ಮನವಿಗಳನ್ನು ಉಚ್ಚ ನ್ಯಾಯಾಲಯಕ್ಕೆ ಸಲ್ಲಿಸಬಹುದು, ಹಾಗೂ ಸಿವಿಲ್ ಪ್ರಕ್ರಿಯಾ ಸಂಹಿತೆಯ 115ನೆಯ ಖಂಡದ ಕೆಳಗೆ ಪುನರೀಕ್ಷಣಾ ಅರ್ಜಿಯನ್ನು ಉಚ್ಚ ನ್ಯಾಯಾಲಯಕ್ಕೆ ಮಾತ್ರ ಸಲ್ಲಿಸಬಹುದು.

ಈ ಕೇಳಿಕೆ ನ್ಯಾಯಾಧಿಕರಣದ ಅಧಿಕಾರ ವ್ಯಾಪ್ತಿಯನ್ನು ಮೋಟಾರು ವಾಹನದ ಉಪಯೋಗದಿಂದ ಉದ್ಭವಿಸಿದ ಕ್ಲೇಮುಗಳಿಗೆ ಮಾತ್ರ ಸೀಮಿತಗೊಳಿಸಲಾಗಿದೆ. ಮೋಟಾರು ವಾಹನ ಅಂದರೆ ಏನು ಎಂದು ಅಧಿನಿಯಮದಲ್ಲಿ ವಿಷದೀಕರಿಸಲಾಗಿದೆ. ಮೋಟಾರು ವಾಹನದ ಉಪಯೋಗದಿಂದ ಸಂಭವಿಸಿದ ಅಪಘಾತವೇ ಪರಿಹಾರ ಕೇಳಿಕೆಗೆ ಆಧಾರವಾಗಿದೆ. ವಾಹನವು ಯಾಂತ್ರಿಕ ಶಕ್ತಿಯಿಂದ ಚಲಿಸುವಂಥದಾಗಿದ್ದು, ಹೀಗೆ ಅದನ್ನು ಉಪಯೋಗಿಸಿದ ಅಥವಾ ದುರುಪಯೋಗಗೊಳಿಸಿದ ಕಾರಣದಿಂದ ಅಪಘಾತ ಸಂಭವಿಸಿರಬೇಕು.

ಕೇಳಿಕೆ ನ್ಯಾಯಾಧಿಕರಣವು ವಿಚಾರಣೆಗೆ ಸ್ವೀಕರಿಸಬಲ್ಲ ಮತ್ತು ಸ್ವೀಕರಿಸಿ ವಿಚಾರಣೆಗೆ ಕೈಗೆತ್ತಿಕೊಳ್ಳುವ ಕೇಳಿಕೆಗಳು ಈ ಕೆಳಗೆ ಕಂಡ ಬಗೆಗಳಿಗೆ ಸೇರಿರುತ್ತವೆ:

i. ವಾಹನ ಚಾಲಕನಾಗಲೀ, ಅಥವಾ ವಾಹನದ ಮಾಲೀಕನಾಗಲೀ, ವಾಹನವನ್ನು ನಡೆಸುವಲ್ಲಿ ನಿರ್ಲಕ್ಷ್ಯದಿಂದ ಇರದಿದ್ದರೂ ಅಪಘಾತಕ್ಕೊಳಗಾದ ವ್ಯಕ್ತಿ ಪರಿಹಾರಕ್ಕಾಗಿ ಕ್ಲೇಮನ್ನು ಸಲ್ಲಿಸಬಹುದು: ಅಧಿನಿಯಮದ 140ನೆಯ ಖಂಡದ ಕೆಳಗೆ ಇದನ್ನು ಲೋಪರಹಿತ ಕ್ಲೇಮು ಎಂದು ಕರೆಯಲಾಗಿದೆ.

ii. ಡಿಕ್ಕಿ ಹೊಡೆದು ಪರಾರಿಯಾದ ಅಪಘಾತದ ಪ್ರಕರಣಗಳಲ್ಲಿ ಚಾಲಕನನ್ನಾಗಲೀ, ಮಾಲೀಕನನ್ನಾಗಲೀ, ವಿಮೆ ಕಂಪನಿಯನ್ನಾಗಲೀ ಪತ್ತೆ ಹಚ್ಚಲು ಆಗದಿರುವ ಸಂದರ್ಭಗಳಲ್ಲಿ ಪರಿಹಾರಕ್ಕಾಗಿ ಸಲ್ಲಿಸಲಾದ ಕ್ಲೇಮುಗಳು (161ನೆಯ ಖಂಡ)

iii. ವಾಹನ ಚಾಲಕನ ಅಥವಾ ಮಾಲೀಕನ ಅಪಕೃತ್ಯದ ಕಾರಣ ಸಂಭವಿಸಿದ ಅಪಘಾತಗಳು, ಅಥವಾ ನಿರ್ಲಕ್ಷ್ಯದಿಂದ ಸಂಭವಿಸಿದ ಮರಣಾಂತಿಕ ಅಪಘಾತಗಳಿಂದ ಉದ್ಭವಿಸಿದ ಪರಿಹಾರದ ಕ್ಲೇಮುಗಳು.

iv. ಮೂರನೆಯ ವ್ಯಕ್ತಿ ಮೋಟಾರು ವಾಹನವನ್ನು ಉಪಯೋಗಿಸಿದ್ದರಿಂದ ಸಂಭವಿಸಿದ ಆಸ್ತಿಹಾನಿಗೆ ಪರಿಹಾರ ಕೇಳುವ ಪ್ರಕರಣಗಳು.

ಮೋಟಾರು ಅಪಘಾತದಿಂದ ಹಾನಿಗೊಳಗಾದ ಆಸ್ತಿಯ ಮಾಲೀಕನು ಕೇವಲ ನಷ್ಟ ಪರಿಹಾರದ ಕ್ಲೇಮನ್ನು ಮಾಡಬಹುದು; ಹಾಗೆಯೇ ಅಪಘಾತದಲ್ಲಿ ಕ್ಷತಿಗೊಳಗಾದ ವ್ಯಕ್ತಿಯೂ ಪರಿಹಾರಕ್ಕಾಗಿ ಕ್ಲೇಮನ್ನು ಮಾಡಬಹುದು. ಶಾರೀರಕ ಕ್ಷತಿಯಾಗಿಲ್ಲದೇ ಇದ್ದರೂ ಆಸ್ತಿಹಾನಿಗೆ ಮಾತ್ರ ಪರಿಹಾರವನ್ನು ಕೇಳಬಹುದು.

ಅಪಘಾತದಿಂದ ಕ್ಷತಿಗೊಳಗಾದ ವ್ಯಕ್ತಿ, ಅಥವಾ ಹಾನಿಗೊಳಗಾದ ಆಸ್ತಿಯ

ಮಾಲೀಕ, ಅಥವಾ ಮರಣಾಂತಿಕವಾದ ಅಪಘಾತವಾಗಿದ್ದರೆ, ಮರಣ ಹೊಂದಿದ ವ್ಯಕ್ತಿಯ ಹಕ್ಕುದಾರ ಅಥವಾ ಹಕ್ಕುದಾರರುಗಳು ಅಥವಾ ಅವರಿಂದ ಅಧಿಕಾರ ಪಡೆದುಕೊಂಡ ಏಜೆಂಟ್ ಅಥವಾ ಅಭಿಕರ್ತ ಇವರುಗಳು ಪರಿಹಾರ ಕೇಳಿಕೆಗೆ ಅರ್ಜಿಯನ್ನು ಸಲ್ಲಿಸಬಹುದು.

ಅಪಘಾತವಾದ ತಾರೀಖಿನಿಂದ ಆರು ತಿಂಗಳುಗಳ* ಒಳಗೆ ಮೋಟಾರು ಕ್ಲೇಮುಗಳ ನ್ಯಾಯಾಧಿಕರಣದ ಮುಂದೆ ಅರ್ಜಿಯನ್ನು ಸಲ್ಲಿಸಬೇಕು.

ನ್ಯಾಯಾಧಿಕರಣವು ಪರಿಹಾರ ಕೇಳಿಕೆ ಅರ್ಜಿಯ ತಿಳುವಳಿಕೆಯನ್ನು ವಿಮಾ ಕಂಪನಿಗೂ ಮತ್ತು ಸಂಬಂಧಪಟ್ಟ ಇತರರಿಗೂ ಕೊಟ್ಟು ಕೇಳಿಕೆಯ ಬಗ್ಗೆ ವಿಚಾರಣೆ ಮಾಡಿ, ಪಕ್ಷಗಾರರೆಲ್ಲರಿಗೂ ತಮ್ಮ ತಮ್ಮ ವಾದ ವಿವಾದವನ್ನು ಮಂಡಿಸಲು ಅವಕಾಶಕೊಟ್ಟು, ತನಗೆ ನ್ಯಾಯಯುತವೂ ಸೂಕ್ತವೂ ಎಂದು ತೋರಿದ ಪರಿಹಾರದ ಮೊಬಲಗನ್ನು ನಿರ್ಧರಿಸಿ ಐತೀರ್ಪನ್ನು ಕೊಡುತ್ತದೆ; ಅಲ್ಲದೆ ಈ ಪರಿಹಾರದ ಮೊಬಲಗನ್ನು ಯಾರು ಯಾರು ಕೊಡಬೇಕೆಂಬುದನ್ನು ಸ್ಪಷ್ಟಪಡಿಸುತ್ತದೆ. ಐತೀರ್ಪಿನಲ್ಲಿ ಸೂಚಿಸಿದ ಪರಿಹಾರದ ಮೊಬಲಗನ್ನು ಮೂವತ್ತು ದಿವಸಗಳ ಒಳಗೆ ನ್ಯಾಯಾಲಯದಲ್ಲಿ ಠೇವಣಿ ಇಡಬೇಕೆಂದೂ ಅದು ನಿರ್ದೇಶಿಸಬಲ್ಲುದು. ಪರಿಹಾರ ಕೇಳಿಕೆ ಅರ್ಜಿಯನ್ನು ವಿಚಾರಣೆ ಮಾಡುವುದಕ್ಕಾಗಿ, ನ್ಯಾಯಾಧಿಕರಣವು ತನಗೆ ಸೂಕ್ತವೆಂದು ತೋರಿದ ಸಂಕ್ಷಿಪ್ತ ಪ್ರಕ್ರಿಯೆಯನ್ನು ಅನುಸರಿಸಲು ಅಧಿನಿಯಮವು ನಿರ್ದಿಷ್ಟವಾಗಿ ಉಪಬಂಧಿಸಿದೆ; ಅಲ್ಲದೆ ಪ್ರಮಾಣಪೂರ್ವಕ ಸಾಕ್ಷ್ಯವನ್ನು ದಾಖಲಿಸಿಕೊಳ್ಳಲೂ ಸಾಕ್ಷಿಗಳು ಹಾಜರಾಗುವುದನ್ನು ಜಾರಿಮಾಡಲೂ, ದಸ್ತಾವೇಜುಗಳನ್ನು ಇತರ ಸಾಕ್ಷ್ಯಾಧಾರಗಳನ್ನು ಪತ್ತೆಮಾಡಿ ಹಾಜರುಪಡಿಸುವಂತೆ ಒತ್ತಾಯಿಸಲೂ, ವ್ಯವಹಾರ ನ್ಯಾಯಾಲಯಗಳಿಗಿರುವ ಅಧಿಕಾರವನ್ನು ಅದಕ್ಕೆ ಕೊಡಲಾಗಿದೆ.

## ಮೇಲ್ಮನವಿಗಳು

ನ್ಯಾಯಾಧಿಕರಣದ ಐತೀರ್ಪಿನ ತಾರೀಖಿನಿಂದ ತೊಂಬತ್ತು ದಿವಸಗಳ ಒಳಗೆ ಉಚ್ಚ ನ್ಯಾಯಾಲಯಕ್ಕೆ ಮೇಲ್ಮನವಿಯನ್ನು ಸಲ್ಲಿಸಬಹುದು. ಆದರೆ ಮೇಲ್ಮನವಿದಾರನು ಐತೀರ್ಪಿನ ಪರಿಹಾರದ ಮೊಬಲಗು ಅಥವಾ ರೂ. 25,000.00 ಇವೆರಡರಲ್ಲಿ ಯಾವುದು ಕಡಿಮೆಯೋ ಅದನ್ನು ಠೇವಣಿ ಇಡದ ಹೊರತು ಮೇಲ್ಮನವಿಯನ್ನು ಪರಿಗಣಿಸಲಾಗುವುದಿಲ್ಲವೆಂದು ಅಧಿನಿಯಮವು ಉಪಬಂಧಿಸಿದೆ. ಪರಿಹಾರದ ಮೊಬಲಗು ರೂ. 10,000.00ಕ್ಕಿಂತ ಕಡಿಮೆ ಇದ್ದರೆ ಮೇಲ್ಮನವಿಯನ್ನು ಸಲ್ಲಿಸುವ ಹಾಗೇ ಇಲ್ಲ. ಅಪಘಾತಕ್ಕೊಳಗಾದ ವ್ಯಕ್ತಿ ಅಥವಾ ಕೇಳಿಕೆದಾರ ತನ್ನ ಅರ್ಜಿ ವಜಾ ಆದರೆ ಅಥವಾ ಐತೀರ್ಪಿನಲ್ಲಿ ಸೂಚಿಸಿದ ಪರಿಹಾರದ ಮೊಬಲಗು ಅವನಿಗೆ ತೃಪ್ತಿಕರವಾಗಿಲ್ಲವಾದರೆ, ಅವನೂ ಮೇಲ್ಮನವಿಯನ್ನು ಸಲ್ಲಿಸಬಹುದು. ಅಥವಾ

---

*ಭಾಷಾಂತರಕಾರನ ಟಿಪ್ಪಣಿ: ಕ್ಲೇಮು ಅರ್ಜಿಗಳನ್ನು ಸಲ್ಲಿಸಲು ಈಗ ಯಾವ ಕಾಲ ಪರಿಮಿತಿಯೂ ಇಲ್ಲ. ಕರ್ನಾಟಕದಲ್ಲಿ ಈಗ ಸೀನಿಯರ್ ದರ್ಜೆ ಸಿವಿಲ್ ನ್ಯಾಯಾಧೀಶರುಗಳು ನ್ಯಾಯಾಧಿಕರಣದ ಏಕ ಸದಸ್ಯ ಪೀಠದಲ್ಲಿ ಕೂರುತ್ತಾರೆ.

ಅವನು ಎದುರು ಮೇಲ್ಮನವಿಯನ್ನು ಸಲ್ಲಿಸಬಹುದು. ಈ ಎದುರು ಮೇಲ್ಮನವಿಯನ್ನು ಮೇಲ್ಮನವಿಯೊಟ್ಟಿಗೇ ವಿಚಾರಣೆ ಮಾಡಲಾಗುತ್ತದೆ. ನ್ಯಾಯಾಧಿಕರಣದ ಐತೀರ್ಪಿನಿಂದ ನೇರವಾಗಿ ಸರ್ವೋಚ್ಚ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಲು, ಸಂವಿಧಾನದ 136ನೆಯ ಅನುಚ್ಛೇದದ ಕೆಳಗೆ ವಿಶೇಷ ಅನುಮತಿ ಅರ್ಜಿಯನ್ನು ಸಲ್ಲಿಸಬಹುದು.

ಇತರ ನ್ಯಾಯಾಧಿಕರಣಗಳಂತೆ, ಯಾವುದೇ ಪ್ರದೇಶದಲ್ಲಿ ಕೇಳಿಕೆ ನ್ಯಾಯಾಧಿಕರಣವು ಅಸ್ತಿತ್ವದಲ್ಲಿದ್ದರೆ, ಆ ನ್ಯಾಯಾಧಿಕರಣವು ಆ ಪ್ರದೇಶದಲ್ಲಿ ನ್ಯಾಯ ನಿರ್ಣಯಮಾಡಬಹುದಾದ ಯಾವುದೇ ಪರಿಹಾರದ ಕ್ಲೇಮನ್ನು ವಿಚಾರಣೆ ಮಾಡಲು ಯಾವ ಸಿವಿಲ್ ನ್ಯಾಯಾಲಯಕ್ಕೂ ಅಧಿಕಾರ ವ್ಯಾಪ್ತಿ ಇಲ್ಲ.

ಮೋಟಾರು ವಾಹನಗಳ ಅಧಿನಿಯಮದ ಕೆಳಗಿನ ಕೇಳಿಕೆ ನ್ಯಾಯಾಧಿಕರಣ ಮತ್ತು ಕಾರ್ಮಿಕರ ಪರಿಹಾರ ಅಧಿನಿಯಮ ಇವೆರಡೂ ಒಂದಕ್ಕೊಂದು ಸ್ವತಂತ್ರವಾದ ನ್ಯಾಯಾಧಿಕರಣಗಳಾದರೂ, ಕೆಲವು ಸಂದರ್ಭಗಳಲ್ಲಿ ಅವುಗಳಿಗೆ ಸಮವರ್ತಿ ಅಧಿಕಾರವ್ಯಾಪ್ತಿ ಇದೆ. ಇಂಥ ಸಂದರ್ಭದಲ್ಲಿ ಕೇಳಿಕೆದಾರ ತಾನು ಎರಡರಲ್ಲೊಂದು ನ್ಯಾಯಾಧಿಕರಣವನ್ನು ಆರಿಸಿಕೊಳ್ಳಬಹುದು. ಕಾರ್ಮಿಕರ ಪರಿಹಾರ ಅಧಿನಿಯಮದ 19ನೆಯ ಖಂಡ ಸಿವಿಲ್ ನ್ಯಾಯಾಲಯದ ಅಧಿಕಾರ ವ್ಯಾಪ್ತಿಗೆ ತಡೆಯಾದರೂ ಅದು ಮೋಟಾರು ವಾಹನದ ಅಧಿನಿಯಮದ ಅಧಿಕಾರ ವ್ಯಾಪ್ತಿಗೆ ತಡೆಯೊಡ್ಡುವುದಿಲ್ಲ.

ಮೋಟಾರು ಅಪಘಾತದಿಂದ ಕ್ಲೇಮು ಉದ್ಭವಿಸಿದರೆ, ಕೇಳಿಕೆದಾರನು ಪರಿಹಾರ ಪಡೆಯುವುದಕ್ಕಾಗಿ ಮೋಟಾರು ವಾಹನ ಅಧಿನಿಯಮದ ಕೆಳಗೆ ಬರುವ ನ್ಯಾಯಾಧಿಕರಣವನ್ನೋ ಅಥವಾ ಕಾರ್ಮಿಕರ ಪರಿಹಾರ ಅಧಿನಿಯಮದ ಕೆಳಗೆ ಬರುವ ನ್ಯಾಯಾಧಿಕರಣವನ್ನೋ ಆರಿಸಿಕೊಳ್ಳಬಹುದು.

# ಕಾರ್ಮಿಕರ ಪರಿಹಾರ ಅಧಿನಿಯಮ

ಹೊಸದಾದ ಮತ್ತು ಅತ್ಯಾಧುನಿಕ ಯಂತ್ರಗಳ ಬಳಕೆಯಿಂದಾಗಿ ಭಾರತದಲ್ಲಿ ಕೈಗಾರಿಕೆಯ ಶೀಘ್ರವಾದ ಬೆಳವಣಿಗೆಗೆ ಕಾರಣವಾಗಿದೆ. ಇಂಥ ಯಂತ್ರಗಳನ್ನು ನಡೆಸುವವರಲ್ಲಿ ಅನೇಕರು ಅನಕ್ಷರಸ್ತರೂ ಮತ್ತು ಬಡವರೂ ಆಗಿರುವುದರಿಂದ ಅಪಘಾತವಾಗುವ ಅಪಾಯದ ಸಂಭವ ಇಲ್ಲದೇ ಇಲ್ಲ; ಇಂಥ ಅಪಘಾತಗಳಿಂದ ಸಂಭವಿಸಬಹುದಾದ ಕಷ್ಟನಷ್ಟಗಳಿಂದ ಕಾರ್ಮಿಕರ ರಕ್ಷಣೆ ಮಾಡಬೇಕೆಂಬ ಅರಿವು, ಮತ್ತು ಅವರಿಗೆ, ಸಿವಿಲ್ ನ್ಯಾಯಾಲಯಗಳ ಸುತ್ತು ಬಳಸಿನ ಪ್ರಕ್ರಿಯೆ, ವಿಳಂಬ, ಮತ್ತು ಖರ್ಚುಗಳು ಇಲ್ಲದೆ, ಶೀಘ್ರವಾಗಿ ಪರಿಹಾರ ದೊರಕಿಸಿಕೊಡುವ ಉದ್ದೇಶದಿಂದ 1923ರ ಕಾರ್ಮಿಕ ಪರಿಹಾರ ಕಾಯಿದೆ ಅಸ್ತಿತ್ವಕ್ಕೆ ಬಂದಿದೆ. ಅಪಘಾತಗಳ ಸಂಖ್ಯೆಯನ್ನು ಮಿತಿಗೊಳಿಸುವುದಕ್ಕಾಗಿ ಮತ್ತು ಸೂಕ್ತವಾದ ವೈದ್ಯಕೀಯ ಚಿಕಿತ್ಸೆ ಮತ್ತು ಸುಲಭ ಖರ್ಚಿನಲ್ಲಿ ಹಾಗೂ ಶೀಘ್ರವಾಗಿ ಪರಿಹಾರ ಕೇಳಿಕೆಗಳನ್ನು ಇತ್ಯರ್ಥಮಾಡುವುದರ ಮೂಲಕ ಅಪಘಾತಗಳ ಪರಿಣಾಮವನ್ನು ಶಮನಗೊಳಿಸಲು, ಸಿವಿಲ್ ನ್ಯಾಯಾಲಯಗಳ ಮೂಲಕ ಸಾಧ್ಯವಾಗುವುದಕ್ಕಿಂತ ಪರಿಣಾಮಕಾರಿಯಾಗಿ ವಿಶೇಷ ನ್ಯಾಯಾಧಿಕರಣಗಳ ಮೂಲಕ ಒದಗಿಸಲು ಶಾಸನವೊಂದರ ಅವಶ್ಯಕತೆಯನ್ನು ಮನಗಾಣಲಾಯಿತು.

ಹೀಗೆ, 1923ರ ಕಾರ್ಮಿಕರ ಪರಿಹಾರ ಅಧಿನಿಯಮವು, ಪರಿಹಾರ ಕೇಳಿಕೆಗೆ ಸಂಬಂಧಿಸಿದ ವ್ಯಾಜ್ಯಗಳ ಶೀಘ್ರ ತೀರ್ಮಾನಕ್ಕಾಗಿ ಅವಕಾಶ ಕಲ್ಪಿಸಿದೆ. ಯಾವುದೇ ವ್ಯಕ್ತಿಯೊಬ್ಬ ಪರಿಹಾರವನ್ನು ಕೊಡಬೇಕಾದ ಹೊಣೆಗೆ ಸಂಬಂಧಿಸಿದ ಪ್ರಶ್ನೆ, ಘಾಯಗೊಂಡ ವ್ಯಕ್ತಿ ಕಾರ್ಮಿಕನೇ ಅಲ್ಲವೇ ಎಂಬ ಪ್ರಶ್ನೆ, ಪರಿಹಾರದ ಮೊಬಲಗು, ಪರಿಹಾರ ಕೊಡಬೇಕಾದ ಅವಧಿ, ಮತ್ತು ಅಪಘಾತದಿಂದ ಉಂಟಾದ ವಿಕಲತೆಯ ಸ್ವರೂಪ ಮತ್ತು ತೀವ್ರತೆ, ಈ ಪ್ರಶ್ನೆಗಳನ್ನು ಆಯೋಗವೊಂದು ನಿರ್ಧರಿಸುತ್ತದೆ. ಆಯೋಗದ ಕಮಿಷನರ್ ಅವರನ್ನು ಅಧಿನಿಯಮದ ಕೆಳಗೆ ನೇಮಿಸಲಾಗುತ್ತದೆ. ಕಮಿಷನರ್ ಅವರು ತೀರ್ಮಾನಿಸಬೇಕಾದ ಅಥವಾ ವ್ಯವಹರಿಸಬೇಕಾದ ಪ್ರಕರಣಗಳನ್ನು ಸಿವಿಲ್ ನ್ಯಾಯಾಲಯಗಳ ಅಧಿಕಾರ ವ್ಯಾಪ್ತಿಯಿಂದ ತೆಗೆದುಹಾಕಲಾಗಿದೆ. ರಾಜ್ಯ ಸರ್ಕಾರವು, ರಾಜಪತ್ರದಲ್ಲಿ ಅಧಿಸೂಚನೆಗಳನ್ನು ಪ್ರಸಿದ್ಧಿಸಿ ನಿರ್ದಿಷ್ಟ ಪ್ರದೇಶ ಅಥವಾ ಪ್ರದೇಶಗಳಿಗೆ ಕಮಿಷನರ್‌ಗಳನ್ನು ನೇಮಕಮಾಡುತ್ತದೆ.

ಒಂದೇ ಪ್ರದೇಶಕ್ಕೆ ಒಂದಕ್ಕಿಂತ ಹೆಚ್ಚು ಕಮಿಷನರುಗಳನ್ನು ನೇಮಕ ಮಾಡಬಹುದು; ಹಾಗೆ ನೇಮಕ ಮಾಡಿದಾಗ ಅವರುಗಳ ನಡುವಿನ ಕೆಲಸದ ಹಂಚಿಕೆಯನ್ನು ಅಧಿಸೂಚನೆಯ ಮೂಲಕ ನಿಗದಿಪಡಿಸಲಾಗುತ್ತದೆ. ಅಧಿನಿಯಮದ ಕೆಳಗೆ ವಹಿಸಲಾದ ಯಾವುದೇ ವಿಷಯವನ್ನು ತೀರ್ಮಾನ ಮಾಡುವುದಕ್ಕೋಸ್ಕರ ವ್ಯಾಜ್ಯ ವಿಷಯಕ್ಕೆ ಪ್ರಸ್ತುತವಾದ ಯಾವುದೇ ವಿಷಯದಲ್ಲಿ ವಿಶೇಷ ತಿಳುವಳಿಕೆ ಇರುವ ಪರಿಣಿತರನ್ನು ವಿಚಾರಣೆ ನಡೆಸುವಾಗ ತನ್ನ ಸಹಾಯಕ್ಕಾಗಿ ಅರಿಸಿಕೊಳ್ಳಲು

ಕಮಿಷನರಿಗೆ ಅಧಿನಿಯಮ ಅವಕಾಶ ಮಾಡಿಕೊಟ್ಟಿದೆ. ಪಕ್ಷಗಾರರು ತಮ್ಮ ತಮ್ಮೊಳಗೆ ಕ್ಲೇಮ್ ಅಂದರೆ ಕೇಳಿಕೆಯನ್ನು ಇತ್ಯರ್ಥಪಡಿಸಿಕೊಂಡು ಅದನ್ನು ದಾಖಲೆ ಮಾಡಿಸಬಹುದು. ಪರಿಹಾರದ ಕ್ಲೇಮುಗಳಿಗಾಗಿ ಅರ್ಜಿಗಳನ್ನೂ, ಅಥವಾ ಇತ್ಯರ್ಥಪಡಿಸಿಕೊಂಡ ಕ್ಲೇಮುಗಳನ್ನು ದಾಖಲಿಸಲು ಕೋರುವ ಅರ್ಜಿಗಳನ್ನೂ, ಅಥವಾ ಅಧಿನಿಯಮದ ಕೆಳಗೆ ಬೇರೆ ಯಾವ ವಿಷಯವನ್ನು ಕುರಿತಾದ ಅರ್ಜಿಗಳನ್ನೂ ನಿಯಮಗಳ ಕೆಳಗೆ ನಿಗದಿಪಡಿಸಲಾದ ನಮೂನೆಗಳಲ್ಲೇ ಮಾಡಬೇಕು.

ಕಮಿಷನರ್ ಅವರು, ಪ್ರತಿಯೊಬ್ಬ ಸಾಕ್ಷಿಯ ಸಾಕ್ಷ್ಯಸಾರವನ್ನು ಸಂಗ್ರಹವಾಗಿ ದಾಖಲಿಸಿ, ಕೊಡಬೇಕಾದ ಒಟ್ಟು ಮೊತ್ತವನ್ನು ನಿರ್ಧರಿಸಿ, ತನ್ನ ಐತೀರ್ಪನ್ನು ಕೊಡಬೇಕು. ಆ ನಂತರ, ನಿಗದಿಪಡಿಸಿದ ಮೊಬಲಗನ್ನು ಠೇವಣಿ ಇಡುವಂತೆ ಮಾಲೀಕನನ್ನು ನಿರ್ದೇಶಿಸುತ್ತಾರೆ. ತನಗೆ ಸರಿಯೆಂದು ತೋರಿದ ಮಧ್ಯವರ್ತಿ ಆಜ್ಞೆಯನ್ನು ಮಾಡಲೂ ಸಹ ಕಮಿಷನರ್ ಅವರಿಗೆ ಅಧಿಕಾರವಿದೆ. ಕಮಿಷನರ್ ಮಾಡಿದ ಈ ಕೆಳಗಿನ ಆದೇಶಗಳ ಮೇಲೆ ಉಚ್ಚ ನ್ಯಾಯಾಲಯಕ್ಕೆ ಮೇಲ್ಮನವಿಯನ್ನು ಸಲ್ಲಿಸಬಹುದು:

i. ಅರ್ಧಮಾಸಿಕ ಸಂದಾಯಗಳ ಬದಲಾಗಿ ಒಂದೇ ಗಂಟಿನಲ್ಲಿ ಪರಿಹಾರವನ್ನು ಕೊಡಬೇಕೆಂದು ಮಾಡಿದ ಆದೇಶಕ್ಕೆ ಅಥವಾ ಒಂದೇ ಗಂಟಿನ ಪರಿಹಾರ ಬೇಡಿದ ಕ್ಲೇಮಿಗೆ ಭಾಗಶಃ ಅಥವಾ ಪೂರ್ತ ಅನುಮತಿಯನ್ನು ನಿರಾಕರಿಸಿದ ಆದೇಶ

ii. ಬಡ್ಡಿಯನ್ನು ಅಥವಾ ದಂಡವನ್ನು ಕೊಡಬೇಕೆಂದು ಮಾಡಿದ ಆದೇಶ.

iii. ಅರ್ಧಮಾಸಿಕ ಸಂದಾಯಕ್ಕೆ ಅನುಮತಿಸಲು ನಿರಾಕರಿಸಿದ ಆದೇಶ

iv. ಮೃತನಾದ ಕಾರ್ಮಿಕನ ಆಶ್ರಿತರುಗಳಿಗೆ ಪರಿಹಾರದ ಹಣವನ್ನು ಹಂಚುವಂತೆ ಅವಕಾಶ ಮಾಡಿಕೊಟ್ಟ ಆದೇಶ, ಅಥವಾ ತಾನು ಆಶ್ರಿತನೆಂದು ಹೇಳಿಕೊಂಡ ವ್ಯಕ್ತಿಯು ಮಾಡಿದ ಕ್ಲೇಮನ್ನು ನಿರಾಕರಿಸಿದ ಆದೇಶ.

v. 12ನೆಯ ಖಂಡದ 2ನೆಯ ಉಪಖಂಡದ ಉಪಬಂಧಗಳ ಕೆಳಗೆ ಕೊಟ್ಟಿದ್ದ ಭದ್ರತಾ ಪತ್ರದ ಹಣಕ್ಕಾಗಿ ಮಾಡಿದ ಯಾವುದೇ ಕ್ಲೇಮಿಗೆ ಅನುಮತಿಸುವ/ಅನುಮತಿಸದಿರುವ ಆದೇಶ.

vi. ಒಪ್ಪಂದ ಪತ್ರವನ್ನು ನೋಂದಣಿ ಮಾಡಲು ನಿರಾಕರಿಸಿದ ಆದೇಶ, ಅಥವಾ ನೋಂದಣಿ ಮಾಡಿಕೊಳ್ಳಲು ಮಾಡಿದ ಆದೇಶ, ಅಥವಾ ನಿಬಂಧನೆಗೊಳಪಟ್ಟು ನೋಂದಣಿ ಮಾಡಲು ಮಾಡಿದ ಆದೇಶ.

ಉಚ್ಚ ನ್ಯಾಯಾಲಯದ ಆಜ್ಞೆಯಿಂದ, ಸರ್ವೋಚ್ಚ ನ್ಯಾಯಾಲಯಕ್ಕೆ ಮೇಲ್ಮನವಿ ಮಾಡಲು, ಸಂವಿಧಾನದ 136ನೆಯ ಅನುಚ್ಛೇದದ ಕೆಳಗೆ ವಿಶೇಷ ಅನುಮತಿ ಅರ್ಜಿಯನ್ನು ಸಲ್ಲಿಸಬಹುದು.

# 3

# ಇತರ ವೇದಿಕೆಗಳು

## ಮಧ್ಯಸ್ಥಿಕೆ

ವ್ಯಾಜ್ಯದ ಪ್ರತಿಸ್ಪರ್ಧಿಗಳು ತಮ್ಮಲ್ಲಿನ ವ್ಯಾಜ್ಯವನ್ನು ಪರಿಹರಿಸಿಕೊಳ್ಳುವುದನ್ನು ತಮಗಿಬ್ಬರಿಗೂ ವಿಶ್ವಾಸವಿರುವ ವ್ಯಕ್ತಿ ಅಥವಾ ವ್ಯಕ್ತಿಗಳಿಗೆ ವಹಿಸಿಕೊಡುವುದಕ್ಕೆ ಮಧ್ಯಸ್ತಿಕೆ ಎನ್ನುತ್ತಾರೆ. ವ್ಯವಸ್ಥಿತ ಸಮಾಜದಲ್ಲಿ ಪ್ರಜೆಗಳು ಕಾನೂನನ್ನು ತಾವೇ ತಮ್ಮ ಕೈಗೆ ತೆಗೆದುಕೊಳ್ಳುವ ಹಾಗಿಲ್ಲ. ಇದಕ್ಕಾಗಿ ನ್ಯಾಯಿಕ ಯಂತ್ರವನ್ನು ರಾಜ್ಯ ಸರ್ಕಾರ ಒದಗಿಸಿದೆ. ಸಕ್ಷಮತೆ ಇರುವ ನ್ಯಾಯಾಲಯಗಳು ಇಂಥ ವಿಷಯಗಳನ್ನು ತೀರ್ಮಾನ ಮಾಡುತ್ತವೆ. ಈ ನ್ಯಾಯಾಲಯಗಳಲ್ಲಿನ ನ್ಯಾಯಾಧೀಶರನ್ನು ರಾಜ್ಯ ಸರ್ಕಾರ ನೇಮಕ ಮಾಡುತ್ತದೆ. ಪಕ್ಷಕಾರರು ತಮ್ಮ ವ್ಯಾಜ್ಯಗಳನ್ನು ಇತ್ಯರ್ಥಪಡಿಸಲು ಅವರ ಮುಂದೆ ತೆಗೆದುಕೊಂಡು ಹೋಗಬೇಕಾಗಿದೆ. ಮಧ್ಯಸ್ತಿಕೆ ಎನ್ನುವುದು ವ್ಯಾಜ್ಯಗಳ ಪರಿಹಾರಕ್ಕಾಗಿ, ನ್ಯಾಯಿಕ ವೇದಿಕೆಯಿಂದ ಹೊರಗೆ ನಿಂತ ಪರ್ಯಾಯಸಾಧನವಾಗಿದೆ. ಪಕ್ಷಕಾರರಿಬ್ಬರು, ನ್ಯಾಯಾಲಯಗಳಿಗೆ ಹೋಗುವ ಬದಲು, ನಿರ್ದಿಷ್ಟ ವಿಷಯಗಳಲ್ಲಿ ಗೊತ್ತಾದ ವ್ಯಕ್ತಿಗಳು ಕೊಡುವ ತೀರ್ಮಾನಕ್ಕೆ ತಾವಿಬ್ಬರೂ ಬದ್ಧರೆಂದು ಲಿಖಿತವಾಗಿ ಒಪ್ಪಂದ ಮಾಡಿಕೊಳ್ಳುವುದೇ ಈ ಕಾರ್ಯವಿಧಾನ ಅಥವಾ ಕಾರ್ಯವಿಧಿ.

ಮಧ್ಯಸ್ತಿಕೆಯಲ್ಲಿ ಅನೇಕ ಅನುಕೂಲಗಳಿವೆ; ಅದು ಕಡಿಮೆ ಖರ್ಚಿನದಾಗಿದ್ದು ಪ್ರಕರಣಗಳನ್ನು ಶೀಘ್ರವಾಗಿ ವಿಲೇ ಮಾಡಬಹುದು. ಇಲ್ಲಿ ಪ್ರಕ್ರಿಯೆಯ ತಾಂತ್ರಿಕ ತೊಡಕುಗಳಿಲ್ಲ. 'ಮಧ್ಯಸ್ತಿಕೆಗಾರ' ಎಂಬ ಪದವನ್ನು ಮೊದಲಿಗೆ ವ್ಯಕ್ತಿಯೊಬ್ಬನ ತಾಂತ್ರಿಕವಲ್ಲದ ಹುದ್ದೆಯ ಅಂಕಿತವಾಗಿ ಉಪಯೋಗಿಸಲಾಗುತ್ತಿತ್ತು. ವ್ಯಾಜ್ಯಕ್ಕೆ ಸಂಬಂಧಿಸಿದ ಕಾನೂನು ಯಾವುದೇ ಆಗಿರಲಿ, ವಿವಾದಗಳನ್ನು ತೀರ್ಮಾನ ಮಾಡುವುದಕ್ಕೆ ಅವನಿಗೆ ವಹಿಸಲಾಗುತ್ತಿತ್ತು. ಸಾಮಾನ್ಯ ಕಾನೂನಿನ ಹೊರಗೆ ವ್ಯಾಜ್ಯಗಳನ್ನು ಪರಿಹಾರ ಮಾಡುವುದಕ್ಕಾಗಿ ವಹಿಸುವಿಕೆಯನ್ನು ಆ ಪದ ವ್ಯಕ್ತಗೊಳಿಸುತ್ತಿತ್ತು. ಆದರೆ ಕಾಲಾನುಕ್ರಮದಲ್ಲಿ, ವ್ಯಾಜ್ಯಗಳ ಇತ್ಯರ್ಥಕ್ಕೋಸ್ಕರ ಆರಿಸಿಕೊಳ್ಳಲ್ಪಟ್ಟ ವ್ಯಕ್ತಿಯೆಂಬ ಅರ್ಥದಲ್ಲಿ ಅದು ಬಳಕೆಗೆ ಬಂದಿತು. ಅತಿಕಟ್ಟುನಿಟ್ಟಾದ ಅರ್ಥದಲ್ಲಿ ನ್ಯಾಯಿಕವೆಂದು ಹೇಳಲಾಗದಿದ್ದರೂ, ಪರಿಣಾಮದಲ್ಲಿ ಅದು, ಎಂದರೆ ಮಧ್ಯಸ್ತಿಕೆ ಮಾಡುವುದು, ಕಾನೂನಿನ ನಿಯಂತ್ರಣಕ್ಕೆ

ಒಳಪಟ್ಟಿರುವಂಥದೇ ಆಗಿದೆ. ಮಧ್ಯಸ್ತಿಕೆಗಾರನು, ನಿರಂಕುಶವಾಗಿಯಾಗಲೀ, ಬೇಕಾಬಿಟ್ಟಿಯಾಗಿ ಆಗಲೀ ದುರ್ನಡೆಯಿಂದಾಗಲೀ ನಡೆದುಕೊಳ್ಳುವಂತಿಲ್ಲ.

ಪುರಾತನ ಭಾರತದಲ್ಲಿ ಬೇರೆ ಬೇರೆ ದರ್ಜೆಯ ಮಧ್ಯಸ್ತಿಕೆ ಗುಂಪುಗಳಿದ್ದವು; 'ಪೂಗಾ' ಎಂಬ ವಿವಿಧ ಪಂಥ, ಬುಡಕಟ್ಟುಗಳಿಗೆ ಸೇರಿದ ಒಂದೇ ಸ್ಥಳದವರಾದ ಜನಗಳ ಮಂಡಲಿ, ಒಂದಿಲ್ಲೊಂದು ರೀತಿಯಲ್ಲಿ ಸಂಬಂಧವಿದ್ದ, ಬೇರೆ ಬೇರೆ ಬುಡಕಟ್ಟುಗಳಿಗೆ ಸೇರಿದ ವ್ಯಾಪಾರಗಾರರ ಮತ್ತು ಕುಶಲ ಕೆಲಸಗಾರರ ಶ್ರೇಣಿ ಅಥವಾ ಸಭೆಗಳು; ಕೌಟುಂಬಿಕ ಕಟ್ಟಿಗೊಳಪಟ್ಟ 'ಕುಲ' ಎಂಬ ವ್ಯಕ್ತಿಗಳ ಸಮೂಹ. ಪ್ರಾರಂಭಿಕ ಕಾಲದಿಂದಲೂ ಪಂಚಾಯಿತಿಗಳ ತೀರ್ಮಾನಗಳಿಗೆ ಎಲ್ಲರೂ ಬದ್ಧರು ಎಂಬುದಾಗಿ ಒಪ್ಪಲಾಗಿತ್ತು. ಪುರಾತನ ಹಿಂದೂ ನ್ಯಾಯಶಾಸ್ತ್ರದ ವ್ಯಾಖ್ಯಾನಕಾರ ಹಾಗೂ ಪಂಡಿತನಾದ ಕೋಲ್ ಬ್ರೂಕ್ ಎಂಬ ಇಂಗ್ಲೀಷ್ ಮಹಾಶಯನ ಪ್ರಕಾರ, ಪಂಚಾಯಿತಿಗಳೇ ಬೇರೆ ಬೇರೆ ರೀತಿಯ ಮಧ್ಯಸ್ತಿಕೆಯ ವ್ಯವಸ್ಥೆಗಳಾಗಿದ್ದು ಶಾಸನಬದ್ಧ ನ್ಯಾಯಾಲಯಗಳಿಗೆ ಅಧೀನವಾಗಿದ್ದವು. 'ಕುಲ'ದ ತೀರ್ಮಾನ 'ಶ್ರೇಣಿ'ಯ ಪುನರ್ವಿಮರ್ಶೆಗೆ ಒಳಪಟ್ಟಿತ್ತು. 'ಪೂಗ'ದ ತೀರ್ಮಾನಗಳ ಮೇಲೆ 'ಪ್ರಾಗ್ವಿವಾಕ'ಕ್ಕೆ ಮೇಲ್ಮನವಿ ಮಾಡಬಹುದಾಗಿದ್ದು, ಸಾರ್ವಭೌಮ ಅಥವಾ ರಾಜನದೇ ಅಂತಿಮ ತೀರ್ಮಾನವಾಗುತ್ತಿತ್ತು. ವೇಗದ ತೀರ್ಮಾನ, ಮಿತವ್ಯಯ, ಅನುಕೂಲ, ಪ್ರಕ್ರಿಯೆಯಲ್ಲಿನ ಸರಳತೆ, ರಹಸ್ಯವನ್ನು ಕಾಪಾಡುವುದು ಮತ್ತು ವ್ಯಾಜ್ಯಕಾರರುಗಳ ನಡುವೆ ಸುಮಧುರ ಬಾಂಧವ್ಯಕ್ಕೆ ಉತ್ತೇಜನ ಕೊಡುವುದೇ ಮಧ್ಯಸ್ತಿಕೆಯ ಗುರಿಗಳಾಗಿವೆ. ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ವಾಣಿಜ್ಯ ವ್ಯವಹಾರಗಳಲ್ಲಿ ಮಧ್ಯಸ್ತಿಕೆಯನ್ನು ಹೆಚ್ಚು ಹೆಚ್ಚಾಗಿ ಬಳಸಲಾಗುತ್ತಿದ್ದು ಮಧ್ಯಸ್ತಿಕೆಗಾರನು ಸಂಬಂಧಪಟ್ಟ ಪಕ್ಷಗಾರರ ನಡುವೆ ಖಾಸಗಿ ನ್ಯಾಯಾಧೀಶರುಗಳಂತೆಯೇ ಇದ್ದಾರೆ.

ಶತಮಾನಗಳಿಂದ ವಾಣಿಜ್ಯದಲ್ಲಿ ತೊಡಗಿದ ಜನಗಳು, ತಮ್ಮಲ್ಲಿನ ವ್ಯಾಜ್ಯಗಳನ್ನು ಪರಿಹರಿಸಿಕೊಳ್ಳುವುದಕ್ಕೆ ನ್ಯಾಯಾಲಯಗಳಿಗೆ ಬದಲಾಗಿ ಮಧ್ಯಸ್ತಿಕೆಗೆ ಹೆಚ್ಚು ಒಲವು ತೋರಿದ್ದಾರೆ. ಅನೇಕ ಸಂದರ್ಭಗಳಲ್ಲಿ, ಮಧ್ಯಸ್ತಿಕೆಗಾರರು, ಕಾನೂನು ತರಬೇತಿಯಿಲ್ಲದ ಸಾಮಾನ್ಯ ವ್ಯಕ್ತಿಗಳಾಗಿದ್ದರೂ, ನಿಷ್ಪಕ್ಷಪಾತಿಗಳೂ ಪ್ರಸ್ತುತ ವ್ಯಾಪಾರ ಪದ್ಧತಿಗಳಲ್ಲೂ, ಸೂಕ್ಷ್ಮತೆಗಳಲ್ಲೂ ತಿಳುವಳಿಕೆ ಹೊಂದಿದವರೆಂದು ಸಾಮಾನ್ಯವಾಗಿ ಗುರುತಿಸಲ್ಪಟ್ಟಿದ್ದಾರೆ.

ಮಧ್ಯಸ್ತಿಕೆಯನ್ನು ಸರಿಸುಮಾರಾದ, ಹತ್ತಿರಹತ್ತಿರದ ನ್ಯಾಯವಾದರೂ ಅಂತಿಮವಾದ ನ್ಯಾಯ ಎಂಬುದಾಗಿ ವಿವರಿಸಲಾಗಿದೆ. ಇದಕ್ಕೆ ಹೋಲಿಸಿದರೆ ನ್ಯಾಯಾಲಯಗಳ ಮೂಲಕ ವಿತರಿಸಲ್ಪಡುವ ನ್ಯಾಯ ಅನೇಕ ಸುತ್ತಿನ ಮೇಲ್ಮನವಿಗಳಿಗೆ ಒಳಪಟ್ಟಿದೆ. ಸಂಗತಿಗಳ ಬಗ್ಗೆ ಭಿನ್ನಾಭಿಪ್ರಾಯವಿದ್ದ ಪ್ರಕರಣಗಳಲ್ಲಿ ಇದು ಬಹಳ ಅನುಕೂಲಕರವಾಗಿದೆ. ಉದಾಹರಣೆಗೆ: ಸರಬರಾಜು ಮಾಡಿದ ಸರಕುಗಳ ನಿಗದಿತ ಗುಣಮಟ್ಟಕ್ಕೆ ಬರುತ್ತವೆಯೋ, ನಷ್ಟದ ನಿರ್ಧಾರ, ಅಥವಾ ಪರಿಹಾರವು ಸಕಾರಣವಾಗಿವೆಯೋ ಎಂಬುದನ್ನು ಗಮನಿಸಬಹುದು. ಆದರೆ ಜಟಿಲವಾದ ಪ್ರಕರಣಗಳಲ್ಲಿ, ಕಾನೂನಿನ ಸೂಕ್ಷ್ಮ ಪ್ರಶ್ನೆಗಳು ಉದ್ಭವಿಸಿದಾಗ

ಕಾನೂನಿನ ನಡವಳಿಕೆಗಳೇ ಉತ್ತಮ ಮಾರ್ಗವಾಗುತ್ತದೆ. ನ್ಯಾಯಾಲಯಗಳಂತೆ ಮಧ್ಯಸ್ತಿಕೆಯೂ ಸಹ ದ್ವಿಮುಖವಾಗಿ ಕೆಲಸಮಾಡಬಲ್ಲದು. ಉದಾಹರಣೆಗೆ ಕೆಲವು ವೇಳೆ ಅದು ಮೊಕದ್ದಮೆಗಳಿಗಿಂತ ಹೆಚ್ಚು ದುಬಾರಿಯಾಗಬಹುದು. ಇದಕ್ಕೆ ಕಾರಣ, ಈ ಸಾಧನದಲ್ಲಿರುವ ಅಂತರ್ನಿಹಿತ ದೋಷಗಳಲ್ಲ. ಆದರೆ ಇದನ್ನು ಚಾಲನೆಮಾಡುವವರು ಮಾನವಸಹಜ ಗುಣಗಳನ್ನು ಹೊಂದಿದವರಾಗಿರುತ್ತಾರೆ; ಅಲ್ಲದೆ ಬಲಪ್ರಯೋಗ ಮಾಡುವುದಕ್ಕಾಗುವುದಿಲ್ಲ. ಕೆಲವು ಸಂದರ್ಭಗಳಲ್ಲಿ ಪ್ರಾಮಾಣಿಕ ವ್ಯಕ್ತಿಗಳು, ನ್ಯಾಯಾಲಯದ ದಾವೆಗಳಿಗಿಂತ ಮಧ್ಯಸ್ತಿಕೆಗೇ ಹೆಚ್ಚು ಹೆದರುತ್ತಾರೆ.

ಭಾರತದಲ್ಲಿ, ಮಧ್ಯಸ್ತಿಕೆಗಾರರ ನೇಮಕದ ವಿಧಾನ ಮತ್ತು ಮಧ್ಯಸ್ತಿಕೆಯ ನಡವಳಿಕೆಗಳು 1940ರ ಮಧ್ಯಸ್ತಿಕೆ ಅಧಿನಿಯಮ* ಎಂಬ ಕಾನೂನಿನಲ್ಲಿ ನಿಗದಿಯಾಗಿವೆ. ಮಧ್ಯಸ್ತಿಕೆಯ ತೀರ್ಮಾನವನ್ನು ಐತೀರ್ಪು ಎಂದು ಕರೆಯಲಾಗಿದ್ದು ಅದು ನ್ಯಾಯಿಕ ಮೇಲ್ವಿಚಾರಣೆಗೆ ಒಳಪಟ್ಟಿದೆ. ಶೀಘ್ರವಾದ, ಸಾರಭೂತವಾದ, ಕಾನೂನಿನ ತೊಡಕುಗಳಿಂದ ಮುಕ್ತವಾದ ನ್ಯಾಯಪ್ರಧಾನ ಮಾಡಬಲ್ಲ ಒಂದು ಗೃಹವೇದಿಕೆಯನ್ನು ನಿರ್ಮಿಸುವುದಕ್ಕಾಗಿ ಈ ಕಾನೂನನ್ನು ವಿನ್ಯಾಸಗೊಳಿಸಲಾಗಿದೆ.

ಅಪರಾಧಿಕ ಸ್ವಭಾವವಲ್ಲದ, ವಿವಾದಗ್ರಸ್ತವಾದ ಹೆಚ್ಚುಕಡಿಮೆ ಎಲ್ಲ ವಿಷಯಗಳನ್ನೂ ಮಧ್ಯಸ್ತಿಕೆಗೆ ವಹಿಸಬಹುದು. ಕೆಲವು ವಿಚಾರಗಳನ್ನು ವಿನಾಯಿಸಿ, ವ್ಯಾವಹಾರಿಕ ಸ್ವಭಾವದ ಎಲ್ಲ ವಿಚಾರಗಳನ್ನು, ಅವು ವರ್ತಮಾನದ ವ್ಯಾಜ್ಯಗಳಿಗೆ ಸಂಬಂಧಿಸಿರಲಿ ಇಲ್ಲವೇ ಭವಿಷ್ಯದ ವ್ಯಾಜ್ಯಗಳಿಗೆ ಸಂಬಂಧಿಸಿರಲಿ ಪರಾಮರ್ಶೆಗೆ ವಹಿಸಬಹುದು. ಆದರೆ ಕಾನೂನುಬಾಹಿರ ವ್ಯವಹಾರಗಳಿಂದ ಉದ್ಭವಿಸಿದ ವ್ಯಾಜ್ಯಗಳು ಮಧ್ಯಸ್ತಿಕೆಯ ವಿಷಯವಾಗಲಾರವು. ಹೇಗಾದರೂ ವಿಷಯವೊಂದನ್ನು ಇತ್ಯರ್ಥಪಡಿಸಲು ಕಾನೂನಿನನ್ವಯ ನಿರ್ದಿಷ್ಟಪಡಿಸಿದ ನ್ಯಾಯಾಧಿಕರಣಗಳಿಗೆ ಮಾತ್ರ ಅಧಿಕಾರವ್ಯಾಪ್ತಿ ಇದ್ದು, ಆ ವಿಷಯವನ್ನು ಇತರ ನ್ಯಾಯಾಧಿಕರಣಗಳ ವ್ಯಾಪ್ತಿಗೆ ಒಳಪಡಿಸದಿದ್ದರೆ, ಅಂಥ ವಿಷಯವನ್ನು ಮಧ್ಯಸ್ತಿಕೆಗಾಗಿ ವಹಿಸಲಾಗುವುದಿಲ್ಲ. ದಿವಾಳಿತನಕ್ಕೆ ಸಂಬಂಧಿಸಿದ ನಡವಳಿಕೆಗಳು, ಒಬ್ಬ ವ್ಯಕ್ತಿಯನ್ನು ದಿವಾಳಿಯಾಗಿದ್ದಾನೆಂದು ಘೋಷಣೆ ಮಾಡಬೇಕೆ ಅಥವಾ ಬೇಡವೆ, ಬಾಡಿಗೆಗೆ ಸಂಬಂಧಿಸಿದ ವಿಷಯಗಳು, ಬಾಡಿಗೆ ಅಧಿನಿಯಮಕ್ಕೆ ಸಂಬಂಧಿಸಿದ ವಿಷಯಗಳು, ಇತ್ಯಾದಿಯನ್ನು ಮಧ್ಯಸ್ತಿಕೆಗೆ ವಹಿಸಲಾಗುವುದಿಲ್ಲ.

ಮಧ್ಯಸ್ತಿಕೆಗೆ ಒಪ್ಪಿಸಬೇಕೆಂದು ಮಾಡಿಕೊಂಡ ಒಪ್ಪಂದ ಲಿಖಿತರೂಪದಲ್ಲಿರಬೇಕೆಂದು ಕಾನೂನು ವಿಧಿಸಿದೆ. ಮಧ್ಯಸ್ತಿಕೆಗೆ ವಹಿಸುವುದಕ್ಕೆ ಮೌಖಿಕ ಅಥವಾ ಬಾಯಿಮಾತಿನ ಒಪ್ಪಂದ ಇರಲು ಸಾಧ್ಯವಿಲ್ಲ; ಪಕ್ಷಗಾರರಿಬ್ಬರೂ ಒಬ್ಬನನ್ನೇ ಮಧ್ಯಸ್ತಿಕೆಗಾರನನ್ನಾಗಿ ನೇಮಿಸಿಕೊಳ್ಳಬಹುದು. ಇಲ್ಲದೆ ಹೋದರೆ ಇಬ್ಬರೂ ಒಬ್ಬೊಬ್ಬ ಮಧ್ಯಸ್ತಿಕೆಗಾರನನ್ನು ನೇಮಿಸಿಕೊಳ್ಳಬಹುದು. ಒಬ್ಬನಿಗಿಂತ

---

* ಭಾಷಾಂತರಕಾರನ ಟಿಪ್ಪಣಿ: 1940ರ ಮಧ್ಯಸ್ತಿಕೆ ಅಧಿನಿಯಮವನ್ನು ರದ್ದುಮಾಡಿ, 1996ರ 'ಮಧ್ಯಸ್ತಿಕೆ ಮತ್ತು ರಾಜಿ' ಅಧಿನಿಯಮವನ್ನು 22.8.1996ರಿಂದ ಜಾರಿಗೆ ತರಲಾಗಿದೆ.

ಹೆಚ್ಚಿಗೆ ಮಧ್ಯಸ್ತಿಕೆಗಾರರಿದ್ದಲ್ಲಿ ಪಕ್ಷಗಾರರು ಒಬ್ಬ ನಿರ್ಣಯಕಾರನನ್ನು ಗೊತ್ತು ಮಾಡಬೇಕಾಗುತ್ತದೆ. ಮಧ್ಯಸ್ತಿಕೆಗಾರರಲ್ಲಿ ಅಭಿಪ್ರಾಯಭೇದ ಉಂಟಾದಲ್ಲಿ ಅದನ್ನು ಪರಿಹರಿಸಲು ನಿರ್ಣಯಕಾರನಿಗೆ ವಹಿಸಲಾಗುತ್ತದೆ. ಮಧ್ಯಸ್ತಿಕೆಗಾರರು ಪಕ್ಷಗಾರರುಗಳಿಗೆ ತಮ್ಮ ವಾದವನ್ನು ಮಂಡಿಸಲು ಸಮಂಜಸವಾದ ಅವಕಾಶವನ್ನು ಕೊಡಲೇಬೇಕು. ಪಕ್ಷಗಾರರು ಅಪೇಕ್ಷಿಪಟ್ಟಲ್ಲಿ ವಕೀಲರುಗಳು ವಾದ ಮಾಡಲು ಅವಕಾಶಕೊಡಬೇಕು. ಪ್ರತಿಪಕ್ಷದವನನ್ನು ಆಲಿಸುವ, ತಾನಾಗಿಯೇ ತೀರ್ಮಾನ ಮಾಡಿದರೆ ನ್ಯಾಯ ಸಿಗಲಾರದು ಎಂಬ ನೀತಿಗಳನ್ನೂ ಒಳಗೊಂಡಂತೆ ಸ್ವಾಭಾವಿಕ ನ್ಯಾಯದ ನೀತಿಗಳನ್ನು ಮಧ್ಯಸ್ಥಿಕೆಗಾರರು ಅನುಸರಿಸಬೇಕು.

ಪಕ್ಷಗಾರರು ಸಾಕ್ಷ್ಯವನ್ನು ಕೊಡಬಹುದು ಹಾಗೂ ದಸ್ತಾವೇಜುಗಳನ್ನು ಹಾಜರುಪಡಿಸಬಹುದು. ಮಧ್ಯಸ್ತಿಕೆಗಾರರು ತಮ್ಮ ಐತೀರ್ಪನ್ನು ನಾಲ್ಕು ತಿಂಗಳುಗಳ ಒಳಗೆ ಕೊಡಬೇಕು. ಹೇಗಾದರೂ, ಪಕ್ಷಗಾರರು ತಮ್ಮತಮ್ಮಲ್ಲಿ ಒಪ್ಪಿಗೆ ಮಾಡಿಕೊಂಡು ಈ ಅವಧಿಯನ್ನು ವಿಸ್ತರಿಸಬಹುದು. ಪಕ್ಷಗಾರರಲ್ಲಿ ಒಬ್ಬ ಇದಕ್ಕೆ ಒಪ್ಪದಿದ್ದಲ್ಲಿ, ಇಬ್ಬರೂ ಹೇಳುವುದನ್ನು ಕೇಳಿ, ಅವಧಿಯನ್ನು ವಿಸ್ತರಿಸಲು ಮಧ್ಯಸ್ತಿಕೆಗಾರನಿಗೆ ಅಧಿಕಾರವಿದೆ. ನಿರ್ಣಯಕಾರನೂ ಕೂಡ ತನ್ನ ಐತೀರ್ಪನ್ನು ನಾಲ್ಕು ತಿಂಗಳುಗಳ ಒಳಗೆ ಕೊಡಬೇಕು.

ನ್ಯಾಯಾಲಯದ ಮುಂದೆ ವಿಚಾರಣೆಯಾಗುತ್ತಿರುವ ಪ್ರಕರಣವೊಂದರಲ್ಲಿ ತಾಂತ್ರಿಕವಾದ ಪ್ರಶ್ನೆಗಳನ್ನು ಉತ್ತರಿಸಬೇಕಾಗಿದ್ದು, ಅದಕ್ಕಾಗಿ ತಜ್ಞರ ಅವಶ್ಯಕತೆಯಿದ್ದು, ಪಕ್ಷಕಾರರು ಒಪ್ಪಿದಲ್ಲಿ, ನ್ಯಾಯಾಲಯವು ಪ್ರಕರಣವನ್ನು ಮಧ್ಯಸ್ತಿಕೆಗೆ ವಹಿಸಲು ಅಧಿನಿಯಮದಲ್ಲಿ ಅವಕಾಶವಿದೆ. ಹೀಗೆ ಒಪ್ಪಿಸುವುದನ್ನು ನ್ಯಾಯಾಲಯದ ಪರಾಮರ್ಶೆಯೆನ್ನಲಾಗುತ್ತದೆ. ಇಲ್ಲಿನ ನಡವಳಿಕೆಗಳು ಖಾಸಗಿ ಒಪ್ಪಂದದ ಅನುಸಾರ ಜರುಗುವ ಮಧ್ಯಸ್ತಿಕೆಯಂತೆ ಇರುತ್ತದೆ. ವ್ಯತ್ಯಾಸವೇನೆಂದರೆ ಮಧ್ಯಸ್ತಿಕೆದಾರರು ನ್ಯಾಯಾಲಯಕ್ಕೆ ಜವಾಬ್ದಾರರಾಗಿರುತ್ತಾರೆ. ಅವರ ಐತೀರ್ಪನ್ನು ನ್ಯಾಯಾಲಯದ ಮುಂದಿರುವ ಪ್ರಕರಣದಲ್ಲಿ ದಾಖಲು ಮಾಡಲಾಗುತ್ತದೆ. ಹಾಗೆ ದಾಖಲಾಗುವವರೆಗೂ ಪ್ರಕರಣ ಇತ್ಯರ್ಥವಾಗದೇ ಉಳಿದಿರುತ್ತದೆ.

ಅತಿ ವಿವಿರವಾದ ಪ್ರಕ್ರಿಯೆಯ ಕಾನೂನನ್ನು ಬದಿಗಿಟ್ಟು, ವಿಳಂಬವಾಗುವುದನ್ನೂ ಮತ್ತು ವಿವರವಾದ ದಸ್ತಾವೇಜುಗಳ ರುಜುವಾತಿನ ಮೇಲೆ ಅವಲಂಬಿಸುವುದನ್ನೂ ತಪ್ಪಿಸಲು, ಹಾಗೂ ಖರ್ಚನ್ನು ಉಳಿಸಲು ಸಂಕ್ಷಿಪ್ತ ಪ್ರಕ್ರಿಯೆಯನ್ನು ಅಳವಡಿಸಿಕೊಳ್ಳುವುದಕ್ಕೆ, ಮಧ್ಯಸ್ತಿಕೆಗಾರರಿಗೆ ಪಕ್ಷಗಾರರು ಅವಕಾಶ ಮಾಡಿಕೊಡಬಹುದು. ಐತೀರ್ಪೆಂದು ಕರೆಯಲಾಗುವ ಅಂತಿಮ ತೀರ್ಮಾನವನ್ನು ಮಧ್ಯಸ್ತಿಕೆಗಾರರು ಕೊಡುತ್ತಾರೆ. ಅದು ಲಿಖಿತವಾಗಿದ್ದು, ನಿಗದಿತ ಮೌಲ್ಯದ ಸ್ಟಾಂಪ್ ಕಾಗದದ ಮೇಲೆ ಬರೆದು ನ್ಯಾಯಾಲಯದಲ್ಲಿ ದಾಖಲು ಮಾಡಲಾಗುತ್ತದೆ. ಪಕ್ಷಗಾರರು ಅದನ್ನು ಒಪ್ಪಿಕೊಂಡರೆ, ಅದೇ ನ್ಯಾಯಾಲಯದ ಆಜ್ಞೆಯಾಗಿ, ವ್ಯಾಜ್ಯವು ಕೊನೆಮುಟ್ಟುತ್ತದೆ.

ಐತೀರ್ಪಿಗೆ ಕಾರಣಗಳನ್ನೇನನ್ನೂ ನಮೂದಿಸಬೇಕಾಗಿಲ್ಲವೆನ್ನುವುದು ಈಗ ಅಂತಿಮವಾಗಿ ನಿಶ್ಚಯಿಸಲಾದ ವಿಷಯ. ಪಕ್ಷಗಾರರು ಪರಸ್ಪರ ಒಪ್ಪಿದರೆ

ಕಾರಣಗಳನ್ನು ಕೊಡಬಹುದು. ಒಮ್ಮೊಮ್ಮೆ ಐತೀರ್ಪುಗಳಲ್ಲಿ ಕಾರಣಗಳನ್ನು ಕೊಡುವುದಿಲ್ಲ. ಹೀಗಾಗಿ, ನ್ಯಾಯಾಲಯಗಳು ಅವುಗಳಲ್ಲಿ ತಪ್ಪುಗಳನ್ನು ಹುಡುಕುವ ಸಂಭವ ಕಡಿಮೆ. ಕಾರಣಗಳನ್ನು ಕೊಡದೇ ಇದ್ದರೆ, ಮಧ್ಯಸ್ಥಿಕೆಗಾರರ ಮಾನಸಿಕ ಕಾರ್ಯಗತಿಯ ಬಗ್ಗೆ ಅಥವಾ ಅವರು ತುಲನೆಮಾಡಿದ ಕಾರಣಗಳನ್ನು ಕುರಿತಾಗಲೀ, ನ್ಯಾಯಾಲಯವು ಊಹಾಪೋಹ ಮಾಡಲು ಹೋಗುವುದಿಲ್ಲ.

ಆದರೆ, ಕೆಲವೇ ಸಂದರ್ಭಗಳಲ್ಲಿ ಐತೀರ್ಪನ್ನು ಪ್ರಶ್ನಿಸಬಹುದು. ಅವುಗಳೆಂದರೆ:

i. ಮಧ್ಯಸ್ಥಿಕೆಗಾರನಾಗಲೀ, ನಿರ್ಣಯಕಾರನಾಗಲೀ, ನಡವಳಿಕೆಗಳಲ್ಲಿ ದುರ್ನಡತೆ ಮಾಡಿದ್ದಾರೆಂದು; ಕಂಡುಬಂದರೆ,

ii. ನ್ಯಾಯಾಲಯವು ಮಧ್ಯಸ್ಥಿಕೆಯನ್ನು ತಳ್ಳಿಹಾಕುವ ಆಜ್ಞೆಯನ್ನು ಹೊರಡಿಸಿದ ಮೇಲೂ ಐತೀರ್ಪನ್ನು ಕೊಡಲಾಗಿದೆಯೆಂದೂ ಅಥವಾ ಅಧಿನಿಯಮದ 35ನೆಯ ಖಂಡದ ಕೆಳಗೆ ನಡವಳಿಕೆಗಳು ಅಸಿಂಧುವಾಗಿದೆಯೆಂದು ಕಂಡುಬಂದರೆ

iii. ಐತೀರ್ಪನ್ನು ಅಯುಕ್ತವಾಗಿ ಪಡೆದುಕೊಳ್ಳಲಾಗಿದೆಯೆಂದೂ ಅಥವಾ ಇತರ ರೀತಿಯಲ್ಲಿ ಅದು ಅಸಿಂಧುವಾಗಿದೆಯೆಂದು ಕಂಡುಬಂದರೆ

ನ್ಯಾಯಾಲಯವು ಪಕ್ಷಗಾರರ ವಾದವನ್ನು ಕೇಳಿದ ನಂತರ ಐತೀರ್ಪನ್ನು ದೃಢೀಕರಿಸಬಹುದು, ಬದಲಾವಣೆ ಮಾಡಬಹುದು ಅಥವಾ ತಳ್ಳಿಹಾಕಬಹುದು. ಎರಡೂ ಪಕ್ಷದವರು ಸರ್ವೋಚ್ಚ ನ್ಯಾಯಾಲಯದವರೆಗೂ ಮೇಲ್ಮನವಿಗಳನ್ನು ತೆಗೆದುಕೊಂಡು ಹೋಗಬಹುದು.

ಮಧ್ಯಸ್ಥಿಕೆಗಾರರ ಫೀಸನ್ನೂ ಮತ್ತು ಖರ್ಚುಗಳನ್ನೂ ಪಕ್ಷಗಾರರೇ ಪಾವತಿಮಾಡುತ್ತಾರೆ. ಆದಾಗ್ಯೂ, ಪಕ್ಷಗಾರ ಅಥವಾ ಪಕ್ಷಗಾರರುಗಳು ಪಾವತಿ ಮಾಡಬೇಕಾದ ಖರ್ಚಿನ ಬಗ್ಗೆ ನಿರ್ದೇಶನವನ್ನು ಮಧ್ಯಸ್ಥಿಕೆಗಾರರು ತಮ್ಮ ಐತೀರ್ಪಿನಲ್ಲಿ ಕೊಡಲೂಬಹುದಾಗಿದೆ.

# ಲೋಕ್ ಅದಾಲತ್ತುಗಳು

ನ್ಯಾಯಿಕ ನ್ಯಾಯಾಲಯಗಳ ಮೂಲಕ ಕಾನೂನಿನ ಪರಿಹಾರವನ್ನು ಕೋರಲು ಇರುವ ಪ್ರಕ್ರಿಯೆಗಳು ಲಂಬವಾದುದೂ ಅಗಾಧವಾದ ತೊಡಕುಗಳಿಂದ ಕೂಡಿದವೂ ಆಗಿದ್ದು, ಗಣನೀಯ ಪ್ರಮಾಣದ ಖರ್ಚನ್ನು ಬೇರೆ ಒಳಗೊಂಡಿವೆ. ಈ ಕಾರಣದಿಂದಲೇ ಜಾಗ್ರತೆಯಾಗಿಯೂ, ಸುಲಭ ಖರ್ಚಿನಲ್ಲಿಯೂ ವ್ಯಾಜ್ಯಗಳನ್ನು ತೀರ್ಮಾನಮಾಡುವುದಕ್ಕಾಗಿ, ಬೇರೆ ಬೇರೆ ರೀತಿಯ ಮತ್ತು ಹೊಸದಾದ ಮಾರ್ಗಗಳನ್ನು ಅಸ್ತಿತ್ವಕ್ಕೆ ತರಲಾಗಿದೆ. ಇಂಥ ಒಂದು ವ್ಯವಸ್ಥೆಯೇ ಲೋಕ್ ಅದಾಲತ್.

ಸುಲಭ ಖರ್ಚಿನಲ್ಲಿಯೂ, ಶೀಘ್ರವಾಗಿಯೂ, ಸ್ವಪ್ರೇರಣೆಯಿಂದ ವ್ಯಾಜ್ಯಗಳನ್ನು ತೀರ್ಮಾನ ಮಾಡಿಕೊಳ್ಳುವುದಕ್ಕೆ ಒತ್ತಾಸೆಕೊಡಲು, ಮೊದಲಿಗೆ ಭಾರತದ ಸರ್ವೋಚ್ಚ ನ್ಯಾಯಾಲಯದ ಕೆಲವು ನ್ಯಾಯಾಧೀಶರುಗಳು, ಲೋಕ ಅದಾಲತ್‌ಗಳನ್ನು ಪ್ರಾರಂಭಿಸಿ ಪ್ರೋತ್ಸಾಹಿಸಿದರು. ಅಲ್ಲಿಂದೀಚೆಗೆ, ಲೋಕ್ ಅದಾಲತ್‌ಗಳಿಗೆ ಶಾಸನಬದ್ಧವಾದ ಸ್ಥಾನಮಾನ ದೊರಕಿದೆ. ಪಾರ್ಲಿಮೆಂಟ್ ಶಾಸನ ಮಾಡಿದ 1987ರ ಕಾನೂನು ಸೇವೆಗಳ ಪ್ರಾಧಿಕಾರಿಗಳ ಅಧಿನಿಯಮವೇ ಆ ಕಾನೂನು. ಈ ಸಮಗ್ರ ಅಧಿನಿಯಮ, ಕಾನೂನು ನೆರವು, ಲೋಕ್ ಅದಾಲತ್ತುಗಳು, ಕಾನೂನು ಸಹಾಯಕ ಸೇವೆಗಳು ಇವುಗಳನ್ನು ಒಳಗೊಂಡಿವೆ. ಕಾನೂನು ವ್ಯವಸ್ಥೆಯನ್ನು ಚಾಲನೆ ಮಾಡುವ ಸಂಕಲ್ಪದಿಂದಲೇ ಈ ಜೋಡಿ ಸಂಸ್ಥೆಗಳನ್ನು ಅಸ್ತಿತ್ವಕ್ಕೆ ತರಲಾಗಿದೆ.

ಜನಸಾಮಾನ್ಯನೊಬ್ಬ ನ್ಯಾಯಕ್ಕಾಗಿ ಒಂದು ನಿಗಮದ ವಿರುದ್ಧ, ವಿಮಾ ಕಂಪನಿಯ ವಿರುದ್ಧ, ಸರ್ಕಾರಿ ಉದ್ದಿಮೆಯ ವಿರುದ್ಧ ಹೋರಾಟ ಮಾಡಲು ಅನಿವಾರ್ಯವಾದರೆ, ಆ ಹೋರಾಟ ಯಾವಾಗಲೂ ಅಸಮ ಬಲಗಳ ನಡುವಿನ ಹೋರಾಟವಾಗುತ್ತದೆ. ಅನೇಕ ಸಂದರ್ಭಗಳಲ್ಲಿ, ಏಕಾಂಗಿಯಾದ ವ್ಯಕ್ತಿಯೊಬ್ಬನಿಗೆ ಯುಕ್ತವಾದ ಕಾನೂನು ಸೇವೆಯನ್ನು ಪಡೆದುಕೊಳ್ಳುವುದಕ್ಕೆ ಶಕ್ತಿ ಇರುವುದಿಲ್ಲ. ಆದರೆ ನಿಗಮಗಳಾದರೋ ಅತ್ಯುತ್ತಮ ವಕೀಲರುಗಳನ್ನೇ ಇರಿಸಿಕೊಳ್ಳಬಲ್ಲವು. ಕೆಲವು ವೇಳೆ ನ್ಯಾಯಾಲಯದ ಇತರ ಖರ್ಚುಗಳು ಎಷ್ಟು ದುಬಾರಿಯಾಗುತ್ತವೆಂದರೆ, ಇವು ಸಾಧಾರಣ ಕಕ್ಷಿಗಾರನಿಗೆ ಹಿಂಜರಿಕೆ ಉಂಟುಮಾಡುತ್ತವೆ. ಇಷ್ಟೂ ಸಾಲದೆಂಬಂತೆ, ತೊಡಕಿನ ಪ್ರಕ್ರಿಯೆಗಳು ಇನ್ನೂ ಸಂಕೀರ್ಣವಾಗುತ್ತವೆ; ವಿಚಾರಣೆಯ ತಾರೀಖುಗಳು ಮುಂದೆ ಮುಂದೆ ಹೋಗುತ್ತಲೇ ಇದ್ದು ಖರ್ಚುಗಳು ಏರುತ್ತಾ ಹೋಗುತ್ತವೆ. ಈ ಹಿನ್ನೆಲೆಯಲ್ಲಿಯೇ ಲೋಕ್ ಅದಾಲತ್ತುಗಳನ್ನು ಸ್ಥಾಪಿಸುವ ಅಧಿನಿಯಮದ ಅನುಮೋದನೆಯಾಯಿತು. ರಾಜ್ಯದ ಅಥವಾ ಜಿಲ್ಲೆಯ ಅಧಿಕಾರಿಗಳು ಆಗಿಂದಾಗ್ಗೆ ಅನುಕೂಲಕರವಾದ ಸ್ಥಳಗಳಲ್ಲಿ ಲೋಕ್ ಅದಾಲತ್ತುಗಳನ್ನು ವ್ಯವಸ್ಥೆ ಮಾಡಲು ಅಧಿನಿಯಮದ ಮೂಲಕ ಅವಕಾಶ ಕಲ್ಪಿಸಲಾಗಿದೆ. ಈ ಅದಾಲತ್ತುಗಳು ರಾಜ್ಯದ ಅಥವಾ ಜಿಲ್ಲೆಯ

ಅಧಿಕಾರಿಗಳು ಅವುಗಳಲ್ಲಿ ನಿಹಿತಗೊಳಿಸಿದ ಅಧಿಕಾರ ವ್ಯಾಪ್ತಿಯನ್ನು ಚಲಾಯಿಸುತ್ತವೆ. ಈ ಅದಾಲತ್ತುಗಳಲ್ಲಿ ಆಯಾ ಪ್ರದೇಶದ ನ್ಯಾಯಿಕ ಅಧಿಕಾರಿಗಳು ಮತ್ತು ರಾಜ್ಯ ಸರ್ಕಾರ ನಿಗದಿಪಡಿಸಿದ ನಿರ್ದಿಷ್ಟ ಅರ್ಹತೆಯುಳ್ಳ ಇತರ ಸದಸ್ಯರುಗಳನ್ನು ಒಳಗೊಂಡಿರಬೇಕೆಂದು ಅಧಿನಿಯಮ ಹೇಳುತ್ತದೆ.

ಲೋಕ್ ಅದಾಲತ್ತುಗಳ ಅಧಿಕಾರ ವ್ಯಾಪ್ತಿ ಬಹಳ ವಿಸ್ತಾರವಾದುದು. ವ್ಯಾವಹಾರಿಕ, ಅಪರಾಧಿಕ ಅಥವಾ ರಾಜಸ್ವ ನ್ಯಾಯಾಲಯಗಳ ಅಥವಾ ನ್ಯಾಯಾಧಿಕರಣಗಳ ಅಧಿಕಾರ ವ್ಯಾಪ್ತಿಯೊಳಗೆ ಬರುವ ಯಾವುದೇ ವಿಷಯವನ್ನು ಕುರಿತಾದ ವ್ಯಾಜ್ಯದ ಪಕ್ಷಕಾರರುಗಳ ನಡುವೆ, ಇತ್ಯರ್ಥವನ್ನು ಅಥವಾ ರಾಜಿಯನ್ನು ಉಂಟುಮಾಡುವ ನಿರ್ಣಯಗಳನ್ನು ಸೂಚಿಸಬಹುದು. ವ್ಯಾಜ್ಯದ ಪಕ್ಷಗಾರರು ಪರಸ್ಪರ ಒಪ್ಪಿಗೆಯಿಂದ ನ್ಯಾಯಾಲಯಕ್ಕೆ ಅಥವಾ ನ್ಯಾಯಾಧಿಕರಣಕ್ಕೆ ಜೊತೆಯಾಗಿ ಅರ್ಜಿಯನ್ನು ಸಲ್ಲಿಸಿ, ತಾವಿಬ್ಬರೂ ರಾಜಿಮಾಡಿಕೊಳ್ಳಬೇಕೆಂದಿರುವ ಅಥವಾ ಇತ್ಯರ್ಥಮಾಡಿಕೊಳ್ಳಬೇಕೆಂದಿರುವ ಇಂಗಿತವನ್ನು ಸೂಚಿಸಿದರೆ, ಪ್ರಕರಣವು ಲೋಕ್ ಅದಾಲತ್ತಿನ ಮುಂದೆ ಹೋಗುತ್ತದೆ. ಅಂಥ ಸಂದರ್ಭದಲ್ಲಿ ನ್ಯಾಯಾಧೀಶ ಅಥವಾ ನ್ಯಾಯಾಧೀಕರಣ ಪ್ರಕರಣವನ್ನು ಮುಂದುವರಿಸುವುದನ್ನು ನಿಲ್ಲಿಸಿ, ರಾಜಿ ಅಥವಾ ಇತ್ಯರ್ಥಮಾಡಿಕೊಳ್ಳುವುದಕ್ಕಾಗಿ, ಲೋಕ್ ಅದಾಲತ್ತಿಗೆ ಪ್ರಕರಣವನ್ನು ವರ್ಗಮಾಡಬೇಕೆಂದು ಆದೇಶಿಸುತ್ತದೆ. ಲೋಕ್ ಅದಾಲತ್ತು, ತನ್ನ ಮುಂದಿರುವ ನಡವಳಿಕೆಗಳನ್ನು ಅಂತಿಮವಾಗಿ ನಿರ್ಧರಿಸಬೇಕೆಂದೂ, ಗರಿಷ್ಟ ವೇಗದಿಂದ ಪಕ್ಷಗಾರರ ನಡುವೆ ರಾಜಿ ಅಥವಾ ಇತ್ಯರ್ಥ ಫಲಿಸುವ ಹಾಗೆ ಮಾಡಬೇಕೆಂದೂ ಕಾನೂನಿನ ಸೂತ್ರಗಳನ್ನೂ ಅಲ್ಲದೆ, ನ್ಯಾಯ, ನೀತಿ, ಧರ್ಮ, ಸಮಾನ ದೃಷ್ಟಿ ಸೂತ್ರಗಳನ್ನೂ ಮಾರ್ಗದರ್ಶಿಯಾಗಿಟ್ಟುಕೊಳ್ಳಬೇಕೆಂದು ಅಧಿನಿಯಮ ಉಪಬಂಧಿಸಿದೆ. ಒಂದು ವೇಳೆ ಲೋಕ್ ಅದಾಲತ್ತಿನಲ್ಲಿ ಪಕ್ಷಗಾರರ ನಡುವೆ ರಾಜಿ ಅಥವಾ ಇತ್ಯರ್ಥ ಉಂಟಾಗದಿದ್ದರೆ, ಪ್ರಕರಣವನ್ನು ಅದು ಯಾವ ನ್ಯಾಯಾಲಯದಿಂದ ಬಂದಿತ್ತೋ ಅಲ್ಲಿಗೇ ಹಿಂದಿರುಗಿಸಲಾಗುತ್ತದೆ.

ಲೋಕ್ ಅದಾಲತ್ತಿನ ಐತೀರ್ಪನ್ನು ನ್ಯಾಯಾಲಯದ ಅಥವಾ ನ್ಯಾಯಾಧಿಕರಣದ ಡಿಕ್ರಿಯೆಂದೇ ಪರಿಗಣಿಸಲಾಗಿದ್ದು, ಅದರಂತೆಯೂ ಅದನ್ನೂ ಜಾರಿಗೊಳಿಸಬಹುದಾಗಿದೆ. ಈ ಐತೀರ್ಪು ಅಂತಿಮವಾದುದಲ್ಲದೆ, ಎಲ್ಲ ಪಕ್ಷಗಾರರುಗಳೂ ಅದಕ್ಕೆ ಬದ್ಧರಾಗಿರುತ್ತಾರೆ. ಹೀಗಾಗಿ, ಮುಂದೆ ಸಂಭವಿಸಬಹುದಾದ ಖರ್ಚು ನಷ್ಟ ಮತ್ತು ವಿಳಂಬ ನಿವಾರಣೆ ಆಗುತ್ತವೆ. ಇಂಥ ಐತೀರ್ಪಿನಿಂದ ಯಾವ ನ್ಯಾಯಾಲಯಕ್ಕೂ ಮೇಲ್ಮನವಿ ಎಂಬುದೇ ಇಲ್ಲ.

ವ್ಯಾಜ್ಯಗಳ ವಿಚಾರಣೆಮಾಡುವುದಕ್ಕಾಗಿ, ಲೋಕ್ ಅದಾಲತ್‌ಗಳಿಗೆ, ವ್ಯವಹಾರ ಪ್ರಕ್ರಿಯಾ ಸಂಹಿತೆಯ ಕೆಳಗೆ ಸಿವಿಲ್ ನ್ಯಾಯಾಲಯಗಳಿಗೆ ಕೊಡಲಾಗಿರುವ ಅಧಿಕಾರವನ್ನು ಕೊಡಲಾಗಿದೆ. ಅಲ್ಲದೆ, ಅದರ ಮುಂದಿರುವ ನಡವಳಿಕೆಗಳನ್ನು ಭಾರತ ದಂಡ ಸಂಹಿತೆಯಲ್ಲಿ ಉಕ್ತವಾಗಿರುವ ನ್ಯಾಯಾಲಯದ ನಡವಳಿಕೆಗಳಂತೆಯೇ ಪರಿಗಣಿಸಲಾಗುತ್ತದೆ.

ಸರ್ವೋಚ್ಚ ನ್ಯಾಯಾಲಯ ಮತ್ತು ಉಚ್ಚ ನ್ಯಾಯಾಲಯಗಳು ಲೋಕ್

ಅದಾಲತ್ತುಗಳನ್ನು ನಡೆಸಿವೆ. ಅಲ್ಲದೆ, ತಮ್ಮ ಮುಂದೆ ಇತ್ಯರ್ಥವಾಗದೇ ಉಳಿದಿರುವ ಪ್ರಕರಣಗಳನ್ನು ಪಕ್ಷಗಾರರ ಸಮ್ಮತಿಯಿಂದ ಅದಾಲತ್ತಿಗೆ ವರ್ಗಮಾಡಿ, ಕಾಲದಿಂದ ಕಾಲಕ್ಕೆ ಅದಾಲತ್ತುಗಳನ್ನು ನಡೆಸುತ್ತಲೂ ಇವೆ. ಲೋಕ್ ಅದಾಲತ್ತುಗಳು ಅಧಿಕ ಸಂಖ್ಯೆಯಲ್ಲಿ ಪ್ರಕರಣಗಳನ್ನು ಇತ್ಯರ್ಥಮಾಡಿವೆ. ಲೋಕ್ ಅದಾಲತ್ತುಗಳ ಐತೀರ್ಪುಗಳನ್ನು ಆಯಾ ನ್ಯಾಯಾಲಯಗಳ ಡಿಕ್ರಿಗಳನ್ನಾಗಿ ಪರಿಗಣಿಸಲಾಗಿದೆ. ವಿದ್ಯುಚ್ಛಕ್ತಿ ಮಂಡಳಿಗಳು, ದೂರವಾಣಿ ಇಲಾಖೆ ಮುಂತಾದ ವಿವಿಧ ಸರ್ಕಾರಿ ಇಲಾಖೆಗಳೂ, ಇಂಥ ಲೋಕ್ ಅದಾಲತ್ತುಗಳನ್ನು ಈಗ ನಡೆಸುತ್ತಿವೆ.

ಸರಿಯಾಗಿ ಉಪಯೋಗ ಮಾಡಿಕೊಂಡರೆ ಲೋಕ್ ಅದಾಲತ್ತುಗಳು ಬಹು ಉಪಯೋಗಕರವಾದ ಸಂಸ್ಥೆಗಳಾಗಲು ಸಾಧ್ಯ. ಆದಾಗ್ಯೂ, ಅವುಗಳ ನ್ಯಾಯಾಲಯಗಳಿಗೆ ಬದಲಿ ವ್ಯವಸ್ಥೆಗಳಾಗಲಾರವು. ಆದಾಗ್ಯೂ, ಅವನ್ನು ಪರ್ಯಾಲೋಚನೆ ಮಾಡಿ ರಚಿಸಿ, ನಡೆಸಿದರೆ, ಈಗ ಇರುವ ನ್ಯಾಯಿಕ ವ್ಯವಸ್ಥೆಗೆ ಒಂದು ಸ್ವಾಗತಕಾರೀ ಸೇರ್ಪಡೆಯಾಗುತ್ತದೆ. ಈ ಅದಾಲತ್ತುಗಳನ್ನೂ ಸಹ, ಪಕ್ಷಗಾರರು/ವಕೀಲರುಗಳು/ಅಧಿಕಾರಿಗಳು/ರಾಜಕಾರಣಿಗಳು ದುರುಪಯೋಗ ಮಾಡಿಕೊಳ್ಳಬಹುದಾದ ಸಾಧ್ಯತೆ ಇದೆ.

# ಪಂಚಾಯತಿಗಳು

ಗ್ರಾಮ ಪಂಚಾಯಿತಿ ಎಂಬ ನ್ಯಾಯ ಪದ್ಧತಿಗೆ ಭಾರತದಲ್ಲಿ ದೀರ್ಘವಾದ ಚರಿತ್ರೆಯೇ ಇದೆ. ವೇದಗಳ ಕಾಲದ ಭಾರತದಲ್ಲಿ ಸ್ವಯಂವಮಾಡಳಿತಹೊಂದಿ ಗ್ರಾಮ ಸಮುದಾಯವು ಸಮಾಜದ ಸಾಮಾಜಿಕ ಎಳೆಯ ಒಂದು ವಿಶೇಷ ಸ್ವರೂಪವಾಗಿತ್ತು. ಪಂಚಾಯಿತಿಗಳ ಕಾರ್ಯಾಚರಣೆಯಲ್ಲಿ ರಾಜರುಗಳು ಮಧ್ಯ ಪ್ರವೇಶಿಸುತ್ತಿದ್ದುದು ಬಹಳ ಕನಿಷ್ಠವಾಗಿತ್ತು. ಪಂಚಾಯಿತಿಯು ಚುನಾಯಿತ ಸದಸ್ಯರುಗಳನ್ನು ಒಳಗೊಂಡಿದ್ದು, ಆ ಸದಸ್ಯರುಗಳು ತಮ್ಮೊಳಗೆ ಮುಖ್ಯಸ್ಥನನ್ನು ಚುನಾಯಿಸಿ ನೇಮಕ ಮಾಡುತ್ತಿದ್ದರು. ನಡೆದು ಬಂದ ಪದ್ಧತಿಯಂತೆ ಇಂಥ ಚುನಾವಣೆಗಳಲ್ಲಿ ಸ್ತ್ರೀಯರು ಸಹ ಸದಸ್ಯರಾಗಿ ಚುನಾಯಿತರಾಗಬಹುದಾಗಿತ್ತು.

ಪಂಚಾಯಿತಿಗಳು ಚಲಾಯಿಸುತ್ತಿದ್ದ ಅಧಿಕಾರಗಳು, ಕಾರ್ಯ ನಿರ್ವಾಹಕವೂ ನ್ಯಾಯಿಕವೂ ಎರಡೂ ಆಗಿದ್ದವು. ಅವುಗಳೆಂದರೆ:

i. ಗ್ರಾಮಸ್ಥರಿಗೆ ಭೂಮಿಯ ಹಂಚಿಕೆ.

ii. ಭೂಮಿಯ ಉತ್ಪನ್ನಗಳ ಮೇಲೆ ತೆರಿಗೆಗಳ ವಸೂಲಿ.

iii. ಅಪರಾಧಗಳ ವಿಚಾರಣೆ ಮಾಡುವುದು ಮತ್ತು ಅಪರಾಧಿಗಳನ್ನು ಶಿಕ್ಷಿಸುವುದು.

ಯಾವುದಾದರೂ ಗ್ರಾಮಕ್ಕೆ ಸಂಬಂಧವಾಗಿರುವ ವಿಷಯಗಳು ಪ್ರಸ್ತುತವಾಗಿರುವಲ್ಲಿ, ರಾಜರುಗಳು ಸಾಧ್ಯವಾದಷ್ಟುಮಟ್ಟಿಗೆ ಗ್ರಾಮ ಪಂಚಾಯಿತಿ ಅಭಿಪ್ರಾಯವನ್ನು ಪಡೆಯಲೇಬೇಕಾಗಿತ್ತು.

ಪಂಚಾಯಿತಿಗಳ ಕರ್ತವ್ಯಗಳನ್ನೂ ಮತ್ತು ಅಧಿಕಾರಗಳನ್ನು ಸ್ಮೃತಿಗಳಲ್ಲಿಯೂ ಮತ್ತು ಚಾಣಕ್ಯನ ಅರ್ಥಶಾಸ್ತ್ರ ಹಾಗೂ ಶುಕ್ರಾಚಾರ್ಯನ ನೀತಿಶಾಸ್ತ್ರಗಳಂಥ ಪ್ರಕರಣ ಗ್ರಂಥಗಳಲ್ಲಿ ನಿಗದಿಪಡಿಸಲಾಗಿದೆ. ಪಂಚಾಯಿತಿ ಸಂಸ್ಥೆಗಳು ತುರ್ಕಿ ಮತ್ತು ಆಫ್ಘನರ ದಂಡಯಾತ್ರೆಯ ಕಾಲದವರೆಗೂ ಸ್ವಯಮಾಡಳಿತವನ್ನು ಹೊಂದಿದ್ದವು. ಭಾರತದಲ್ಲಿ ಬ್ರಿಟಿಷರ ಆಳ್ವಿಕೆ ಸ್ಥಾಪನೆಯಾಗುವಷ್ಟರಲ್ಲಿ, ಪಂಚಾಯಿತಿಗಳು ತಮ್ಮ ಪ್ರಾಮುಖ್ಯತೆಯನ್ನೂ ವ್ಯಕ್ತಿತ್ವವನ್ನೂ ಹೆಚ್ಚುಕಡಿಮೆ ಕಳೆದುಕೊಂಡಿದ್ದವು. ಸ್ಥಳೀಯ ಸ್ವಾಯತ್ತ ಸರ್ಕಾರವನ್ನು ಸ್ಥಾಪನೆಮಾಡಲು 1869ರಲ್ಲಿ ಬ್ರಿಟಿಷರು ಮೊಟ್ಟ ಮೊದಲಿಗೆ ಪ್ರಯತ್ನ ಮಾಡಿದರು. ಆಗಲೇ, ಬೊಂಬಯಿ, ಸರ್ಕಾರವು ಜಿಲ್ಲಾ ಸ್ಥಳೀಯ ನಿಧಿ ಸಮಿತಿಯನ್ನು ಸ್ಥಾಪಿಸಿತು. ಈ ಸಮಿತಿಯ ನಾಮಕರಣಮಾಡಿದ ನಿಕಾಯವಾಗಿತ್ತು.

ಕ್ರಿ.ಶ. 1882ರಲ್ಲಿ, ಲಾರ್ಡ್ ರಿಪ್ಪನ್ನನು, ಜಿಲ್ಲಾ ಸ್ಥಳೀಯ ಮಂಡಲಿಗಳನ್ನು ರಚಿಸುವುದರ ಮೂಲಕ ಭಾರತದಲ್ಲಿ ಸ್ಥಳೀಯ ಸ್ವಾಯುತ್ತ ಸರ್ಕಾರವನ್ನು ಸ್ಥಾಪನೆ ಮಾಡಿದನು. ಮರಾಠವಾಡ ಮತ್ತು ವಿದರ್ಭದಲ್ಲಿ ಜಿಲ್ಲಾ ಮಂಡಲಿಗಳು ಮತ್ತು ಜಿಲ್ಲಾ ಮಂತ್ರಾಲೋಚನ ಸಭೆಗಳನ್ನು ಸ್ಥಾಪಿಸಲಾಯಿತು. ಕ್ರಿ.ಶ. 1889ರಲ್ಲಿ ಸ್ಥಳೀಯ ಸ್ವಾಯುತ್ತ ಸರ್ಕಾರ ಅಧಿನಿಯಮವನ್ನು ಅನುಮೋದಿಸಲಾಯಿತು. ಈ ಅಧಿನಿಯಮದ ಕೆಳಗೆ ಗ್ರಾಮೀಣ ಸ್ಥಳೀಯ ಆಡಳಿತವನ್ನು ಕಾರ್ಯಕ್ಷೇತ್ರಗಳ ಒಂದು

ಗುಂಪು ನೋಡಿಕೊಳ್ಳುತ್ತಿತ್ತು. ಇಂಥ ಕಾರ್ಯಕ್ಷೇತ್ರದಲ್ಲಿ ನಿರ್ದಿಷ್ಟ ಸಂಖ್ಯೆಯ ಗ್ರಾಮಗಳು ಇರುತ್ತಿದ್ದವು.

ಇದರ ಮುಂದಿನ ಪ್ರಾಮುಖ್ಯವಾದ ಶಾಸನ ರಚನೆಯೆಂದರೆ 1920ರ ಬೊಂಬಾಯಿ ಗ್ರಾಮ ಪಂಚಾಯಿತಿ ಅಧಿನಿಯಮ. ಈ ಅಧಿನಿಯಮದ ಕೆಳಗೆ ಚುನಾಯಿತ ನಿಕಾಯವಾಗಿ ಪಂಚಾಯಿತಿಯ ರಚನೆಯಾಯಿತು. ವಯಸ್ಕರಾದ ಗ್ರಾಮದಪುರುಷರು ಸದಸ್ಯರನ್ನು ಚುನಾಯಿಸುತ್ತಿದ್ದರು. ಬಹುಪಾಲು ವ್ಯಾವಹಾರಿಕ ಸ್ವಭಾವದ ಕೆಲಸಗಳನ್ನು ಪಂಚಾಯಿತಿಗೆ ನಿರ್ವಹಿಸಲು ಕೊಡಲಾಗಿತ್ತು. ಕಡ್ಡಾಯವಾದ ಮನೆ ಕಂದಾಯಗಳನ್ನು ವಸೂಲು ಮಾಡಲು ಪಂಚಾಯಿತಿಗಳಿಗೆ ಅಧಿಕಾರ ಕೊಡಲ್ಪಟ್ಟಿದ್ದಿತು. 1920ರ ಬೊಂಬಾಯಿ ಗ್ರಾಮ ಪಂಚಾಯಿತಿ ಅಧಿನಿಯಮವು, ಪಂಚಾಯಿತಿಗಳು, ಸಮಾಜದ ಆರ್ಥಿಕ ನಿರ್ವಹಣೆ ಕರ್ತವ್ಯಗಳೂ ಸೇರಿದಂತೆ ವಿವಿಧ ಚಟುವಟಿಕೆಗಳನ್ನು ಕೈಗೆತ್ತಿಕೊಳ್ಳುವುದಕ್ಕೆ ಅಧಿಕಾರ ಕೊಟ್ಟಿತಲ್ಲದೆ, ತೆರಿಗೆಯನ್ನೂ ಕಂದಾಯವನ್ನೂ ವಸೂಲು ಮಾಡಿ ತಮ್ಮ ಆದಾಯವನ್ನು ಹೆಚ್ಚಿಸಿಕೊಳ್ಳಲು ಅಧಿಕಾರ ಕೊಟ್ಟಿತು.

ಕ್ರಿ.ಶ. 1882ರಲ್ಲಿ ಲಾರ್ಡ್ ರಿಪ್ಪನ್ನನು ಪಂಚಾಯಿತಿಗಳನ್ನು ಪುನಶ್ಚೇತನಗೊಳಿಸಿದರೂ, ನಿಜವಾದ ಅರ್ಥದಲ್ಲಿ, ಅವು ಜನಮನವನ್ನು ಪ್ರತಿನಿಧಿಸಿಲ್ಲ. ಹೀಗಾಗಿ ಪಂಚಾಯಿತಿಯು ಸ್ಥಳೀಯ ಸ್ವಾಯತ್ತ ಸರ್ಕಾರದ ಸರಿಸಮವೆಂದು ಹೇಳುವುದು ಕಷ್ಟವಾಗುತ್ತದೆ.

ಸ್ವಾತಂತ್ರ್ಯಾನಂತರ ವಿಕೇಂದ್ರೀಕರಣದ ಕಾರ್ಯಗತಿಯು ಮುಂದುವರೆಯಿತು. ಬಿಹಾರದಲ್ಲಿ 1948ರಲ್ಲೂ, ರಾಜಸ್ಥಾನದಲ್ಲಿ 1953ರಲ್ಲೂ ಪಂಚಾಯ್ತಿರಾಜ್ಯ ಅಧಿನಿಯಮವನ್ನು ಜಾರಿಗೆ ತರಲಾಯಿತು. 1956ರಲ್ಲಿ ರಾಜ್ಯಗಳ ಪುನರ್ವಿಂಗಡನೆ ಆದಮೇಲೆ ವಿವಿಧ ರಾಜ್ಯಗಳಲ್ಲಿ ಪಂಚಾಯಿತಿ ವ್ಯವಸ್ಥೆಯನ್ನು ಜಾರಿಗೆ ತರಲು ಕ್ರಮೇಣವಾಗಿ ಕಾನೂನುಗಳನ್ನು ಅಧಿನಿಯಮಿಸಲಾಯಿತು. ಈ ಕಾರ್ಯಗತಿಯು, ಆಂಧ್ರಪ್ರದೇಶ, ಅಸ್ಸಾಂ, ಮಧ್ಯಪ್ರದೇಶ, ಮದ್ರಾಸ್, ಮೈಸೂರು, ಒರಿಸ್ಸಾ, ಪಂಜಾಬ್, ರಾಜಾಸ್ಥಾನ್, ಉತ್ತರ ಪ್ರದೇಶ ಮತ್ತು ಬೊಂಬಾಯಿ ಈ ರಾಜ್ಯಗಳಲ್ಲಿ ಹೆಚ್ಚು ಕಡಿಮೆ ಮುಕ್ತಾಯವಾಯಿತು. ಬೊಂಬಾಯಿ ಗ್ರಾಮಪಂಚಾಯಿತಿ ಅಧಿನಿಯಮವನ್ನು 1958ರಲ್ಲಿ ಅನುಮೋದನೆ ಮಾಡಲಾಯಿತು. ಆ ಅಧಿನಿಯಮದ ಕೆಳಗೆ, ಪ್ರತಿ ಜಿಲ್ಲೆಯಲ್ಲೂ ಗ್ರಾಮ ಪಂಚಾಯಿತಿಗಳ ಮೇಲ್ವಿಚಾರಣೆ ಮತ್ತು ನಿಯಂತ್ರಣ ಮಾಡಲು, ಜಿಲ್ಲಾ ಗ್ರಾಮ ಪಂಚಾಯಿತಿ ಮಂಡಲವನ್ನು ರಚಿಸಲಾಯಿತು. ಆದರೆ ಈ ಮಂಡಲಗಳನ್ನು 1962ರಲ್ಲಿ ರದ್ದುಗೊಳಿಸಲಾಯಿತು.

ವಿವಿಧ ರಾಜ್ಯಗಳಲ್ಲಿರುವ ಈ ಅಧಿನಿಯಮಗಳ ಜೊತೆಗೆ, ಸಂವಿಧಾನದ 40ನೆಯ ಅನುಚ್ಛೇದದಲ್ಲಿ ಉಕ್ತವಾಗಿರುವ ಒಂದು ನಿರ್ದೇಶನವೂ ಇದೆ. ಆ ನಿರ್ದೇಶನದಂತೆ ರಾಜ್ಯವು ಗ್ರಾಮ ಪಂಚಾಯಿತಿಗಳನ್ನು ವ್ಯವಸ್ಥೆಗೊಳಿಸಲೂ, ಅವುಗಳು ಸ್ವಾಯತ್ತ ಸರ್ಕಾರದ ಘಟಕಗಳಂತೆ ಕರ್ತವ್ಯ ನಿರತವಾಗುವುದಕ್ಕೆ ಬೇಕಾದ ಸಾಮರ್ಥ್ಯವನ್ನೂ ಸಂಪನ್ನಗೊಳಿಸಲು ಕ್ರಮಗಳನ್ನು ತೆಗೆದುಕೊಳ್ಳಬೇಕು.

ಈ ಹೊಸ ಅಧಿನಿಯಮಗಳ ಕೆಳಗೆ ಸ್ಥಾಪಿಸಲಾದ ಗ್ರಾಮ ಪಂಚಾಯಿತಿಗಳು, ಬ್ರಿಟಿಷರ ಕಾಲದಲ್ಲಿದ್ದ ಪಂಚಾಯಿತಿಗಳಿಗಿಂತ ಸಾರಭೂತವಾಗಿ ಬೇರೆಯೇ ಆಗಿದ್ದವು.

ಈ ಹೊಸ ಅಧಿನಿಯಮಗಳ ಕೆಳಗೆ ವಯಸ್ಕ ಗ್ರಾಮ ನಿವಾಸಿಗಳನ್ನೊಳಗೊಂಡ ಗ್ರಾಮ ಸಭಾಗಳನ್ನು ರಚಿಸಿ, ಪಂಚಾಯಿತಿಗಳು ಈ ಗ್ರಾಮ ಸಭಾಗಳ ಸಭೆಗಳನ್ನು ಪ್ರತಿ ಆರ್ಥಿಕ ವರ್ಷ ಪ್ರಾರಂಭವಾದ ಎರಡು ತಿಂಗಳುಗಳ ಒಳಗೆ ಕರೆಯಬೇಕೆಂದೂ, ಮತ್ತು ಈ ಸಭೆಯ ಮುಂದೆ ಮಂಡಿಸಲು ವಾರ್ಷಿಕ ಲೆಕ್ಕದ ವಿವರಣಾ ಪತ್ರವನ್ನು ಸಿದ್ಧಪಡಿಸಬೇಕೆಂದು ಕಡ್ಡಾಯಮಾಡಲಾಗಿತ್ತು.

ಆಡಳಿತಾತ್ಮಕ ವರದಿ, ಯೋಜನೆಮಾಡಿದ ಅಭಿವೃದ್ಧಿ ಕಾರ್ಯಕ್ರಮ, ಲೆಖ್ಖ ಪರೀಕ್ಷಕರ ವರದಿ ಲೆಖ್ಖ ಪರೀಕ್ಷಕರ ಆಕ್ಷೇಪಣೆಗಳು ಮತ್ತು ಅವುಗಳಿಗೆ ಸಮಾಧಾನ, ಮತ್ತು ಇಂಥ ಇತರ ವಿಷಯಗಳನ್ನೂ ಸಹ ಈ ಸಭೆಯ ಮುಂದೆ ಇಡಬೇಕಾಗಿದ್ದಿತು. ಕೆಲವು ರಾಜ್ಯಗಳಲ್ಲಿ ಭೂ ಕಂದಾಯದ ವಸೂಲಿ ಕೆಲಸವನ್ನು ಮತ್ತು ಗ್ರಾಮದ ಇತರ ದಾಖಲೆಗಳನ್ನು ಬರೆದಿಡುವುದನ್ನೂ ಪಂಚಾಯಿತಿಗೆ ಒಪ್ಪಿಸಲಾಗಿತ್ತು. ಸಮೂಹ ನ್ಯಾಯ ಪಂಚಾಯಿತಿಗಳನ್ನು ಸ್ಥಾಪಿಸಲಾಯಿತಾದರೂ, ಆನಂತರ ಅವುಗಳನ್ನು ರದ್ದುಗೊಳಿಸಲಾಯಿತು.

ಪಂಚಾಯಿತಿಗಳು ಕಡ್ಡಾಯವಾಗಿ ನಿರ್ವಹಿಸಲೇಬೇಕಾದ ಕರ್ತವ್ಯಗಳಲ್ಲಿ ಸೇರಿದ್ದುದು ಪೌರಸೌಲಭ್ಯಗಳನ್ನು ಒದಗಿಸುವುದು; ಅಂದರೆ ನೈರ್ಮಲ್ಯ, ಬೀದಿ ದೀಪಗಳು ಮತ್ತು ಕುಡಿಯುವ ನೀರು, ಅದರ ವಿವೇಚನೆಗೆ ಒಳಪಟ್ಟು ಮಾಡಬಹುದಾಗಿದ್ದ ಕರ್ತವ್ಯಗಳೆಂದರೆ, ವ್ಯವಸಾಯ, ಸಹಕಾರ ಸಂಘ, ಪಶುಸಂಗೋಪನೆ, ಅರಣ್ಯಗಳು, ಸಮಾಜ ಕಲ್ಯಾಣ, ವಿದ್ಯಾಭ್ಯಾಸ, ವೈದ್ಯಕೀಯ, ಸಾರ್ವಜನಿಕ ಆರೋಗ್ಯ, ಕಟ್ಟಡಗಳು, ಸಂಪರ್ಕ ವ್ಯವಸ್ಥೆ, ನೀರಾವರಿ, ಗೃಹ ಕೈಗಾರಿಕೆ, ರಕ್ಷಣೆ ಮತ್ತಿತರ ಆಡಳಿತಾತ್ಮಕ ಹಾಗೂ ಅಭಿವೃದ್ಧಿಯ ಕೆಲಸಗಳು.

ಗ್ರಾಮ ಪಂಚಾಯಿತಿ ಅಧಿನಿಯಮದ ಕೆಳಗೆ ಒಂದು ಗ್ರಾಮ ನಿಧಿಯನ್ನು ರೂಪಿಸಲಾಯಿತು. ವೃತ್ತಿ, ವ್ಯಾಪಾರ ಮತ್ತು ನೌಕರಿಗಳ ಮೇಲಿನ ತೆರಿಗೆ, ಗೊಬ್ಬರ, ಗೋಡು, ಮಣ್ಣು ಇವುಗಳ ಮಾರಾಟದಿಂದ ಬಂದ ಉತ್ಪತ್ತಿ, ರಾಜ್ಯ ಸರ್ಕಾರ ಮತ್ತು ಜಿಲ್ಲಾ ಪರಿಷತ್‌ಗಳು ಕೊಟ್ಟ ಸಹಾಯ ಧನ, ರಾಜ್ಯ ಅಥವಾ ಜಿಲ್ಲಾ ಅಭಿವೃದ್ಧಿ ನಿಧಿಗಳಿಂದ ಪಡೆದುಕೊಂಡ ಸಾಲಗಳು, ಕೊಡುಗೆಗಳು, ಚಂದಾಹಣ, ಪಂಚಾಯಿತಿ ಆಸ್ತಿಯಿಂದ ಬಂದ ಆದಾಯ ಮತ್ತು ಉತ್ಪತ್ತಿ, ಉಪಕರಣಗಳು, ಬಾಡಿಗೆ, ದಂಡ, ದನಗಳ ದೊಡ್ಡಿಯಲ್ಲಿ ವಸೂಲಾದ ರುಸುಮು, ಗ್ರಾಮೀಣ ವಿಮಾ ಯೋಜನೆಯಿಂದ ಬಂದ ದಳ್ಳಾಳಿ ಹಣ, ಇವುಗಳು ಗ್ರಾಮನಿಧಿಗೆ ಜಮಾ ಆಗುತ್ತವೆ.

ಜಿಲ್ಲಾ ಪರಿಷತ್ತುಗಳು, ಪಂಚಾಯಿತಿ ಸಮಿತಿಗಳು ಮತ್ತು ಅವುಗಳ ಅಧಿಕಾರಗಳು ಇವರುಗಳ ನಿಯಂತ್ರಣ ಮತ್ತು ಮೇಲ್ವಿಚಾರಣೆಗೆ ಗ್ರಾಮ ಪಂಚಾಯಿತಿಗಳು ಒಳಪಟ್ಟಿವೆ. ರಾಜ್ಯ ಸರ್ಕಾರಗಳಿಗೂ ಸಹ ಗ್ರಾಮ ಪಂಚಾಯಿತಿಗಳ ಮೇಲೆ ಜಿಲ್ಲಾ ಕಲೆಕ್ಟರ್ ಅವರ ಮೂಲಕ ನೇರವಾದ ಹತೋಟಿಯಿದೆ.

ಆದರೆ ಸಾರ್ವಜನಿಕರಿಗೆ ತಮ್ಮ ಕುಂದುಕೊರತೆಗಳನ್ನು ನಿವೇದಿಸಿಕೊಳ್ಳುವುದಕ್ಕೂ ಮತ್ತು ಜಿಲ್ಲಾ ಪರಿಷತ್ತುಗಳಲ್ಲಿನ ಅಕ್ರಮ ವ್ಯವಹಾರಗಳನ್ನು ತಡೆಗಟ್ಟುವುದಕ್ಕೂ

ಸರಿಯಾದ ಸಾಧನಗಳಿಲ್ಲ. ಸರ್ಕಾರದಲ್ಲಿನ ಪಟ್ಟಭದ್ರ ಆಸಕ್ತಿಗಳು ವ್ಯವಸ್ಥೆಯಲ್ಲಿ ಕಚ್ಚಿಕೊಂಡಿರುವ ಭ್ರಷ್ಟಶಕ್ತಿಗಳನ್ನು ಯಾವಾಗಲೂ ರಕ್ಷಣೆ ಮಾಡುತ್ತಿರುವುದನ್ನು ಕಾಣಬಹುದಾಗಿದೆ; ಈ ಶಕ್ತಿಗಳು ಈಗ ಭದ್ರವಾಗಿ ತಳ ಊರಿವೆ. ಈ ಸಂಸ್ಥೆಗಳ ಮೇಲಿನ ಸರ್ಕಾರದ ಹತೋಟಿ ಪರಿಣಾಮಕಾರಿಯಾಗಿರುವುದು ಬಹು ವಿರಳ. ಕೆಳಸ್ತರದಲ್ಲಿರುವ ಗ್ರಾಮೀಣ ಪ್ರದೇಶದ ನಿವಾಸಿಗಳಿಗೆ ಈಗಿನ ಪಂಚಾಯತ್ ರಾಜ್ಯದ ವ್ಯವಸ್ಥೆಯ ಉಪಯೋಗಗಳು ಇನ್ನೂ ತಲುಪುವುದರಲ್ಲೇ ಇವೆ.

ಈ ಕೊರತೆಗಳನ್ನು ಗಮನದಲ್ಲಿಟ್ಟುಕೊಂಡು, ಕೇಂದ್ರ ಸರ್ಕಾರವು ಪಂಚಾಯತ್ ರಾಜ್ಯ ಮಸೂದೆಯನ್ನು ಮಂಡಿಸುವ ಸಲುವಾಗಿ 64ನೇ ಸಂವಿಧಾನ ತಿದ್ದುಪಡಿ ಮಸೂದೆಯನ್ನು ಸೂಚಿಸಿತ್ತು. ಅಷ್ಟುಹೊತ್ತಿಗೆ ಲೋಕ ಸಭೆಯೇ ವಿಸರ್ಜನೆಯಾದುದರಿಂದ ಈ ಮಸೂದೆಯನ್ನು ಅಧಿನಿಯಮಗೊಳಿಸಲಾಗಲಿಲ್ಲ. ಹೇಗಾದರೂ, ಇತ್ತೀಚೆಗೆ, 1993ರ ಸಂವಿಧಾನದ (73ನೆಯ ತಿದ್ದುಪಡಿ ಅಧಿನಿಯಮ)ದ ಮೂಲಕ, ಮಾರ್ಪಾಡು ಮಾಡಿದ ರೂಪದ ಮಸೂದೆಯನ್ನು ಅಧಿನಿಯಮಗೊಳಿಸಲಾಗಿದೆ. ಇದರಿಂದಾಗಿ ಸಂವಿಧಾನಕ್ಕೆ 243ರಿಂದ 243-ಓವರೆಗಿನ ಅನುಚ್ಛೇದಗಳನ್ನು ಒಳಗೊಂಡ IXನೇ ಭಾಗವು ಸೇರ್ಪಡೆಯಾಗಿದೆ. ಇದಕ್ಕೆ ರಾಷ್ಟ್ರಪತಿಯವರ ಸಮ್ಮತಿ ದೊರೆತಿದ್ದು ದೇಶದ ಅರ್ಧಕ್ಕಿಂತ ಹೆಚ್ಚು ರಾಜ್ಯಗಳು ಇದನ್ನು ಸ್ಥಿರೀಕರಿಸಿದ್ದಾರೆ. ಈ ಅಧಿನಿಯಮದ ಮುಖ್ಯ ಉಪಬಂಧಗಳು ಹೀಗಿವೆ:

i. ಪ್ರತಿ ಗ್ರಾಮಕ್ಕೂ ಒಂದು ಪಂಚಾಯಿತಿ ಇರುತ್ತದೆ. ಇದು ಒಂದು ಸಂವೈಧಾನಿಕ ನಿಕಾಯ. ರಾಜ್ಯ ಚುನಾವಣಾ ಆಯೋಗವು ಪಂಚಾಯಿತಿಗೆ ಚುನಾವಣೆಗಳನ್ನು ನಡೆಸುತ್ತದೆ.

ii. ದುರ್ಬಲ ವರ್ಗದವರಿಗೂ ಮತ್ತು ಸ್ತ್ರೀಯರಿಗೂ ಮೀಸಲಾತಿ ಸ್ಥಾನಗಳನ್ನು ಕಡ್ಡಾಯ ಮಾಡಲಾಗಿದೆ.

iii. ಪಂಚಾಯತಿಯ ಅವಧಿಯನ್ನು ಐದು ವರ್ಷಗಳೆಂದು ನಿಗದಿಪಡಿಸಲಾಗಿದೆ. ಯಾವುದಾದರೂ ಪಂಚಾಯತಿಯು ಈ ಅವಧಿ ಮುಗಿಯುವುದರೊಳಗೆ ವಿಸರ್ಜನೆಯಾದರೆ, ಆರು ತಿಂಗಳುಗಳ ಒಳಗೆ ಚುನಾವಣೆಗಳನ್ನು ನಡೆಸಬೇಕು.

iv. ಅಧಿನಿಯಮದ ಕೆಳಗೆ ರಾಜ್ಯ ಸರ್ಕಾರವು ಶಾಸನವೊಂದನ್ನು ಅಧಿನಿಯಮಿಸಿ, ಪಂಚಾಯತಿಗಳು ಸ್ವಾಯತ್ತ ಸರ್ಕಾರಗಳಂತೆ ಕಾರ್ಯವನ್ನು ನಿರ್ವಹಿಸಲು ಸಾಧ್ಯವಾಗುವುದಕ್ಕೆ ಬೇಕಾದ ಸಾಮರ್ಥ್ಯ ಮತ್ತು ಅಧಿಕಾರವನ್ನೂ ಅವುಗಳಲ್ಲಿ ನಿಹಿತಗೊಳಿಸುವುದಕ್ಕೆ ಆ ಶಾಸನದಲ್ಲಿ ಉಪಬಂಧಿಸಬಹುದಾಗಿದೆ. ಇದರ ಜೊತೆಗೆ, ಆರ್ಥಿಕ ಅಭಿವೃದ್ಧಿ ಮತ್ತು ಸಾಮಾಜಿಕ ನ್ಯಾಯವನ್ನು ತಂದುಕೊಡುವ ಯೋಜನೆಗಳನ್ನು ಸಿದ್ಧಪಡಿಸುವುದನ್ನು ಅವುಗಳಿಗೆ ಒಪ್ಪಿಸುವುದಕ್ಕೆ ಸಂಬಂಧಿಸಿದ ಹಾಗೆ, ಅಲ್ಲದೆ ಸಂವಿಧಾನದ 11ನೆಯ ಅನುಸೂಚಿಯಲ್ಲಿ ಪಟ್ಟಿಮಾಡಿರುವ ವಿಷಯಗಳಿಗೂ ಸಂಬಂಧಿಸಿದ ಹಾಗೆ ಅಧಿಕಾರ ಮತ್ತು ಹೊಣೆಗಾರಿಕೆಯನ್ನು ಪಂಚಾಯಿತಿಗಳಿಗೆ

ವರ್ಗಾಯಿಸುವುದಕ್ಕೆ ಉಪಬಂಧಗಳನ್ನು ಇಂಥ ಕಾನೂನು ಒಳಗೊಂಡಿರಬಹುದು.

v. ರಾಜ್ಯಗಳು ತೆರಿಗೆಗಳನ್ನು, ಸುಂಕಗಳನ್ನು, ಉಕ್ಕಡದ ಸುಂಕಗಳನ್ನು ಮತ್ತು ರುಸುಮುಗಳನ್ನು ವಿಧಿಸಲು, ವಸೂಲು ಮಾಡಲು ಮತ್ತು ವಿನಿಯೋಜನೆಮಾಡಲು ಕಾನೂನಿನನ್ವಯ ಪಂಚಾಯಿತಿಗಳಿಗೆ ಅಧಿಕಾರವನ್ನು ಕೊಡಬಹುದು.

vi. ಪಂಚಾಯತಿಗಳು ಲೆಕ್ಕವನ್ನು ಇಡುವುದಕ್ಕೂ, ಲೆಕ್ಕ ಪರೀಕ್ಷೆ ಮಾಡಿಸುವುದಕ್ಕೂ ಉಪಬಂಧಗಳನ್ನೊಳಗೊಂಡ ಕಾನೂನನ್ನು ರಾಜ್ಯದ ವಿಧಾನ ಸಭೆಯು ಅನುಮೋದಿಸಬಹುದು.

vii. ಅಧಿನಿಯಮವು ಸಂವಿಧಾನಕ್ಕೆ 11ನೆಯ ಅನುಸೂಚಿಯನ್ನು ಸೇರ್ಪಡೆಮಾಡಿದೆ. ಈ ಅನುಸೂಚಿಯಲ್ಲಿ, ಗ್ರಾಮಗಳ ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿಗಳಿಗೆ ಸಂಬಂಧಿಸಿದ ಇಪ್ಪತ್ತೊಂಬತ್ತು ವಿಷಯಗಳನ್ನು ಪಟ್ಟಿಮಾಡಲಾಗಿದೆ.

viii. ರಾಜ್ಯ ಆರ್ಥಿಕ ಆಯೋಗವೆಂಬ ಒಂದು ಹೊಸ ನಿಕಾಯವನ್ನೂ ಅಸ್ತಿತ್ವಕ್ಕೆ ತರಲಾಗಿದೆ. ಈ ಆಯೋಗವನ್ನು ರಾಜ್ಯಪಾಲರು ನೇಮಿಸುತ್ತಾರೆ. ಇದರ ಕರ್ತವ್ಯಗಳೆಂದರೆ, ಪಂಚಾಯಿತಿಗಳ ಆರ್ಥಿಕ ಪರಿಸ್ಥಿತಿಯನ್ನು ಪುನರವಲೋಕನ ಮಾಡುವುದೂ, ತೆರಿಗೆಗಳಿಂದ ಬಂದ ನಿವ್ವಳ ಉತ್ಪತ್ತಿಯನ್ನು ರಾಜ್ಯ ಸರ್ಕಾರ ಮತ್ತು ಪಂಚಾಯತಿಗಳ ನಡುವೆ ಹಂಚಿಕೆ ಮಾಡುವ ಬಗ್ಗೆ, ರಾಜ್ಯದ ಸಂಚಿತ ನಿಧಿಯಿಂದ ಪಂಚಾಯಿತಿಗಳಿಗೆ ಸಹಾಯ ದ್ರವ್ಯವನ್ನು ಕೊಡುವ ಬಗ್ಗೆ ಮತ್ತು ಪಂಚಾಯತಿಗಳ ಆರ್ಥಿಕ ಸ್ಥಿತಿಯನ್ನು ಉತ್ತಮಪಡಿಸುವುದಕ್ಕೆ ತೆಗೆದುಕೊಳ್ಳಬೇಕಾಗಿರುವ ಕ್ರಮಗಳ ಬಗ್ಗೆ ರಾಜ್ಯಪಾಲರಿಗೆ ಶಿಫಾರಸ್ ಮಾಡುವುದೂ ಆಗಿವೆ.

ix. ಈ ಅಧಿನಿಯಮದ ಉಪಬಂಧಗಳು ಯಾವುದೂ, ಸದ್ಯಕ್ಕೆ ಈ ಕೆಳಕಂಡ ಪ್ರದೇಶ/ರಾಜ್ಯಗಳಿಗೆ ಅನ್ವಯವಾಗುವುದಿಲ್ಲ:
-ಅನುಸೂಚಿತ ಪ್ರದೇಶಗಳು;
-ನಾಗಾಲ್ಯಾಂಡ್, ಮೇಘಾಲಯ, ಮಿಜೋರಾಮ್ ರಾಜ್ಯಗಳಂಥ ಬುಡಕಟ್ಟು ಜನಾಂಗದವರು ಇರುವ ಪ್ರದೇಶಗಳು
-ಮಣಿಪುರ ರಾಜ್ಯದ ಕೆಲವು ಗುಡ್ಡಗಾಡು ಪ್ರದೇಶಗಳು (ಇದಕ್ಕೆ ಒಂದು ಜಿಲ್ಲಾ ಮಂತ್ರಾಲೋಚನೆ ಸಭೆ ಅಸ್ತಿತ್ವದಲ್ಲಿ ಇದೆ)
-ಪಶ್ಚಿಮ ಬಂಗಾಳ ರಾಜ್ಯದ ಡಾರ್ಜಿಲಿಂಗ್ ಜಿಲ್ಲೆಯ ಕೆಲವು ಗುಡ್ಡಗಾಡು ಪ್ರದೇಶಗಳು (ಇದಕ್ಕೆ ಡಾರ್ಜಿಲಿಂಗ್ ಗುಡ್ಡಗಾಡು ಮಂತ್ರಾಲೋಚನೆ ಸಭೆ ಅಸ್ತಿತ್ವದಲ್ಲಿ ಇದೆ.)

ಇದರೊಂದಿಗೆ ಈ ರಾಜ್ಯಗಳು ಯಾವಾಗ ಇಷ್ಟಪಟ್ಟರೆ ಆಗ ಅವುಗಳನ್ನು ಅಧಿನಿಯಮದ ಕೆಳಗೆ ತರುವುದಕ್ಕೆ ಅವಕಾಶವನ್ನು ಕಲ್ಪಿಸಲಾಗಿದೆ.

# 4

# ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆಗಳು

ಇತ್ತೀಚಿನ ವರ್ಷಗಳಲ್ಲಿ ಒಂದು ಹೊಸ ಬಗೆಯ ಮೊಕದ್ದಮೆಗಳು ಆರಂಭವಾಗುತ್ತಿವೆ. ಇವು ಸಾಂಪ್ರದಾಯಿಕ ಮೊಕದ್ದಮೆಗಳಿಗಿಂತ ಭಿನ್ನವಾದವು. ಇಲ್ಲಿ ವಾದಿಯೂ ಇಲ್ಲ, ಪ್ರತಿವಾದಿಯೂ ಇಲ್ಲ. ಫಿರ್ಯಾದುದಾರನೂ ಇಲ್ಲ, ಆಪಾದಿತನೂ ಇಲ್ಲ. ಸುಲಭ ಖರ್ಚಿನಲ್ಲಿ ನಡೆಯುವ ಈ ಮೊಕದ್ದಮೆಗಳು ಅಧಿಕ ಪರಿಣಾಮಕಾರಿಯಾಗಿವೆ.

ಸರ್ಕಾರದ ಇಲಾಖೆಯೋ, ಸಾರ್ವಜನಿಕ ಪ್ರಾಧಿಕಾರವೋ ಕಾನೂನನ್ನು ಅತಿಕ್ರಮಿಸಿದರೆ, ಇಲ್ಲವೆ ದಬ್ಬಾಳಿಕೆ, ಅನ್ಯಾಯ, ಶೋಷಣೆ ಇಂತಹ ಕೃತ್ಯಗಳಲ್ಲಿ ತೊಡಗಿದ್ದರೆ ಅಥವಾ ಸಾಧಾರಣ ಕಾನೂನಿನನ್ವಯ, (ಸಿವಿಲ್ ಕಾನೂನಾಗಲೀ ಅಥವಾ ಅಪರಾಧಿಕ ಕಾನೂನಾಗಲೀ) ಪ್ರಶ್ನಿಸಲು ಅವಕಾಶವಿರದ ಜಲಮಾಲಿನ್ಯದ ಅಥವಾ ಪರಿಸರ ಮಾಲಿನ್ಯದ ಅಕೃತ್ಯವನ್ನು ಮಾಡಿದರೆ, ಇದರಿಂದ ನೊಂದ, ಜುಗುಪ್ಸೆಪಟ್ಟುಕೊಂಡ ಕ್ಷತಿಗೊಂಡ, ಅಥವಾ ಇದರ ದುಷ್ಪರಿಣಾಮಕ್ಕೆ ಸಿಲುಕುವ ಸಂಭವವಿರುವ ಯಾರೇ ಆಗಲೀ ಕಾನೂನಿನ ಕ್ರಮವನ್ನು ಜರುಗಿಸಬಹುದು. ಇದೇ 'ಸಾರ್ವಜನಿಕ ಹಿತಾಸಕ್ತಿ ಕಾನೂನಿನ ಕ್ರಮ' ಅಥವಾ 'ಸಾಮಾಜಿಕ ಹಿತಾಸಕ್ತಿ ಕಾನೂನಿನ ಕ್ರಮ'ವೆಂದು ಪ್ರಚಲಿತವಾಗಿದೆ.

ಗುತ್ತಿಗೆದಾರರಿಂದ ಕಾರ್ಮಿಕರ ಶೋಷಣೆಯ ವಿರುದ್ಧ, ಮಕ್ಕಳನ್ನು ಜೀತದಾಳುಗಳನ್ನಾಗಿ ದುಡಿಸಿಕೊಳ್ಳುವುದರ ವಿರುದ್ಧ, ವಿಚಾರಣಾಧೀನರನ್ನು ಕಾನೂನು ಬಾಹಿರವಾಗಿ ಸೆರೆಯಲ್ಲಿಡುವುದು, ಕಸ್ಟಡಿಗೆ ತೆಗೆದುಕೊಂಡವರನ್ನು ಚಿತ್ರಹಿಂಸೆಗೆ ಗುರಿಪಡಿಸುವುದು, ಪರಿಸರ ಮಾಲಿನ್ಯ ಮಾಡುವಂಥ ಕೃತ್ಯಗಳು, ಅದನ್ನು ತಡೆಯಲು ವ್ಯವಸ್ಥೆ ಇಲ್ಲದಿರುವುದು ಇವುಗಳೆಲ್ಲದರ ವಿರುದ್ಧ ಕಾನೂನು ಕ್ರಮವನ್ನು ಸಾರ್ವಜನಿಕರು ಜರುಗಿಸಬಹುದು.

ಅನುಚ್ಛೇದ 226ರ ಕೆಳಗೆ ಉಚ್ಚ ನ್ಯಾಯಾಲಯವೂ, ಅನುಚ್ಛೇದ 32ರ ಕೆಳಗೆ ಸರ್ವೋಚ್ಚ ನ್ಯಾಯಾಲಯವೂ ತಮತಮಗಿರುವ ಮೂಲ ಅಧಿಕಾರ ವ್ಯಾಪ್ತಿಯನ್ನು ಚಲಾಯಿಸಿ ನೊಂದ ವ್ಯಕ್ತಿಯ ಅಳಲನ್ನು ನಿವಾರಣೆ ಮಾಡಲು ರಿಟ್‌ಗಳನ್ನೂ, ಆಜ್ಞೆಗಳನ್ನೂ, ಪ್ರತಿಬಂಧಕಾಜ್ಞೆಗಳನ್ನೂ ಹೊರಡಿಸಬಹುದು. ಆದರೆ ಈ ಕ್ರಮಗಳು ಸಾರ್ವಜನಿಕ ಪ್ರಾಧಿಕಾರಗಳ/ಅಧಿಕಾರಿಗಳ ವಿರುದ್ಧ ಮಾತ್ರ. ಬಡವರ, ನಿರ್ಧನಿಕರ, ವಿಚಾರಣಾಧೀನ ಬಂಧಿಗಳ, ಸ್ತ್ರೀಯರ, ಜೀತದಾಳುಗಳ ಸಂಘಟಿತರಾಗಿಲ್ಲದ

ಕಾರ್ಮಿಕರ ಅನುಸೂಚಿತ ಜಾತಿ ಮತ್ತು ಬುಡಕಟ್ಟಿಗೆ ಸೇರಿದ ಜನಗಳ, ಕೆಳಗೆ ತುಳಿಯಲ್ಪಟ್ಟವರ ಇತ್ಯಾದಿ ಗುಂಪಿನ ಜನರ ಸಮಸ್ಯೆಗಳಿಗೆ ಅನುಭೂತಿಯಿಂದ ಸ್ಪಂದಿಸಿ ಕ್ರಿಯಾತ್ಮಕ ಪಾತ್ರವನ್ನು ನಿರ್ವಹಿಸುವಲ್ಲಿ ಸರ್ವೋಚ್ಚ ನ್ಯಾಯಾಲಯವು ಮುಂದಾಗಿದೆ.

ಇಂಥ ಅನೇಕ ಸಂದರ್ಭಗಳಲ್ಲಿ ನ್ಯಾಯಾಲಯವು ನ್ಯಾಯಾಲಯ ಶುಲ್ಕವಿಲ್ಲದೆ ಅರ್ಜಿಗಳನ್ನು ಸ್ವೀಕರಿಸಿದೆ. ರಿಟ್ ಅರ್ಜಿಗಳನ್ನು ಸಲ್ಲಿಸಲು ಇರುವ ತೊಡಕಿನ ವಿಧಿಗಳನ್ನು ಮನ್ನಾ ಮಾಡಿದೆ. ವಕೀಲರುಗಳ ನೆರವಿಲ್ಲದೇ ಅರ್ಜಿಗಳ ವಿಚಾರಣೆ ಮಾಡಿದೆ. ಯಾವನೇ ಒಬ್ಬ ವ್ಯಕ್ತಿ, ಸಾಮಾಜಿಕ ಕಾರ್ಯಕರ್ತ ಅಥವಾ ಸ್ವಯಂ ಸೇವಾ ಸಂಸ್ಥೆಯೊಂದು, ಸಾರ್ವಜನಿಕರಿಗೆ ಆಗಿರುವ ಅನ್ಯಾಯವನ್ನು ಕೇವಲ ಒಂದು ಪತ್ರದ ಮೂಲಕ ನ್ಯಾಯಾಲಯದ ಗಮನಕ್ಕೆ ತಂದರೆ, ಅದನ್ನೇ ರಿಟ್ ಅರ್ಜಿಯೆಂದು ಪರಿಗಣಿಸಿ, ಅಹವಾಲುಗಳನ್ನೂ, ದೂರುಗಳನ್ನೂ ವಿಚಾರಣೆ ಮಾಡಲು ಪ್ರಾರಂಭಿಸಿದೆ. ಇದರಿಂದಾಗಿ 'ಪ್ರಶ್ನಿಸುವ ಸ್ಥಾನ' (ಲೋಕಸ್ ಸ್ಟಾಂಡಿ) ಎನ್ನುವ ಪರಿಕಲ್ಪನೆಗೆ ಹೊಸ ವಿಶದೀಕರಣ, ಅಥವಾ ಅರ್ಥ ಸಿಕ್ಕ ಹಾಗೆ ಆಯಿತು.

ಸರ್ವೋಚ್ಚ ನ್ಯಾಯಾಲಯದ ಸಾಂಪ್ರದಾಯಿಕ ಕರ್ತವ್ಯಗಳಲ್ಲಿ ಈ ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆಗಳು ಒಂದು ಬದಲಾವಣೆಯನ್ನೇ ತಂದಿವೆ. ಸರ್ವೋಚ್ಚ ನ್ಯಾಯಾಲಯವು ಸಕಾರಾತ್ಮಕವಾದ ಕೆಲಸವನ್ನು ನಿರ್ವಹಿಸಲು ಸಾಧ್ಯವಾಗುವಂತೆ ಈ ಮೊಕದ್ದಮೆಗಳು ಮಾಡಿವೆ. ಅಂದರೆ, ಇಲ್ಲಿಯವರೆಗೆ ಸಾಂಪ್ರದಾಯಿಕವಾಗಿ ಜಾರಿಗೊಳಿಸಲು ಸಾಧ್ಯವಿಲ್ಲವೆಂದು ತಿಳಿದಿದ್ದ ಸಾಮಾಜಿಕ, ಆರ್ಥಿಕ ಹಕ್ಕುಗಳನ್ನು ಸಂರಕ್ಷಣೆ ಮಾಡಲು ಸಾಧ್ಯವಾಗಿದೆ. ಪರ್ಯಾಯವಾಗಿ ಸಂವಿಧಾನದ ಅನುಚ್ಛೇದ 32ರಲ್ಲಿ ಸರ್ವೋಚ್ಚ ನ್ಯಾಯಾಲಯಕ್ಕೆ ನಿಹಿತಗೊಳಿಸಲಾಗಿರುವ ಅಧಿಕಾರ ವ್ಯಾಪ್ತಿ ವಿಸ್ತಾರಗೊಂಡಂತಾಗಿದೆ. ಈ ಮೊಕದ್ದಮೆಗಳ ಮೂಲಕ, ಸಾರ್ವಜನಿಕರ ಹಿತಕ್ಕೆ ಸಂಬಂಧಿಸಿದ ವಿಷಯಗಳಲ್ಲಿ ನ್ಯಾಯಿಕ ಮಧ್ಯಪ್ರವೇಶವನ್ನು ಕೋರಲು ಸಾರ್ವಜನಿಕರಿಗೆ ಅನುವು ಮಾಡಿಕೊಟ್ಟಿದೆ. ಈ ವಿಸ್ತಾರಗೊಂಡ ಅಧಿಕಾರ ವ್ಯಾಪ್ತಿಯಿಂದ ಸರ್ವೋಚ್ಚ ನ್ಯಾಯಾಲಯ ಎರಡು ಬಗೆಯ ಹೊಣೆಗಾರಿಕೆಯನ್ನು ಹೊತ್ತುಕೊಂಡಿದೆ. ಸರ್ಕಾರದ ಮತ್ತು ಅದರ ಎಲ್ಲ ನಿಯೋಗಗಳ ಚಟುವಟಿಕೆಯನ್ನು ಅವಲೋಕಿಸುವ ಮತ್ತು ವಿಮರ್ಶೆಮಾಡುವ ಹೊಣೆಗಾರಿಕೆ, ನಿಸ್ಸಹಾಯಕರೂ, ಸೌಲಭ್ಯವಂಚಿತರೂ ಆದ ಸಾಮಾನ್ಯ ಜನಸ್ತೋಮಕ್ಕೆ, ರಾಜಕೀಯವಾಗಿಯಾಗಲೀ, ಆಡಳಿತಕ್ಷೇತ್ರದಲ್ಲಾಗಲೀ ಅಥವಾ ಶಾಸಕಾಂಗದ ಪರಿಧಿಯಲ್ಲಾಗಲೀ ಮಧ್ಯಪ್ರವೇಶ ಮಾಡದೆ, ಸಾಮಾಜಿಕ ಆರ್ಥಿಕ ನ್ಯಾಯವನ್ನು ದೊರಕಿಸಿಕೊಡುವ ಹೊಣೆಗಾರಿಕೆ.

ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆಗಳಿಗೂ, ಸಾಮಾಜಿಕ ಕಾರ್ಯಾಚರಣೆ ಮೊಕದ್ದಮೆಗಳಿಗೂ ಇರುವ ವ್ಯತ್ಯಾಸ ಅತ್ಯಲ್ಪ. ಸಾಮಾಜಿಕ ಮೊಕದ್ದಮೆಗಳಲ್ಲಿ ಪ್ರಶ್ನಿತವಾದ ನಡವಳಿಕೆಯಿಂದ ಪ್ರಾಥಮಿಕವಾಗಿ ಕ್ಷತಿಗೊಳಗಾದ ಒಂದು ಗೊತ್ತಾದ ವರ್ಗಕ್ಕೆ ಅಥವಾ ಗುಂಪಿಗೆ ಸೇರಿದ ಜನಗಳ ನಿರ್ದಿಷ್ಟ ಹಕ್ಕುಗಳನ್ನು ಒತ್ತಾಯಿಸಿ ಜಾರಿಗೊಳಿಸುವುದಕ್ಕಾಗಿ, ಅರ್ಜಿ-ಅಹವಾಲುಗಳನ್ನು ಸಲ್ಲಿಸಲಾಗುತ್ತದೆ. ಈ ವರ್ಗದ

ಜನರು ಸಹಿಸಬೇಕಾದ ಅನ್ಯಾಯ ಮತ್ತು ಭರಿಸಬೇಕಾದ ನಷ್ಟಗಳು ನೇರವಾದುದಾಗಿದ್ದು ಅವರುಗಳ ಬಡತನ, ಅನಕ್ಷರತೆ, ಸಾಮಾಜಿಕ ಮತ್ತು ಆರ್ಥಿಕ ದುರ್ಬಲತೆಯಿಂದಾಗಿ ನ್ಯಾಯಾಲಯದ ನೆರವು ಪಡೆಯಲು ಅಶಕ್ತರಾದ ಕಾರಣ, ಅವರ ಪರವಾಗಿ ನೆರವು, ನಿವಾರಣೆಯನ್ನು ಕೋರಲಾಗುತ್ತದೆ. ಉದಾಹರಣೆಗೆ, ವಿಚಾರಣಾಧೀನ ಕೈದಿಗಳು, ಕಲ್ಲುಗಣಿ ಕಾರ್ಮಿಕರು, ಆಶ್ರಯ ಕೇಂದ್ರಗಳ ಅಥವಾ ಆಶ್ರಯಧಾಮಗಳ ನಿವಾಸಿಗಳು, ರಸ್ತೆ ಬದಿಯಲ್ಲಿ ವಾಸಿಸುವವರು, ಇತ್ಯಾದಿ ಜನಗಳು ಈ ಗುಂಪಿನಲ್ಲಿ ಬರುತ್ತಾರೆ. ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆಗಳಲ್ಲಿ ಸಾರ್ವಜನಿಕರೆಲ್ಲರ ಒಟ್ಟುಹಕ್ಕುಗಳಿಗೆ ಧಕ್ಕೆಯುಂಟಾಗಿ ಈ ಅನ್ಯಾಯದ ಪರಿಹಾರಕ್ಕಾಗಿ ಕೋರಿಕೆಯನ್ನು ಸಲ್ಲಿಸಲಾಗುತ್ತದೆ. ಇಲ್ಲಿ ಯಾವುದೇ ಒಬ್ಬ ವ್ಯಕ್ತಿಗೆ ನೇರವಾಗಿ ನಿರ್ದಿಷ್ಟವಾದ ತೊಂದರೆ ಉಂಟಾಗಿರಬೇಕೆಂದೇನೂ ಇಲ್ಲ. ಉದಾಹರಣೆಗೆ, ಕಾರ್ಖಾನೆಯೊಂದರಿಂದ ನದಿಗೋ, ಸರೋವರಕ್ಕೋ ಬಿಡಲ್ಪಟ್ಟ ಕಲುಷಿತ ರಾಸಾಯನಿಕಗಳು ನೀರನ್ನು ಕಶ್ಮಲಗೊಳಿಸಿ ಶುದ್ಧವಾದ ನೀರು ಸಿಗುವುದರಿಂದ ಎಲ್ಲರೂ ವಂಚಿತರಾಗಿ ತೊಂದರೆಗೊಳಗಾಗಬಹುದು; ಹೀಗೆಯೇ ಕಾರ್ಖಾನೆಗಳಿಂದ ಹೊರಗೆ ಬಿಡಲ್ಪಟ್ಟ ವಿಷಾನಿಲಗಳನ್ನು ಉಸಿರಾಡುವುದರಿಂದ ಅನೇಕ ಜನಗಳಿಗೆ ಹಾನಿಯಾಗಬಹುದು. ಎಲೆಕ್ಟ್ರಾನಿಕ್ ಮಾಧ್ಯಮದ ಮೇಲೆ ಸರ್ಕಾರಿ ಏಕಸ್ವಾಮ್ಯ, ದೂರವಾಣಿ ಇಲಾಖೆಯ ಅಸಮರ್ಪಕತೆ, ಕಡ್ಡಾಯವಾಗಿ ಮಾಡಲೇಬೇಕಾದ ಕರ್ತವ್ಯಗಳನ್ನು ಮಾಡದೇ ಇರುವುದು, ಇವುಗಳೂ ಕೂಡ ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆಗಳನ್ನು ಸಲ್ಲಿಸುವುದಕ್ಕೆ ಕಾರಣವಾಗಬಹುದು.

ಸಾಮಾಜಿಕ ಕಾರ್ಯಾಚರಣೆ ಮೊಕದ್ದಮೆಗಳಲ್ಲಿ, ಅರ್ಜಿದಾರನಿಗೆ ಅರ್ಜಿಯನ್ನು ಕೈಬಿಟ್ಟು ಅದನ್ನು ಹಿಂದಕ್ಕೆ ಪಡೆಯಲು ನ್ಯಾಯಾಲಯ ಅನುಮತಿಯನ್ನು ನಿರಾಕರಿಸಿದೆ. ಕಾರಣ ಇಷ್ಟೆ; ಸಾರ್ವಜನಿಕ ಹಿತಾಸಕ್ತಿಗಾಗಿ ಎಂದು ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡಿದ ಮನುಷ್ಯನಿಗೆ ಆ ಮೊಕದ್ದಮೆಯ ಸ್ವಾಮ್ಯವನ್ನು ಕೊಟ್ಟರೆ, ಅಂದರೆ ತನ್ನ ಇಷ್ಟಬಂದ ಹಾಗೆ ಮುಂದುವರಿಸಲು/ನಿಲ್ಲಿಸಲು ಅವಕಾಶ ಕೊಟ್ಟರೆ, ಆಗ ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆಗಳು ದುರ್ಬಲಗೊಂಡು ಹೊಸದೊಂದು ಆಯಾಮಕ್ಕೆ ಎಡೆಕೊಟ್ಟಂತೆ ಆಗುತ್ತದೆ. ಅರ್ಥೈಸಿಕೊಳ್ಳಬಹುದಾದ ಸಂದರ್ಭಗಳಲ್ಲಿ, ಸಾರ್ವಜನಿಕರ ಒಳಿತಿಗೆ ಧಕ್ಕೆಯುಂಟುಮಾಡಿ ಸ್ವಾರ್ಥಸಾಧನೆಗಾಗಿ ದುರುಪಯೋಗಪಡಿಸಿಕೊಳ್ಳಬಹುದಾದ ಅಭ್ಯಾಸಕ್ಕೆ ಉತ್ತೇಜನ ನೀಡಿದಂತಾಗುತ್ತದೆ.

ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶ ಪಿ.ಎನ್. ಭಗವತಿಯವರ ಮಾತಿನಲ್ಲಿ:

> "ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆಯು ಕಾನೂನು ನೆರವು ಚಳುವಳಿಯ ಒಂದು ವ್ಯೂಹಯುಕ್ತಿಯ ಅಂಗವಾಗಿದೆ. ಇದರ ಗುರಿ, ಬಡವರು, ದುರ್ಬಲ ಜನಸಾಮಾನ್ಯರು, ಅನ್ಯಾಯಕ್ಕೊಳಗಾದ ಅಸಹಾಯಕ ಬಲಿಪಶುಗಳು ಇವರುಗಳಿಗೆ ಎಟಕುವ ಹಾಗೆ ನ್ಯಾಯವನ್ನು ತಂದುಕೊಡುವುದೇ ಆಗಿದೆ. ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆಗಳು ದುರ್ಬಲರ ಮತ್ತು ಶೋಷಿತರ ಮನೆ ಬಾಗಿಲಿಗೇ ನ್ಯಾಯವನ್ನು ತಲುಪಿಸುವುದಕ್ಕಾಗಿಯೇ ಇದೆ. ಏಕೆಂದರೆ,

ಈ ಜನಗಳಿಗೆ ನ್ಯಾಯಾಲಯಗಳನ್ನು ಸಮೀಪಿಸುವುದಕ್ಕೆ ದಾರಿಯೇ ಇಲ್ಲ. ಕಾರಣ: ಅವರಿಗೆ ಭರಿಸಲಸಾಧ್ಯವಾದ ಮೊಕದ್ದಮೆಯ ಖರ್ಚು. ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆ ಉದ್ದೇಶ ಎಂದರೆ, ಜನಸಾಮಾನ್ಯರ ಮಟ್ಟದವರೆಗೂ ನ್ಯಾಯ ಧಾರೆಯು ಹರಿಯಲಿ, ಬಡವರಿಗೂ, ಅನ್ಯಾಯಕ್ಕೊಳಗಾದವರಿಗೂ ಅದು ಎಟಕುವಂತಾಗಲೀ ಎನ್ನುವುದೇ ಆಗಿದೆ. ವ್ಯಕ್ತಿಯೊಬ್ಬನ ವಿರುದ್ಧ ಇನ್ನೊಬ್ಬ ವ್ಯಕ್ತಿಯ ಹಕ್ಕುಗಳನ್ನು ಒತ್ತಾಯಿಸಲು, ಈ ಮೊಕದ್ದಮೆಗಳನ್ನು ನ್ಯಾಯಾಲಯದ ಮುಂದೆ ತರುವುದಿಲ್ಲ. ಬದಲಿಗೆ, ಅದರ ಉದ್ದೇಶ, ಸಾರ್ವಜನಿಕರ ಹಿತಗಳನ್ನು ಎತ್ತಿಹಿಡಿಯುವುದೂ ಮತ್ತು ರಕ್ಷಣೆ ಮಾಡುವುದೇ ಆಗಿದೆ. ಬಡವರು, ತಿಳುವಳಿಕೆ ಇಲ್ಲದವರು, ಸಾಮಾಜಿಕವಾಗಿಯೂ, ಆರ್ಥಿಕವಾಗಿಯೂ, ಅನನುಕೂಲ ಸ್ಥಿತಿಯಲ್ಲಿರುವ ಅನೇಕ ಜನಗಳ ಸಂವೈಧಾನಿಕ ಅಥವಾ ಕಾನೂನಿನ ಹಕ್ಕುಗಳು, ಗಮನಕ್ಕೆ ಬಾರದೆ, ಪರಿಹಾರ ಸಿಗದೆ ಹೋಗಲೇ ಕೂಡದು ಎನ್ನುವುದನ್ನು ಈ ಸಾರ್ವಜನಿಕ ಹಿತಾಸಕ್ತಿ ಒತ್ತಾಯಿಸುತ್ತದೆ. ಅದು ಯಾರೊಬ್ಬರ ವಿರುದ್ಧದ ಮೊಕದ್ದಮೆಯಲ್ಲ. ಆದರೆ, ಅದು, ಮೂಲಭೂತ ಮಾನವ ಹಕ್ಕುಗಳನ್ನು ಅರ್ಥಪೂರ್ಣವಾಗಿ ಆಚರಣೆಗೆ ತರಲು, ಸರ್ಕಾರಕ್ಕೂ ಮತ್ತು ಅದರ ಅಧಿಕಾರಿಗಳಿಗೂ ಒಂದು ಅವಕಾಶ, ಒಂದು ಸವಾಲು; ನ್ಯಾಯಾಲಯಗಳು 'ಪ್ರಶ್ನಿಸುವ ಸ್ಥಾನ' ಎಂಬ ನಿಯಮವನ್ನು ಕಿತ್ತೊಗೆದಿವೆ. ಈ ಪರಿಕಲ್ಪನೆಯು ಪುರಾತನ ಇಂಗ್ಲೆಂಡಿನ ಆಂಗ್ಲೋ-ಸ್ಯಾಕ್ಸನ್ನರ ನ್ಯಾಯಶಾಸ್ತ್ರದಲ್ಲಿ ವಿಕಸಿತವಾಗಿತ್ತು. ಇದರ ಪ್ರಕಾರ ನಷ್ಟಕ್ಕೆ ಒಳಗಾದ ವ್ಯಕ್ತಿ ಮಾತ್ರ ದಾವೆ ಹೂಡಬಹುದಾಗಿತ್ತು. ವರ್ತಮಾನದ ಸನ್ನಿವೇಶದಲ್ಲಿ ಇದು ಪ್ರಸ್ತುತವಲ್ಲ. ಕೆಳಸ್ತರದಲ್ಲಿರುವವರಿಗೂ, ದಿಕ್ಕು ತಪ್ಪಿದವರಿಗೂ ನ್ಯಾಯವು ಸುಲಭವಾಗಿ ಎಟುಕುವಂತಿರಬೇಕು. ಕಾನೂನು, ನ್ಯಾಯ ಎನ್ನುವುದು ಬಾಗಿಲು ಮುಚ್ಚಿದ ಅಂಗಡಿಯಾಗಿ ಉಳಿಯಕೂಡದು. ಹಳೆಯ ವ್ಯವಸ್ಥೆಯ ಕೆಳಗೆ ಕೂಡ, ಅಪ್ರಾಪ್ತವಯಸ್ಕನ ಪರವಾಗಿ, ಅಥವಾ ಅಶಕ್ತತೆಗೊಳಗಾದ ವ್ಯಕ್ತಿಯ ಪರವಾಗಿ, ಅಥವಾ ಬಂಧನದಲ್ಲಿ ಅಥವಾ ದಿಗ್ಬಂಧನದಲ್ಲಿರುವ ವ್ಯಕ್ತಿಯ ಪರವಾಗಿ ಅವನ ಮಿತ್ರನು ನ್ಯಾಯಾಲಯವನ್ನು ಕೋರಿಕೊಳ್ಳಲು ಅನುಮತಿ ಇತ್ತು. ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆಗಳು 'ಪ್ರಶ್ನಿಸುವ ಸ್ಥಾನ'ದ ನಿಯಮವನ್ನು ಇನ್ನೂ ಸಡಿಲಗೊಳಿಸಿದೆ.

ಸಾರ್ವಜನಿಕ ಹಿತಾಸಕ್ತಿ ಎನ್ನುವುದು ಪಾಲ್ಗೊಳ್ಳುವ ನ್ಯಾಯ ವ್ಯವಸ್ಥೆಯ ಒಂದು ಅಂಗವಾಗಿದೆ. ನ್ಯಾಯಾಸ್ಥಾನದ ದ್ವಾರದ ಮೆಟ್ಟಲುಗಳ ಮೇಲೆ ಅವನಿಗೆ, ಅಂದರೆ, ಈ ಮೊಕದ್ದಮೆಗಳನ್ನು ತರುವವನಿಗೆ ಸರಿಯಾದ ಸ್ಥಾನಮಾನವನ್ನು ಕೊಟ್ಟು ಸ್ವಾಗತಿಸಬೇಕು."

ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆಗಳನ್ನು ಸ್ವೀಕರಿಸುವ ಸಲುವಾಗಿ ಪ್ರಕ್ರಿಯೆಯ ನಿಯಮಗಳನ್ನು ನ್ಯಾಯಾಸ್ಥಾನವು ಸಡಿಲಗೊಳಿಸಿದೆ. ಪ್ರಕರಣವೊಂದರಲ್ಲಿ

ಸರ್ವೋಚ್ಚ ನ್ಯಾಯಾಲಯವು ಹೀಗೆ ಪರಿವೀಕ್ಷಿಸಿದೆ: ಸಾರ್ವಜನಿಕರಿಗೆ ಆದ ನಷ್ಟ, ತೊಂದರೆಗೆ ಪರಿಹಾರವನ್ನು ಕೋರುವ, ಸಾರ್ವಜನಿಕ ಕರ್ತವ್ಯವನ್ನು ಮಾಡಬೇಕೆಂದು ಒತ್ತಾಯಿಸುವ, ಪ್ರಸರಿಸಿದ, ಸಾಮಾಜಿಕ, ಸಾಮೂಹಿಕ ಹಕ್ಕುಗಳಿಗೆ, ಆಸಕ್ತಿಗಳಿಗೆ ರಕ್ಷಣೆಯನ್ನು ಕೋರುವ, ಸಾರ್ವಜನಿಕ ಆಸಕ್ತಿಯನ್ನು ಸಂರಕ್ಷಿಸಬೇಕೆಂದು ಬೇಡುವ, ಸದುದ್ದೇಶ ಉಳ್ಳ, ಸಾಕಷ್ಟು ಆಸಕ್ತಿ ಇರುವ ವ್ಯಕ್ತಿಗೆ, ಸ್ಥಾನಮಾನವನ್ನು ಪ್ರದಾನ ಮಾಡಲೇಬೇಕು. ಹೀಗಲ್ಲದೆ, ಈ ಸಂಬಂಧ ಯಾವುದೇ ನಿರ್ದಿಷ್ಟವಾದ ಮಾಪನಗಳನ್ನಾಗಲೀ ಅಳತೆಗೋಲನ್ನಾಗಲೀ, ಗೊತ್ತುಪಡಿಸುವುದಕ್ಕೆ ಸಾಧ್ಯವಾಗುವುದಿಲ್ಲ. ಪ್ರಕರಣವೊಂದರಲ್ಲಿ, ವರ್ಗಮಾಡಲಾದ ನ್ಯಾಯಾಧೀಶರುಗಳಪರವಾಗಿ, ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆಗಳನ್ನು ಸಲ್ಲಿಸಿದ ವಕೀಲರುಗಳಿಗೆ 'ಪ್ರಶ್ನಿಸುವ ಸ್ಥಾನ' ಇದೆಯೇ ಎಂಬ ವಿವಾದಾಂಶವನ್ನು ಎತ್ತಿದಾಗ ವಕೀಲರುಗಳಿಗೆ 'ಪ್ರಶ್ನಿಸುವ ಸ್ಥಾನ' ಇದೆಯೆಂದೂ, ಅವರನ್ನು ಬಾಗಿಲಿನಿಂದಾಚೆಗೇ ನಿಲ್ಲಿ ಎಂದು ಹೇಳಲಾಗದೆಂದೂ ಸರ್ವಾನುಮತದಿಂದ ತೀರ್ಮಾನಿಸಲಾಯಿತು. ನ್ಯಾಯಾಧೀಶ ಪಿ.ಎನ್. ಭಗವತಿಯವರು ಮುಂದುವರೆದು ಹೀಗೆ ಹೇಳಿದ್ದಾರೆ:

> "ಒಬ್ಬ ವ್ಯಕ್ತಿಗಾಗಲೀ ಅಥವಾ ಇಂಥ ವ್ಯಕ್ತಿಗಳ ಒಂದು ನಿರ್ದಿಷ್ಟ ವರ್ಗಕ್ಕಾಗಲೀ, ಅವರ ಸಂವೈಧಾನಿಕ ಹಕ್ಕುಗಳ ಅಥವಾ ಕಾನೂನು ದತ್ತವಾದ ಹಕ್ಕುಗಳ ಉಲ್ಲಂಘನೆಯಿಂದ, ಹಾನಿಯಾಗಲೀ ಅಥವಾ ನಷ್ಟವಾಗಲೀ ಸಂಭವಿಸಿದರೆ (ಕಾನೂನಿನ ದೃಷ್ಟಿಯಲ್ಲಿ) ಅಥವಾ ಶಾಸನ ಸಮ್ಮತವಾದ ಅಧಿಕಾರವಿಲ್ಲದೆ ಅವರ ಮೇಲೆ ಯಾವುದೇ ಹೊರೆಯನ್ನು ಹೇರಿದರೆ, ಅಥವಾ ಇಂಥ ಹಾನಿಯಾಗುವ, ನಷ್ಟವಾಗುವ ಇಲ್ಲವೇ ಹೊರೆ ಹೇರುವ ಸಂಭವದ ಹೆದರಿಕೆ ಇದ್ದರೆ, ಅಂಥ ವ್ಯಕ್ತಿ ಅಥವಾ ಅಂಥಾ ವ್ಯಕ್ತಿಗಳ ಒಂದು ನಿರ್ದಿಷ್ಟ ಗುಂಪು, ತಮ್ಮ ಬಡತನದ ಕಾರಣದಿಂದಲೋ, ಅಸಹಾಯಕತೆಯಿಂದಲೋ, ಅನಾನುಕೂಲ ಸ್ಥಿತಿಯಿಂದಲೋ, ಪರಿಹಾರಕ್ಕಾಗಿ ನ್ಯಾಯಾಲಯವನ್ನು ಸಮೀಪಿಸಲು ಅಶಕ್ತರಾದರೆ, ಸಾರ್ವಜನಿಕರಲ್ಲಿಯಾರೇ ಆಗಲಿ, ಅನುಚ್ಛೇದ 226ರ ಕೆಳಗೆ ಉಚ್ಚ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿ, ಸೂಕ್ತವಾದ ನಿರ್ದೇಶನವನ್ನೋ, ಆಜ್ಞೆಯನ್ನೋ, ರಿಟ್ ಆದೇಶವನ್ನೋ ಕೋರಿ, ಅಂಥ ಜನರಿಗುಂಟಾದ ಕಾನೂನಿನ ಹಾನಿ ಅಥವಾ ನಷ್ಟಕ್ಕಾಗಿ ಪರಿಹಾರವನ್ನು ಕೇಳಬಹುದು. ಸಮುದಾಯದ ದುರ್ಬಲವರ್ಗಗಳಿಗೆ ಸೇರಿದ ಉದಾಹರಣೆಗೆ: ವಿಚಾರಣೆ ಇಲ್ಲದೆ ಜೈಲಿನಲ್ಲಿ ಕೊಳೆಯುತ್ತಿರುವ ವಿಚಾರಣಾಧೀನ ಕೈದಿಗಳು, ಆಗ್ರಾದಲ್ಲಿರುವ ರಕ್ಷಣಾ ಗೃಹದ ನಿವಾಸಿಗಳು, ಅಜ್ಮೀರ ಜಿಲ್ಲೆಯಲ್ಲಿ ರಸ್ತೆ ನಿರ್ಮಾಣಕ್ಕಾಗಿ ದುಡಿಯುತ್ತಿರುವ ಹರಿಜನ ಕೆಲಸಗಾರರು, ಇಂಥ ಜನಗಳು, ಬಡವರೂ, ನಿರ್ಗತಿಕರೂ, ಆಗಿದ್ದು ತಮ್ಮ ಬೆವರು ಮತ್ತು ಶ್ರಮದಿಂದ, ಶೋಚನೀಯವಾದ ಬಾಳನ್ನು ಅಹನ್ಯಹನಿ ಬಾಳುತ್ತಿರುವ, ಶೋಷಣೆ ಮಾಡುತ್ತಿರುವ ಸಮಾಜದ ನಿಸ್ಸಹಾಯಕ ಬಲಿಪಶುಗಳಾಗಿರುವ ಇವರಿಗೆ, ನ್ಯಾಯವು ಸುಲಭವಾಗಿ ಎಟುಕುವ ಹಾಗಿಲ್ಲದಿರುವ ಕಾರಣ, ಅಂಥವರ ಸಮಸ್ಯೆಯ ಪರಿಹಾರವನ್ನು ಕೋರಿ, ಪ್ರಜಾ ತತ್ಪರತೆಯುಳ್ಳ ವ್ಯಕ್ತಿಯೊಬ್ಬ

ಅರ್ಜಿ ಸಲ್ಲಿಸಿದರೆ, ಅಂಥ ಅರ್ಜಿ ಕ್ರಮಬದ್ಧವಾದ ಅರ್ಜಿಯಾಗಿರಬೇಕೆಂದು ನ್ಯಾಯಾಲಯ ಒತ್ತಾಯಿಸುವುದಿಲ್ಲ. ಇಂಥ ವ್ಯಕ್ತಿ ಸಾರ್ವಜನಿಕರ ಒಳಿತಿಗಾಗಿ ನ್ಯಾಯಾಲಯಕ್ಕೆ ಒಂದು ಕಾಗದವನ್ನು ಬರೆದರೆ ಸಾಕು, ನ್ಯಾಯಾಲಯ ಅದಕ್ಕೆ ಕೂಡಲೇ ಸ್ಪಂದಿಸುತ್ತದೆ."

ಆಡಳಿತ ಯಂತ್ರವು, ಶಾಸಕಾಂಗ ಮಾತ್ರ ನಿರ್ವಹಿಸಬೇಕಾದ ಕೆಲಸಗಳನ್ನು ಅತಿಕ್ರಮಿಸಿ ರಚಿಸಿದ ಕಾನೂನನ್ನು ಪ್ರಶ್ನಿಸಲು, ಪ್ರತಿಯೊಬ್ಬ ಪೌರನಿಗೂ ಹಕ್ಕಿದೆ. ಇದು ಅಧಿಕಾರದ ಕೃತಕ ಚಲಾವಣೆಯಾಗುತ್ತದೆಯಲ್ಲದೆ ಸಂವಿಧಾನಕ್ಕೆ ಮಾಡಿದ ವಂಚನೆಯೂ ಆಗುತ್ತದೆ. ಇದಕ್ಕೆ ಸಂಬಂಧಿಸಿದಂತೆ ಪ್ರಕರಣಗಳನ್ನು ಪ್ರಾರಂಭಿಸಿ, ನಡೆಸದೆ, ಆಮೇಲೆ ಹಿಂದೆ ತೆಗೆದುಕೊಳ್ಳುವುದನ್ನು ವಿರೋಧಿಸುವುದಕ್ಕೆ ಎಲ್ಲ ಪೌರನಿಗೂ 'ಪ್ರಶ್ನಿಸುವ ಸ್ಥಾನ' ಇದೆ. ಅದರಲ್ಲಿ ಅವನು ಜಯಶೀಲನಾಗದಿದ್ದರೆ, ಉಚ್ಚ ನ್ಯಾಯಾಲಯಕ್ಕೆ ಪುನರೀಕ್ಷಣೆ ಅರ್ಜಿಯನ್ನೂ, ಉಚ್ಚ ನ್ಯಾಯಾಲಯದ ಆಜ್ಞೆಯಿಂದ ಸರ್ವೋಚ್ಚ ನ್ಯಾಯಾಲಯಕ್ಕೆ ಮೇಲ್ಮನವಿಯನ್ನೂ ಸಲ್ಲಿಸಬಹುದು.

ಏಷ್ಯಾ ಕ್ರೀಡೆಗಳಿಗೆ ಸಂಬಂಧಿಸಿದ ವಿವಿಧ ನಿರ್ಮಾಣ ಯೋಜನೆಗಳಲ್ಲಿ ಕಾರ್ಯನಿರತರಾದ ಕಾರ್ಮಿಕರಿಗೆ ಸಂಬಂಧಿಸಿದ ಹಾಗೆ ಕಾರ್ಮಿಕ ಕಾನೂನುಗಳ ಉಲ್ಲಂಘನೆಯಾಗಿದೆಯೆಂದು ಆಪಾದಿಸಿ ಪ್ರಜಾಸತ್ತಾತ್ಮಕ ಹಕ್ಕುಗಳ ರಕ್ಷಣೆಗಾಗಿ ಸಂಘಟಿತವಾದ ಸಂಸ್ಥೆಯೊಂದು, ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶರಿಗೆ ಒಂದು ಪತ್ರವನ್ನು ಬರೆಯಿತು. ಆ ಪತ್ರವನ್ನೇ ರಿಟ್ ಅರ್ಜಿಯೆಂಟು ಪರಿಗಣಿಸಿ, ಆ ಸಂಸ್ಥೆಗೆ 'ಪ್ರಶ್ನಿಸುವ ಸ್ಥಾನ' ಇದೆಯೆಂದು ಅಭಿಪ್ರಾಯಪಟ್ಟು, ಎರಡೂ ಕಡೆಯ ವಾದವನ್ನು ಕೇಳಿದ ನಂತರ ಪರಿಹಾರವನ್ನು ಕೊಡಲಾಯಿತು.

ಕಾರ್ಮಿಕರಿಗೆ ಸಂಬಂಧಿಸಿದ ಇನ್ನೊಂದು ಪ್ರಕರಣದಲ್ಲಿ, ಮುಚ್ಚಬೇಕೆಂದು ನಿರ್ಧರಿಸಲಾದ ಸಾರ್ವಜನಿಕ ಉದ್ದಿಮೆಯೊಂದರ ಕಾರ್ಮಿಕರಿಗೆ, ಆ ನಿರ್ಧಾರವನ್ನು ಪ್ರಶ್ನಿಸಲು ಹಕ್ಕಿದೆಯೆ ಎಂಬುದನ್ನು ಪರಿಶೀಲಿಸುತ್ತ, ಮುಚ್ಚುವಿಕೆಯಿಂದ ಅವರ ಮೇಲೆ ಪರಿಣಾಮವಾಗುತ್ತದೆಯಾದ್ದರಿಂದ ಅವರು 'ಆಸಕ್ತಿ ಹೊಂದಿದ' ಪಕ್ಷಗಾರರಾಗುತ್ತಾರೆ. ಆದ ಕಾರಣ ಅವರಿಗೆ ಪ್ರಶ್ನಿಸುವ ಸ್ಥಾನ ಇದೆಯೆಂದೂ, ಸಾರ್ವಜನಿಕ ಕರ್ತವ್ಯಗಳ ಮತ್ತು ಹೊಣೆಗಾರಿಕೆಗಳ ಅತಿಕ್ರಮಣವಾಗಿದೆಯೆಂದು ದೂರು ಕೊಡಲು ಅವರಿಗೆ ಹಕ್ಕಿದೆಯೆಂದೂ ನ್ಯಾಯಾಲಯ ಅಭಿಪ್ರಾಯ ಪಟ್ಟಿತು.

ನ್ಯಾಯಾಲಯಗಳು, ನ್ಯಾಯೋದ್ದೇಶ ಸಾಧನೆಗಾಗಿ ಗುರಿಯತ್ತ ಮಾತ್ರ ಗಮನವಿಟ್ಟು ಸಾಗುತ್ತವೆ. ಆದಕಾರಣ ತೊಡಕಾದ ಪ್ರಕ್ರಿಯೆಗಳನ್ನು ಅವು ಒತ್ತಾಯಿಸುವುದಿಲ್ಲ. ಅನೇಕ ಸಂದರ್ಭದಲ್ಲಿ, ವಕಾಲತ್ ನಾಮವನ್ನೂ, ಪ್ರಮಾಣ ಪತ್ರವನ್ನೂ ಅವು ಕೇಳುವುದಿಲ್ಲ.

ವಿಚಾರಣಾಧೀನ ಕೈದಿಗಳ ಪರವಾದ ಪ್ರಕರಣಗಳನ್ನು ವರ್ತಮಾನ ಪತ್ರಿಕೆಗಳ ವರದಿಗಳ, ಅಥವಾ ಪತ್ರಗಳ ಆಧಾರದ ಮೇಲೆಯೇ ಅವು ವಿಚಾರಣೆಗೆ ಕೈಗೆತ್ತಿಕೊಂಡಿವೆ. ಅನೇಕ ಪುರುಷರನ್ನೂ, ಸ್ತ್ರೀಯರನ್ನೂ, ಮಕ್ಕಳುಗಳನ್ನೂ ವರ್ಷಾನುಗಟ್ಟಲೆ ಬಂಧೀಖಾನೆಯಲ್ಲಿ ಹಿಡಿದಿಟ್ಟು ಸಣ್ಣಪುಟ್ಟ ಅಪರಾಧಗಳಿಗಾಗಿ ವಿಚಾರಣೆಯನ್ನೆದುರಿಸಲು ಕಾಯುವಂತೆ ಮಾಡಿರುವುದನ್ನು ನ್ಯಾಯಾಲಯದ

ಗಮನಕ್ಕೆ ತರಲಾಯಿತು. ಈ ಅಪರಾಧಗಳು, ಎಷ್ಟು ಲಘುವಾದವು ಎಂದರೆ, ಅವು ಸಾಬೀತಾಗಿ, ಅವರಿಗೆ ಶಿಕ್ಷೆಯನ್ನು ಕೊಟ್ಟಿದ್ದರೂ, ಕೆಲವು ತಿಂಗಳುಗಳಿಗಿಂತ ಅಥವಾ ಒಂದೆರಡು ವರ್ಷಕ್ಕಿಂತ ಹೆಚ್ಚಾಗಿ ಅವರಿಗೆ ಜೈಲು ಶಿಕ್ಷೆ ವಿಧಿಸಲು ಸಾಧ್ಯವಿರಲಿಲ್ಲ. ಇಂಥವರ ವಿಚಾರಣೆಯನ್ನು ಶೀಘ್ರವಾಗಿ ಮಾಡಬೇಕೆಂದೂ, ಮತ್ತು ತಮಗೆ ಕೊಡಬಹುದಾದ ಶಿಕ್ಷೆಯ ಗರಿಷ್ಟ ಅವಧಿಗಿಂತ ಹೆಚ್ಚಿನ ಅವಧಿಯವರೆಗೆ ಜೈಲು ಶಿಕ್ಷೆಯನ್ನು ಆಗಲೇ ಅನುಭವಿಸಿದವರನ್ನು ಕೂಡಲೇ ಬಿಡುಗಡೆ ಮಾಡಬೇಕೆಂದೂ ನ್ಯಾಯಾಲಯ ಆದೇಶಿಸಿತು.

ಏಷ್ಯನ್ ಕ್ರೀಡೆಗಳ ವಿವಿಧ ನಿರ್ಮಾಣ ಯೋಜನೆಗಳಲ್ಲಿ ಕೆಲಸ ಮಾಡುತ್ತಿದ್ದ ಕಾರ್ಮಿಕರಿಗೆ ಸಂಬಂಧಿಸಿದ ಪ್ರಕರಣದಲ್ಲಿಯೂ ಸಹ, ನ್ಯಾಯಾಲಯವು ಪರಿಹಾರವನ್ನು ಕೊಟ್ಟಿದ್ದೂ ಅಲ್ಲದೆ, ತನಿಖೆಗಳನ್ನು ಮಾಡಲು ಮೂವರು 'ಓಂಬಡ್ಸ್‌ಮನ್'ಗಳನ್ನು* ನೇಮಕ ಮಾಡಿತು. ಈ ಅಧಿಕಾರಿಗಳು ನಿರ್ಮಾಣ ಕಾರ್ಯ ನಡೆಯುತ್ತಿರುವ ಸ್ಥಳಗಳಿಗೆ ನಿಯಮಿತವಾಗಿ ಭೇಟಿಕೊಟ್ಟು ಕಾರ್ಮಿಕ ಕಾನೂನುಗಳ ಉಪಬಂಧಗಳನ್ನು ಅನುಸರಿಸಲಾಗುತ್ತಿದೆಯೇ ಇಲ್ಲವೇ, ಕಾರ್ಮಿಕರಿಗೆ ಸಿಗಬೇಕಾದ ಪ್ರಯೋಜನಗಳು ಮತ್ತು ಸೌಲಭ್ಯಗಳು ಅವರಿಗೆ ಸಿಗುತ್ತಿವೆಯೇ ಎಂಬುದನ್ನು ಪರೀಕ್ಷಿಸಿ ಎಂದು ಕೋರಿಕೊಂಡುದೂ ಅಲ್ಲದೆ, ನ್ಯಾಯಾಲಯಕ್ಕೆ ಒಂದು ವರದಿಯನ್ನು ಕೊಡಬೇಕೆಂದೂ ಸೂಚಿಸಿತು.

ಹೀಗೆಯೇ, ಹಲವು ಮಂದಿ ಕಾರ್ಮಿಕರು ಅಮಾನವೀಯ ಸ್ಥಿತಿಗಳಲ್ಲಿ ಜೀತದಾಳುಗಳಾಗಿ ಜೀವಿಸುತ್ತಿದ್ದಾರೆಂದು ದೂರು ಬಂದ ಪ್ರಕರಣಗಳಲ್ಲಿ ಅವರುಗಳು ಸಾಮಾಜಿಕ ಮತ್ತು ಆರ್ಥಿಕ ಸ್ವಾತಂತ್ರ್ಯವನ್ನು ಪಡೆಯುವುದು ಸಾಧ್ಯವಾಗುವ ಹಾಗೆ, ಅವರು ಜೀವಿಸುವ ಸ್ಥಿತಿಗಳನ್ನು ಉತ್ತಮಗೊಳಿಸುವಂತೆಯೂ ಅವರಿಗೆ ಸಾಮಾಜಿಕ ನ್ಯಾಯದ ಭರವಸೆಯನ್ನು ಕೊಡುವಂತೆಯೂ ನ್ಯಾಯಾಲಯವು ನಿರ್ದೇಶನಗಳನ್ನು ಕೊಟ್ಟಿತು.

ರಸ್ತೆಬದಿಯಲ್ಲಿ ವಾಸಿಸುವವರು ಮತ್ತು ಬೀದಿ ಮಾರಾಟಗಾರರು, ಮುಂಬಯಿ ಮಹಾನಗರಪಾಲಿಕೆಯಿಂದ ಬಲವಂತವಾಗಿ ಹೊರಹಾಕಲ್ಪಡುವ ಮತ್ತು ಅವರ ಗುಡಿಸಲುಗಳನ್ನು ನೆಲಸಮ ಮಾಡುವ ಬೆದರಿಕೆಯನ್ನು ಎದುರಿಸಿದಾಗ, ಅವರ ಪರವಾಗಿ ಕೆಲವು ಪತ್ರಿಕಾಕರ್ತರು ಮತ್ತು ಮುಂಬಯಿಯ ಸಾಮಾಜಿಕ ಕ್ರಿಯಾಶೀಲ ಗುಂಪೊಂದು ದೂರನ್ನು ದಾಖಲೆ ಮಾಡಿದ ಪ್ರಕರಣವೊಂದರಲ್ಲಿ, ಅನುಚ್ಛೇದ 21ರಲ್ಲಿ ಸಂಸ್ಥಾಪಿಸಲಾದ ಜೀವಿಸುವ ಹಕ್ಕು ಜೀವನೋಪಾಯದ ಹಕ್ಕನ್ನೂ ಒಳಗೊಂಡಿದೆಯೆಂದೂ, ಮೊಟ್ಟಮೊದಲ ಬಾರಿಗೆ ನ್ಯಾಯಾಲಯವು ತೀರ್ಪುಕೊಟ್ಟಿತು.

ಗಂಗಾನದಿಯ ನೀರನ್ನು ಕಲುಷಿತಗೊಳಿಸಿರುವುದನ್ನು ನ್ಯಾಯಾಲಯದ ಗಮನಕ್ಕೆ ತಂದಾಗ, ನ್ಯಾಯಾಲಯ ಈ ರೀತಿ ಪರಿವೀಕ್ಷಿಸಿತು:

---

*ಭಾಷಾಂತರಕಾರನ ಟಿಪ್ಪಣಿ: ಓಂಬಡ್ಸಮನ್: ಸ್ವೀಡನ್ ಮತ್ತು ಡೆನ್ಮಾರ್ಕ್ ದೇಶಗಳಲ್ಲಿ ಆಡಳಿತದ ವಿರುದ್ಧ ಕೊಟ್ಟ ದೂರುಗಳನ್ನು ತನಿಖೆ ಮಾಡುವ 'ಕುಂದುಕೊರತೆಗಳ ಅಧಿಕಾರಿ'

ಸಂಪ್ರದಾಯ ನ್ಯಾಯದಲ್ಲಿ, ನಗರಪಾಲಿಕೆಯು ಸಾಕಷ್ಟು ಸಂಸ್ಕರಣಗೊಳಿಸದ ಚರಂಡಿ ನೀರನ್ನು ನದಿಗೆ ಬಿಟ್ಟುದರಿಂದ ಕಲುಷಿತವಾದ ನೀರಿನಿಂದ ಹಾನಿಗೊಳಗಾದ ನದೀ ತೀರದ ಭೂಮಿಯ ಒಡೆಯನು ಪಾಲಿಕೆಯ ವಿರುದ್ಧ ತಂದ ಮೊಕದ್ದಮೆಯಲ್ಲಿ, ಹಾಗೆ ಮಾಡದಂತೆ ನಿರ್ಬಂಧಿಸುವ ಪ್ರತಿಬಂಧಕಾಜ್ಞೆಯನ್ನು ಅದರ ವಿರುದ್ಧ ಕೊಡಬಹುದು. ಗಂಗಾನದಿಯ ನೀರನ್ನು ಕಲುಷಿತಗೊಳಿಸಿದುದರಿಂದಾದ ಉಪದ್ರವವು ಸಾರ್ವಜನಿಕ ಉಪದ್ರವವಾಗಿದ್ದು, ಅದರ ಹರವು ವಿಸ್ತಾರವಾಗಿದ್ದು, ಅದರ ದುಷ್ಪರಿಣಾಮ ಎಲ್ಲರನ್ನೂ ಏಕಪ್ರಕಾರವಾಗಿ ಕಾಡಿಸುವಂಥದಾಗಿದ್ದು, ಇಡೀ ಸಮುದಾಯವಲ್ಲದೆ, ಏಕೈಕ ವ್ಯಕ್ತಿಯೊಬ್ಬ ಇದರ ವಿರುದ್ಧ ನಡವಳಿಕೆಯನ್ನು ಪ್ರಾರಂಭಿಸಬೇಕೆಂದು ನಿರೀಕ್ಷಿಸುವುದು ಸಕಾರವಾದುದಲ್ಲ.

ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆಗಳಲ್ಲಿನ ಪಕ್ಷಗಾರರ ಸ್ಥಿತಿಗತಿಯ ಬಗ್ಗೆ ನ್ಯಾಯಾಲಯ ಹೀಗೆ ಅಭಿಪ್ರಾಯಪಟ್ಟಿತು: ರಾಜ್ಯಸರ್ಕಾರವನ್ನಾಗಲೀ ಅದರ ಅಧಿಕಾರಿಗಳನ್ನಾಗಲೀ ನಷ್ಟ ಭರ್ತಿಮಾಡುವಂತೆ ತೀರ್ಪು ಕೇಳುವ ಉದ್ದೇಶಕ್ಕಾಗಿ ಅವರ ವಿರುದ್ಧ ಹೂಡಿದ ಮೊಕದ್ದಮೆ ಇದಲ್ಲ. ಈ ಬಗೆಯ ಮೊಕದ್ದಮೆಯು ರಾಜ್ಯ ಸರ್ಕಾರ, ಅದರ ಅಧಿಕಾರಿಗಳು, ಪ್ರಕರಣದಲ್ಲಿ ಹಾಜರಾಗಿರುವ ವಕೀಲರುಗಳು ಮತ್ತು ನ್ಯಾಯ ಪೀಠ ಇವರೆಲ್ಲರ ಸಹಯೋಗ ಮತ್ತು ಸಹಕಾರದ ಪ್ರಯತ್ನವನ್ನೊಳಗೊಂಡಿದ್ದು, ಇದರ ಉದ್ದೇಶ, ಸಮುದಾಯದ ದುರ್ಬಲ ವರ್ಗದವರಿಗೆ, ಮಾನವ ಹಕ್ಕುಗಳು ಸಿಗುವಂತೆ ಮಾಡುವುದೇ ಆಗಿದೆ. ಈ ದೇಶದಲ್ಲಿರುವ, ವಂಚಿತರಾದ ಮತ್ತು ದುರ್ಬಲರಾದ ಮಾನವಸಮೂಹದ ಪಂಗಡಗಳಿಗೆ, ಸಾಮಾಜಿಕ-ಆರ್ಥಿಕ ನ್ಯಾಯವನ್ನು ಮುಟ್ಟಿಸುವುದಕ್ಕೆ ಮುಂದೆ ಇಟ್ಟ ಒಂದು ಹೆಜ್ಜೆಯೆಂದು ಇದನ್ನು ಗುರುತಿಸಬಹುದು.

ಕಾರ್ಯ ನಿರ್ವಹಣೆಯಲ್ಲಿರುವ ಜಡತೆ ಅಥಾವ ನಿಧಾನಗತಿಯ ಸಂದರ್ಭದಲ್ಲಿ ನ್ಯಾಯಿಕ ನಿರ್ದೇಶನಗಳ ದ್ವಾರಾ, ಚಿಕಿತ್ಸಾ ಕ್ರಮದ ರೂಪದಲ್ಲಿ, ಸಕಾರಾತ್ಮಕ ಕ್ರಮವನ್ನು, ಸಾರ್ವಜನಿಕ ಹಿತದೃಷ್ಟಿಯಿಂದಲೂ, ಅನುಚ್ಛೇದ 19, 21ರ ಜೊತೆಗೆ ಅನುಚ್ಛೇದ 38ರಲ್ಲಿ ಸಂಸ್ಥಾಪಿಸಿರುವ ಹಾಗೆ ಸಂವೈಧಾನಿಕ ಹಿನ್ನೆಲೆಯಲ್ಲಿಯೂ ಕೆಲವು ಮಿತಿಗಳಿಗೆ ಒಳಪಟ್ಟು, ತೆಗೆದುಕೊಳ್ಳಬಹುದಾಗಿದೆ.

ಸಾರ್ವಜನಿಕ ಹಿತಾಸಕ್ತಿಯನ್ನು ಮುಂಬರಿಸುವುದು ಮತ್ತು ಸಾರ್ವಜನಿಕರಿಗೆ ಕಿರುಕುಳವನ್ನು ತಪ್ಪಿಸುವುದು ನ್ಯಾಯಾಲಯದ ಪರಮ ಪರಿಗಣನೆಗಳಾಗಿವೆ. ಹಿತಾಸಕ್ತಿಯ ಸಮತೋಲವನ್ನು ಮಾಡುವುದು ನ್ಯಾಯಾಲಯಕ್ಕೆ ಸಂಬಂಧಿಸಿದ ವಿಷಯ. ಪ್ರಜಾತತ್ಪರತೆಯ ಸೋಗುಹಾಕಿದ ಕೆಲವರು ಇತರ ಮೇಲೆ ಬೇಜವಾಬ್ದಾರಿಯಿಂದ, ಮಾಡಿದ ಆಪಾದನೆಗಳ ಕುರಿತು ಕ್ರಮ ತೆಗೆದುಕೊಳ್ಳಲು ನ್ಯಾಯಾಲಯಗಳು ನಿರಾಕರಿಸಲೇಬೇಕು. ಅವರು ಮಾಡಿದ ಸಾರ್ವಜನಿಕರಿಗೆ ಕಿರುಕುಳವನ್ನುಂಟು ಮಾಡುವ ಕಾರ್ಯನಿರ್ವಹಣೆಯನ್ನು ಜನರೆದುರು ಹಿಡಿಯಲು ನ್ಯಾಯಾಲಯಗಳಿಗೆ ಸಾಧ್ಯವಾಗುವುದಿಲ್ಲ. ಆದರೆ ನಿರಂಕುಶತ್ವವೂ ಅಡ್ಡಮಾರ್ಗ ಹಿಡಿದಿರುವುದೂ ಸ್ಪಷ್ಟವಾಗಿ ಎದ್ದು ಕಾಣಿಸುತ್ತಿರುವಾಗ, ನ್ಯಾಯಾಲಯವು ತನ್ನ

ಕರ್ತವ್ಯದಿಂದ ಹಿಂದೆ ಸರಿದು ಇಂಥವುಗಳ ತಡೆಗೆ ಆದೇಶವನ್ನು ಕೊಡುವುದನ್ನು ನಿರಾಕರಿಸಲಾಗುವುದಿಲ್ಲ.

ಅನುಚ್ಛೇದ 32 ಮತ್ತು 226ರ ಕೆಳಗೆ, ನಡವಳಿಕೆಗಳ ನಿರ್ದಿಷ್ಟ ಉದ್ದೇಶಕ್ಕೆ ಸೂಕ್ತವಾದ, ಅಂದರೆ ಮೂಲಭೂತ ಹಕ್ಕುಗಳನ್ನು ಒತ್ತಾಯಿಸಿ ಜಾರಿಮಾಡುವುದಕ್ಕೆ ಪ್ರಕ್ರಿಯೆಯನ್ನು ಯೋಜಿಸಿಕೊಳ್ಳಲು ನ್ಯಾಯಾಲಯಗಳು ಸ್ವತಂತ್ರವಾಗಿವೆ. ಪ್ರಕರಣವೊಂದರಲ್ಲಿ, ಯಾವುದೇ ನಿರ್ದೇಶನ ಆಜ್ಞೆ ಅಥವಾ ರಿಟ್ ಅನ್ನು ಹೊರಡಿಸುವುದಕ್ಕೆ ನ್ಯಾಯಾಲಯಕ್ಕೆ ಸಂಪೂರ್ಣ ಅಧಿಕಾರವಿದೆ. 32ನೆಯ ಅನುಚ್ಛೇದ ಮತ್ತು 226ನೆಯ ಅನುಚ್ಛೇದಗಳು ಕ್ರಮವಾಗಿ ಸರ್ವೋಚ್ಚ ನ್ಯಾಯಾಲಯವನ್ನು ಮತ್ತು ಉಚ್ಚ ನ್ಯಾಯಾಲಯವನ್ನು ಪ್ರಜೆಗಳ ಮೂಲಭೂತ ಹಕ್ಕುಗಳನ್ನು ರಕ್ಷಣೆ ಮಾಡುವ ಒಂದು ಸಂವೈಧಾನಿಕ ನಿರ್ಬಂಧಕ್ಕೆ ಒಳಪಡಿಸಿವೆ. ಮತ್ತು ಆ ಉದ್ದೇಶಕ್ಕೋಸ್ಕರ, ಹೊಸ ಪರಿಹಾರಗಳನ್ನು ರೂಪಿಸುವುದಕ್ಕೂ ಮತ್ತು ಹೊಸ ತಂತ್ರಗಳನ್ನು ವಿನ್ಯಾಸಗೊಳಿಸುವುದಕ್ಕೂ ನ್ಯಾಯಾಲಯಗಳಿಗೆ ಎಲ್ಲ ಪ್ರಾಸಂಗಿಕವಾದ ಮತ್ತು ಸಹಾಯಕವಾದ ಅಧಿಕಾರಗಳೂ ಇವೆ. ಈ ಅಧಿಕಾರಗಳು ಮೂಲಭೂತ ಹಕ್ಕುಗಳನ್ನು ಒತ್ತಾಯಿಸಿ ಜಾರಿಗೆ ತರುವಂತೆ, ವಿನ್ಯಾಸಗೊಂಡಿವೆ. ಅದರಲ್ಲೂ ತೀರಾ ಪ್ರಾಥಮಿಕ ಹಕ್ಕುಗಳಿಂದ ವಂಚಿತರಾದ, ವಿಮೋಚನೆ ಮತ್ತು ವ್ಯಕ್ತಿ ಸ್ವಾತಂತ್ರ್ಯ ಎಂಬುದಕ್ಕೆ ಅನೇಕ ವೇಳೆ ಅರ್ಥವೇ ಗೊತ್ತಿಲ್ಲದ ಬಡವರ ಮತ್ತು ಪ್ರತಿಕೂಲ ಪರಿಸ್ಥಿತಿಯಲ್ಲಿ ಇರುವವರ ಹಕ್ಕುಗಳನ್ನು ಜಾರಿಗೆ ತರುವುದಕ್ಕೆ ಈ ಅಧಿಕಾರಗಳನ್ನು ನ್ಯಾಯಾಲಯಗಳಿಗೆ ಕೊಡಲಾಗಿದೆ.

ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆಗಳಲ್ಲಿ ಮೂಲಭೂತ ಹಕ್ಕುಗಳ ಉಲ್ಲಂಘನೆ ಆಗದಂತೆ ತಪ್ಪಿಸುವುದಕ್ಕೂ ಅಲ್ಲದೆ, ಆಗಲೇ ಉಲ್ಲಂಘನೆ ಆಗಿರುವ ಮೂಲಭೂತ ಹಕ್ಕುಗಳಿಗೆ ಪರಿಹಾರವನ್ನು ಕೊಡುವುದಕ್ಕೆ ಮತ್ತು ಉಲ್ಲಂಘನೆಯನ್ನು ಸರಿಪಡಿಸುವುದಕ್ಕೂ ಅಧಿಕಾರವನ್ನು ನಿಹಿತಗೊಳಿಸಲಾಗಿದೆ. ಸೂಕ್ತವಾದ ಪ್ರಕರಣಗಳಲ್ಲಿ, ಸರಿಪಡಿಸುವ ಪರಿಹಾರವನ್ನೂ ಅಲ್ಲದೆ ಧನ ಪರಿಹಾರವನ್ನು ನ್ಯಾಯಾಲಯ ಕೊಟ್ಟಿದೆ.

ಸಿವಿಲ್ ನ್ಯಾಯಾಲಯಗಳ ರೂಢಿಯ ವಿಧಾನಗಳ ಮೂಲಕ ಮೂಲಭೂತ ಹಕ್ಕುಗಳ ಉಲ್ಲಂಘನೆಗಾಗಿ ಪರಿಹಾರ ಧನವನ್ನು ಕೇಳುವ ಹಕ್ಕನ್ನು ಒತ್ತಾಯಿಸುವುದಕ್ಕೆ ಪರ್ಯಾಯವಾಗಿ, ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆಗಳನ್ನು ಉಪಯೋಗಿಸಿಕೊಳ್ಳಲು ಸಾಧ್ಯವಿಲ್ಲ; ಮೂಲಭೂತ ಹಕ್ಕುಗಳ ಅಸಾಧಾರಣವಾದ ಉಲ್ಲಂಘನೆ ಪ್ರಕರಣಗಳಲ್ಲಿ ಮಾತ್ರ ಪರಿಹಾರ ಧನವನ್ನು ಕೊಡಲಾಗುತ್ತದೆ. ಮೂಲಭೂತ ಹಕ್ಕಿನ ಉಲ್ಲಂಘನೆ ಎದ್ದು ಕಾಣುವಂತಹದೂ, ಸ್ಪಷ್ಟವಾದದ್ದೂ ಆಗಿರಬೇಕು; ಅಂದರೆ, ನಿರ್ವಿವಾದವಾದದ್ದೂ, ಮೇಲ್ನೋಟಕ್ಕೆ ಎದ್ದು ಕಾಣುವಂತಹದ್ದಾಗಿರಬೇಕು. ಅಲ್ಲದೆ ಇಂಥ ಉಲ್ಲಂಘನೆ, ಅನೇಕ ಮಂದಿಯ ಮೂಲಭೂತ ಹಕ್ಕುಗಳ ಮೇಲೆ ಪರಿಣಾಮ ಬೀರುವಂಥ ದೊಡ್ಡ ಪ್ರಮಾಣದ್ದಾಗಿರಬೇಕು ಅಥವಾ ಪೀಡಿತರಾದ ವ್ಯಕ್ತಿಗಳನ್ನು ಸಿವಿಲ್ ನ್ಯಾಯಾಲಯದಲ್ಲಿ ಕ್ರಮವನ್ನು ಪ್ರಾರಂಭಿಸಿ ಮುಂದುವರೆಸಿ ಎಂದು ಸೂಚಿಸುವುದು

ಅವರ ಬಡತನ, ನಿಸ್ಸಹಾಯಕತೆ, ಸಾಮಾಜಿಕ ಇಲ್ಲವೇ ಆರ್ಥಿಕ ಪ್ರತಿಕೂಲ ಸ್ಥಾನ ಇವುಗಳನ್ನು ಗಮನದಲ್ಲಿಟ್ಟುಕೊಂಡಾಗ ಇಂಥವರಿಗಾದ ಅನ್ಯಾಯವೂ, ಅತಿ ಕಠಿಣವಾದುದೂ ಅಥವಾ ಅದುಮಿ ಹಾಕುವಂಥದ್ದೂ ಎಂದು ತೋರುವಂಥದ್ದಾಗಿರಬೇಕು.

ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆ ಪ್ರಕರಣಗಳಲ್ಲಿ, ನ್ಯಾಯಾಲಯವು, ಅದರಲ್ಲೂ ಸರ್ವೋನ್ನತ ನ್ಯಾಯಾಲಯವು, ಶಾಸನಬದ್ಧ ಸಂಸ್ಥೆಗಳಿಗೆ ಅತಿ ಮುಖ್ಯವಾದ ಸಾರ್ವಜನಿಕ ಪ್ರಾಮುಖ್ಯತೆ ನಡವಳಿಕೆಗಳಲ್ಲಿ ಪಾಲುಗೊಳ್ಳುವಂತೆ ಕರೆಕೊಟ್ಟಾಗ ಆ ಶಾಸನಬದ್ಧ ಸಂಸ್ಥೆಗಳು ನ್ಯಾಯಾಲಯದ ಕರೆಗೆ ಸ್ಪಂದಿಸಿ ಅದರ ಮುಂದಿರುವ ನಡವಳಿಕೆಗಳಲ್ಲಿ ಭಾಗವಹಿಸಲು ಕರ್ತವ್ಯ ಬದ್ಧರಾಗಿದ್ದಾರೆ. ಖಾಸಗಿ ಪಕ್ಷಗಾರರು ಸಾಮಾನ್ಯ ಮೊಕದ್ದಮೆಗಳಲ್ಲಿ ಏಕಪಕ್ಷೀಯವಾಗಿ ಉಳಿಯುವುದನ್ನು ಆರಿಸಿಕೊಳ್ಳುವ ಹಾಗೆ, ಈ ಸಂಸ್ಥೆಗಳು ಪಕ್ಷಗಾರರಲ್ಲದಿದ್ದರೂ, ನ್ಯಾಯಾಲಯದಿಂದ ದೂರವಿರಲು ಆಯ್ಕೆಮಾಡಿಕೊಳ್ಳುವ ಹಾಗೆ ಇಲ್ಲ; ನ್ಯಾಯಾಲಯವು ಈ ಶಾಸನಬದ್ಧ ಸಂಸ್ಥೆಗಳು ಅಥವಾ ಇತರ ಪ್ರಾಧಿಕಾರಗಳ ಅಭಿಪ್ರಾಯ ಕೇಳುವ ಅವಕಾಶವನ್ನು ನೀಡಿ ಅವುಗಳನ್ನು ವಿಷಯಕ್ಕೆ ಸಂಬಂಧಿಸಿದ ವಿವಿಧ ಮುಖಗಳ ಮೇಲೆ ಅವುಗಳ ದೃಷ್ಟಿಕೋನವೇನೆಂದು ಮಂಡಿಸಿ ಎಂದು ಆಹ್ವಾನಿಸಿದಾಗ ಗಡುಸಿನ ಧೋರಣೆಯ ಮನೋಭಾವವನ್ನು ಮೆಚ್ಚಲು ಸಾಧ್ಯವಿಲ್ಲ. ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆಗಳು, ಪ್ರತಿದ್ವಂದಿಗಳಿಬ್ಬರು ಒಬ್ಬರನ್ನೊಬ್ಬರು ಎದುರಿಸುವ ಸಾಮಾನ್ಯ ಕೋರ್ಟು ವ್ಯವಹಾರವಲ್ಲ.

ಕೆಲವು ಪ್ರಕರಣಗಳಲ್ಲಿ ಯಾವುದೇ ವಿಷಯವನ್ನು ಪರಿಶೀಲಿಸುವುದಕ್ಕೆ ಆರಂಭವಿಚಾರಣೆಯ ನ್ಯಾಯಾಸ್ಥಾನವಾಗಿ, ಉಚ್ಚ ನ್ಯಾಯಾಲಯಕ್ಕಿರುವ ಅಧಿಕಾರ ವ್ಯಾಪ್ತಿ, ಸರ್ವೋಚ್ಚ ನ್ಯಾಯಾಲಯಕ್ಕಿಂತ ಹೆಚ್ಚು ಪರಿಣಾಮಕಾರಿಯಾಗಿದೆ. ಅನುಚ್ಛೇದ 226ರ ಕೆಳಗೆ ಉಚ್ಚ ನ್ಯಾಯಾಲಯಕ್ಕಿರುವ ಅಧಿಕಾರಗಳ ವ್ಯಾಪ್ತಿ, ಅನುಚ್ಛೇದ 32ರ ಕೆಳಗೆ ಸರ್ವೋಚ್ಚ ನ್ಯಾಯಾಲಯಕ್ಕೆ ಇರುವುದಕ್ಕಿಂತ ವಿಸ್ತಾರವಾದುದರಿಂದ, ಇಂಥ ಪ್ರಕರಣಗಳಲ್ಲಿ ವಿಷಯದ ಮೇಲೆ ಅಧಿಕಾರವ್ಯಾಪ್ತಿ ಇರುವ ಉಚ್ಚ ನ್ಯಾಯಾಲಯವನ್ನು ಸಮರ್ಪಕವಾದ ಪರಿಹಾರ ಕೊಡಬೇಕೆಂದು ಸಮೀಪಿಸುವುದು ಅಪೇಕ್ಷಣೀಯವಾದುದು.

ಆದರೆ ಇಲ್ಲಿ ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶ ಜಸ್ಟೀಸ್ ವಿ. ಖಾಲಿದ್ ಅವರು ವ್ಯಕ್ತಗೊಳಿಸಿರುವ ಒಂದು ಎಚ್ಚರಿಕೆಯ ಸ್ವರವನ್ನು ಧ್ವನಿಸಲೇಬೇಕಾಗಿದೆ:

> "ನ್ಯಾಯಾಲಯವನ್ನು ಸಮೀಪಿಸುವ ಸಾರ್ವಜನಿಕ ಹಿತಾಸಕ್ತಿ ಕಕ್ಷಿಗಾರರು, ತೋರಿಸಬೇಕಾದ ನಿಗ್ರಹವನ್ನು ಅತ್ಯುಜ್ವಲಗೊಳಿಸುವ ಉದ್ದೇಶದಿಂದ ನನ್ನದೇ ಆದ ಈ ಕೆಲವು ಪಂಕ್ತಿಗಳನ್ನು ಸೇರಿಸಿದ್ದೇನೆ. ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆ (ನಮ್ಮ ನ್ಯಾಯಾಂಗ ವ್ಯವಸ್ಥೆಯಲ್ಲಿ) ನೆಲಸಲೆಂದೇ ಬಂದಿದೆ. ಆದರೆ ಅದು ನ್ಯಾಯಾಲಯಗಳಿಗೂ, ಮತ್ತು ಸಾರ್ವಜನಿಕರಿಗೂ ಏಕಪ್ರಕಾರವಾಗಿ ಹಾನಿಯನ್ನು ಒಡ್ಡುತ್ತಿದೆಯೆಂದು ಯಾರೂ ಭಾವಿಸಬಹುದಾಗಿದೆ. ಇಂಥ ಪ್ರಕರಣಗಳನ್ನು ಈಗ ಯದ್ವಾತದ್ವಾ

ದಾಖಲಿಸಲಾಗುತ್ತಿದೆ. ಆದಕಾರಣ ಇಂಥ ಅರ್ಜಿಗಳನ್ನು ಸ್ವೀಕರಿಸಿ ಪರಿಶೀಲನೆ ಮಾಡುವುದಕ್ಕಾಗಿ ಸ್ಪಷ್ಟವಾದ ಮೇಲ್ಪಂಕ್ತಿಗಳನ್ನು ಕಡ್ಡಾಯಮಾಡುವುದೂ, ಸರಿಯಾದ ಮಾಪಕಗಳನ್ನು ರೂಪಿಸುವುದೂ ಅವಶ್ಯವಾಗಿದೆ. ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆಗಳೆಂಬ ಹೆಸರಿನಲ್ಲಿ ಅಡೆತಡೆಯಿಲ್ಲದೆ ಹರಿದು ಬರುತ್ತಿರುವ ಈ ಪ್ರಕರಣಗಳನ್ನು ನ್ಯಾಯಾಲಯಗಳು ಮಿತಿಗೊಳಿಸದಿದ್ದರೆ ರೂಢಿಯ ಮೊಕದ್ದಮೆಗಳು ನೆನೆಗುದಿಗೆ ಬಿದ್ದು ನ್ಯಾಯಾಲಯಗಳು ನ್ಯಾಯ ವಿತರಣೆಮಾಡುವುದರ ಬದಲು ಆಡಳಿತಾತ್ಮಕ ಹಾಗೂ ಕಾರ್ಯ ನಿರ್ವಾಹಕ ಜವಾಬ್ದಾರಿಗಳನ್ನೂ ತಮ್ಮ ಮೇಲೆ ಎಳೆದುಕೊಳ್ಳಬೇಕಾಗುತ್ತದೆ"

"ಮೂಲಭೂತ ಹಕ್ಕುಗಳ ಅಸಾಧಾರಣ ಉಲ್ಲಂಘನೆಯಾಗಿದೆಯೆಂದು ಸಮೂಹ ಅಥವಾ ವರ್ಗಗಳು ನ್ಯಾಯಾಲಯದ ಗಮನಕ್ಕೆ ತಂದಾಗ ಅಥವಾ ಪ್ರಾಥಮಿಕ ಮಾನವ ಹಕ್ಕುಗಳ ಉಲ್ಲಂಘನೆಯಾದಾಗ ಅಥವಾ ನ್ಯಾಯಿಕ ಅಂತಸ್ಸಾಕ್ಷಿಯನ್ನು ಘಾತಗೊಳಿಸುವಂಥ ಕೃತ್ಯಗಳು ನಡೆದಿವೆಯೆಂದು ದೂರುಗಳು ಬಂದಾಗ, ಈ ಸಂದರ್ಭಗಳಲ್ಲಿ ಮಾತ್ರ ನ್ಯಾಯಾಲಯಗಳು, ಅದರಲ್ಲೂ ಈ ನ್ಯಾಯಾಲಯ, ಪ್ರಕ್ರಿಯೆಯ ಸಂಕೋಲೆಗಳನ್ನು ಬದಿಗಿಟ್ಟು ಇಂಥ ಪ್ರಕರಣಗಳನ್ನು ವಿಚಾರಣೆ ಮಾಡಬೇಕು, ಅಲ್ಲದೆ, ನಿರ್ಗತಿಕರ, ಪ್ರತಿಕೂಲ ಪರಿಸ್ಥಿತಿಯಲ್ಲಿರುವವರ, ಮತ್ತು ಕಡೆಗಾಣಿಸಲ್ಪಟ್ಟವರ ಸಂಕಷ್ಟಗಳನ್ನೂ, ದುರವಸ್ಥೆಯನ್ನೂ ಹೋಗಲಾಡಿಸುವ ಸಲುವಾಗಿ, ದೊರೆಯುವ ಎಲ್ಲ ಉಪಬಂಧಗಳ ಕೆಳಗೆ ತನ್ನ ಅಧಿಕಾರ ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳಬೇಕು. ಸಹಾಯ ಬೇಕಾದ ಕಡೆ ಸಹಾಯಮಾಡಲು ನಾನು ಯಾರಿಗೂ ಹಿಂದೆ ಬೀಳುವುದಿಲ್ಲ; ಆದರೆ ಯಾರು ಬೇಕಾದರೂ ಒಳಗೆ ನುಗ್ಗುವುದಕ್ಕೆ ಈ ನ್ಯಾಯಾಲಯದ ಬಾಗಿಲು ಯಾವಾಗಲೂ ತೆರೆದಿರುತ್ತದೆಂದು ಇದರ ಅರ್ಥವಲ್ಲ. (ಈ ಪರಿಸ್ಥಿತಿಯಲ್ಲಿ) ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆದಾರರು ಆತ್ಮನಿಗ್ರಹ ಮಾಡಿಕೊಳ್ಳಬೇಕಾದ ಅವಶ್ಯಕತೆ ಇದೆ."

# 5

# ವಕೀಲರುಗಳು

ನ್ಯಾಯಾಧೀಶರುಗಳಲ್ಲದೆ, ವಕೀಲರುಗಳೂ ಸಹ ನ್ಯಾಯಾಲಯದ ಅತಿ ಮುಖ್ಯವಾದ ಅಧಿಕಾರಿಗಳಾಗಿದ್ದಾರೆ. ನ್ಯಾಯಾಲಯಗಳ ಮತ್ತು ನ್ಯಾಯಾಧಿಕರಣಗಳ ಮುಂದಿರುವ ಬಹುತೇಕ ಎಲ್ಲ ಪ್ರಕರಣಗಳಲ್ಲಿ, ಮೊಕದ್ದಮೆಗಳನ್ನು ನಡೆಸಲು ವಕೀಲರುಗಳನ್ನು ಪಕ್ಷಗಾರರು ನೇಮಿಸಿಕೊಳ್ಳುತ್ತಾರೆ. ವಕೀಲರುಗಳು ಬೇಕೇ ಬೇಕಾದವರು. ನಿಷ್ಪಕ್ಷಪಾತ, ನ್ಯಾಯಪರತೆ ಮತ್ತು ಕಾನೂನಿನನ್ವಯ ನ್ಯಾಯ ತೀರ್ಮಾನ ಇವುಗಳ ಸಮಗ್ರ ರಚನೆ, ವಕೀಲರುಗಳು ಒಂದು ಪ್ರಕರಣವನ್ನು ಹೇಗೆ ನಡೆಸುತ್ತಾರೆಂಬುದರ ಮೇಲೆ ಅವಲಂಬಿತವಾಗಿದೆ.

ವಕೀಲರುಗಳು/ಅಡ್ವೋಕೇಟರುಗಳು/ಬ್ಯಾರಿಸ್ಟರುಗಳು/ಸಲಹಾ ವಕೀಲರುಗಳು, ಅನಾದಿಕಾಲದಿಂದ ಅಸ್ತಿತ್ವದಲ್ಲಿದ್ದಾರೆ. ವ್ಯಾಜ್ಯಗಳು ಬಲಪ್ರಯೋಗದಿಂದಲ್ಲದೆ, ವಾದ ಮತ್ತು ಮಧ್ಯಸ್ಥಿಕೆಯಿಂದ ಇತ್ಯಾರ್ಥಗೊಳಿಸಲ್ಪಡಲು ಪ್ರಾರಂಭವಾದ ದಿನಗಳಲ್ಲಿ, ಗ್ರೀಸ್, ರೋಮ್ ಮತ್ತು ಪ್ರಾಚೀನ ಭಾರತದಲ್ಲಿ ವಕೀಲರುಗಳಿದ್ದರು.

ಈ ದಿನಗಳಲ್ಲಿ ಭಾರತದಲ್ಲಿ ಅಸ್ತಿತ್ವದಲ್ಲಿರುವ ವಕೀಲಿ ವೃತ್ತಿ ಮತ್ತು ವ್ಯವಸ್ಥೆ, ಪಶ್ಚಿಮ ದೇಶಗಳಂತೆ, ಚಾರಿತ್ರಿಕ ಬೆಳವಣಿಗೆಯ ಫಲಿತಾಂಶವಲ್ಲ. ಅದನ್ನು ಬ್ರಿಟಿಷರು ಭಾರತದಲ್ಲಿ ನೆಟ್ಟರು. ಆದಾಗ್ಯೂ ಅದು ಭಾರತದ ಸಾಮಾಜಿಕ-ರಾಜಕೀಯ ಮಣ್ಣಿನಲ್ಲಿ ಆಳವಾಗಿ ಬೇರೂರಿ, ಬೆಳೆದು, ಬ್ರಿಟಿಷ್ ಚಕ್ರಾಧಿಪತ್ಯದ ವಿಸ್ತರಣೆಯ ಅಂಗವಾದುದು ತಾರ್ಕಿಕವೇ ಸರಿ. ಭಾರತವು ವಿಭಿನ್ನವಾದ ಜಾತಿ, ಮತ ಮತ್ತು ಸಂಸ್ಕೃತಿಗಳನ್ನು ಮೈಗೂಡಿಸಿಕೊಂಡ ದೇಶ. ಇದರಲ್ಲಿ ಅನೇಕ ಬಗೆಯ ಕಾನೂನುಗಳ ವ್ಯವಸ್ಥೆಗಳಿದ್ದು, ಇದರ ಪ್ರಜೆಗಳು ಬೇರೆ ಬೇರೆ ವ್ಯವಸ್ಥೆಗಳಿಗೆ ಒಳಪಟ್ಟಿದ್ದರು. ಭಾರತದಲ್ಲಿ ಬ್ರಿಟಿಷ್ ಆಡಳಿತವು ಹೆಪ್ಪುಗಟ್ಟಿಕೊಳ್ಳುವುದರೊಂದಿಗೆ ಕಾನೂನಿನ ಮತ್ತು ಪ್ರಕ್ರಿಯೆಯ ಏಕ ರೂಪತೆಯು ಸ್ಥಾಪಿಸಲ್ಪಟ್ಟು, ಏಕರೀತಿಯ ವ್ಯವಹಾರಿಕ ಮತ್ತು ಅಪರಾಧಿಕ ಸಂಹಿತೆಗಳನ್ನು ಜಾರಿಗೆ ತರಲಾಯಿತು. ಅವರ ಕಾನೂನುಗಳನ್ನು ಜಾರಿ ಮಾಡಲು ಬ್ರಿಟಿಷರು ತಮ್ಮದೇ ಆದ ಕಾನೂನುಗಳ, ವಕೀಲರುಗಳ, ನ್ಯಾಯಾಸ್ಥಾನಗಳ ವ್ಯವಸ್ಥೆಯನ್ನು ಆಚರಣೆಗೆ ತಂದರು. ಬ್ರಿಟಿಷರು 1947ರಲ್ಲಿ ಭಾರತವನ್ನು ಬಿಟ್ಟು ಹೋದರು. ಆದರೆ ಈಗಲೂ ಕೂಡ ನಾವು ಅವರ ವ್ಯವಸ್ಥೆಯ ಸಜ್ಜುಗಳಿಗೆ, "ಮೈ ಲಾರ್ಡ್" (ನನ್ನ ಪ್ರಭುವೆ) ಮತ್ತು "ಯುವರ್ ವರ್‌ಶಿಪ್" (ಪೂಜನೀಯರಾದಂಥವರೆ) ಇತ್ಯಾದಿ ವಾಕ್ಸರಣಿಗಳಿಗೆ ಅಂಟಕೊಂಡೇ ಇದ್ದೇವೆ.

ಕಾನೂನಿನ ಪರಿಹಾರವನ್ನು ಪಡೆದುಕೊಳ್ಳುವುದು ಒಂದು ಕುಶಲ ಕಲೆಯಾಗಿಬಿಟ್ಟಿದೆ. ವೃತ್ತಿಪರ ವಕೀಲನ ನೆರವಿಲ್ಲದೆ, ನ್ಯಾಯ ದೊರಕಿಸಿಕೊಳ್ಳುವುದಿರಲಿ, ನ್ಯಾಯಾಸ್ಥಾನವನ್ನೇ (ನ್ಯಾಯದ ಚಿಲುಮೆ) ತಲುಪಲು ಸಾಧ್ಯವಾಗುತ್ತಿಲ್ಲ. ಕಕ್ಷಿಗಾರನು, ನ್ಯಾಯಾಲಯವನ್ನು ಅದರ ಪೂಜಾರಿಯ ಅರ್ಥಾತ್ ವಕೀಲನ ಮೂಲಕ ಸಂಪರ್ಕಿಸಿದರೆ ನ್ಯಾಯವನ್ನು ಸಮರ್ಪಕವಾಗಿ ಪ್ರದಾನಮಾಡಬಹುದೆಂದು ನ್ಯಾಯಾಧೀಶರೇ ಹಿಂದೆ ಮುಂದೆ ನೋಡದೆ ಸೂಚಿಸುತ್ತಾರೆ. ಕಕ್ಷಿಗಾರನೊಬ್ಬನಿಗೆ ವಕೀಲನನ್ನು ಇಟ್ಟುಕೊಳ್ಳುವ ಚೈತನ್ಯವಿಲ್ಲದಿದ್ದರೆ, ಸಹಾಯ ಮಾಡಲು ನ್ಯಾಯಾಲಯ ಮಿತ್ರನೊಬ್ಬನನ್ನು (ಅಮೈಕಸ್ ಕ್ಯೂರಿಯೇ) ನ್ಯಾಯಾಲಯವು ನೇಮಕಮಾಡುತ್ತದೆ. ಈ ನ್ಯಾಯಾಲಯ ಮಿತ್ರನು ತಾತ್ವಿಕವಾಗಿ ನ್ಯಾಯಾಲಯಕ್ಕೆ ಮಾತ್ರ ಹೊಣೆಗಾರನಾಗಿರುತ್ತಾನೆ.

ನ್ಯಾಯಾಲಯಗಳಲ್ಲಿ ವಕೀಲನಾಗಿ ವೃತ್ತಿ ನಡೆಸುವ ವ್ಯಕ್ತಿಯು 1961ರ ಅಡ್ವೋಕೇಟರುಗಳ ಅಧಿನಿಯಮದ ಉಪಬಂಧಗಳಿಗೆ ಬದ್ಧನಾಗಿರುತ್ತಾನೆ. ಕೇಂದ್ರ ನ್ಯಾಯವಾದಿ ವೃಂದ ಮಂಡಲಿಗಳಿಂದಾಗಲಿ (ಸೆಂಟ್ರಲ್ ಬಾರ್ ಕೌನ್ಸಿಲ್) ಅಥವಾ ರಾಜ್ಯ ನ್ಯಾಯವಾದಿ ವೃಂದ ಮಂಡಲಿಗಳಿಂದಾಗಲೀ (ಸ್ಟೇಟ್ ಬಾರ್ ಕೌನ್ಸಿಲ್ಸ್) ಅಡ್ವೋಕೇಟರುಗಳಾಗಿ ಅವರು ಭರ್ತಿ ಮಾಡಿಕೊಳ್ಳಲ್ಪಟ್ಟಿರಬೇಕು. ಅಲ್ಲದೆ ಅವರು ಈ ನ್ಯಾಯ ವೃಂದಗಳು ಮಾನ್ಯ ಮಾಡಿದ ಕಾನೂನು ಪದವಿಯನ್ನು ಪಡೆದಿರಬೇಕು. ಅಡ್ವೋಕೇಟರುಗಳೆಂದು ಗುರುತಿಸಲಾದ, ಒಂದೇ ವರ್ಗಕ್ಕೆ ಸೇರಿದ, ವಕೀಲಿ ವೃತ್ತಿ ನಡೆಸುವ ಏಕಮಾತ್ರ ವರ್ಗವಾಗಿ, ನ್ಯಾಯವಾದಿ ವರ್ಗವನ್ನು ಸಮಗ್ರಗೊಳಿಸಲಾಗಿದೆ. ವಕೀಲರಾಗಿ ಭರ್ತಿಯಾಗಬೇಕಾದರೆ, ಇವರಿಗೆ, ಏಕರೀತಿಯ ವಿದ್ಯಾರ್ಹತೆ ಇರಬೇಕು.

ಹಿರಿಯ ವಕೀಲರುಗಳು ಮತ್ತು ಇತರ ವಕೀಲರುಗಳು ಎಂಬ ಎರಡು ವರ್ಗಗಳ ಅಡ್ವೋಕೇಟರುಗಳು ಇದ್ದಾರೆ. ಒಬ್ಬ ಅಡ್ವೋಕೇಟ್ ತಾನು ಇಷ್ಟಪಟ್ಟಲ್ಲಿ, ಸರ್ವೋಚ್ಚ ನ್ಯಾಯಾಲಯದಿಂದ ಅಥವಾ ಉಚ್ಚ ನ್ಯಾಯಾಲಯದಿಂದ, 'ಹಿರಿಯ ವಕೀಲ'ನೆಂದು ಅಂಕಿತಗೊಳಿಸಿಕೊಳ್ಳಬಹುದು. ಹಾಗೆ ಅಂಕಿತ ಗೊಳಿಸಲು, ನ್ಯಾಯಾಲಯದ ಅಭಿಪ್ರಾಯದಲ್ಲಿ, ಆ ವಕೀಲನಿಗೆ ದಕ್ಷತೆ, ನ್ಯಾಯವಾದಿವರ್ಗದಲ್ಲಿ ಸ್ಥಾನಮಾನ ಮತ್ತು/ಅಥವಾ ಕಾನೂನಿನಲ್ಲಿ ವಿಶೇಷವಾದ ತಿಳುವಳಿಕೆ ಅಥವಾ ಪರಿಶ್ರಮ ಇರಬೇಕು. ಹಿರಿಯ ವಕೀಲನೆಂದು ಅಂಕಿತಗೊಂಡ ಮೇಲೆ, ಅವರು ವಕಾಲತ್ ನಾಮಗಳನ್ನು ದಾಖಲುಮಾಡುವ ಹಾಗಿಲ್ಲ. ವಾದ ಪ್ರತಿವಾದ ಪತ್ರಗಳನ್ನು ಕರಡು ಮಾಡುವ ಹಾಗಿಲ್ಲ. ಆದರೆ ಅವರು ಇತರ ವಕೀಲರಿಂದ ತಿಳುವಳಿಕೆಗಳನ್ನು ಪಡೆದುಕೊಂಡು ಅವರೊಡನೆ ನ್ಯಾಯಾಲದಲ್ಲಿ ಹಾಜರಾಗಿ ವಾದ ಮಾಡಬಹುದು. ಕಕ್ಷಿಗಾರರ ಜೊತೆ ಅವರು ನೇರವಾಗಿ ವ್ಯವಹರಿಸುವ ಹಾಗಿಲ್ಲ. ನ್ಯಾಯಾಲಯದಲ್ಲಿ ಇತರ ವಕೀಲರ ಮೇಲೆ ಅವರಿಗೆ ಆದ್ಯತೆ ಇದೆ. ಸರ್ವೋಚ್ಚ ನ್ಯಾಯಾಲಯದ ಆದೇಶ (iv)2(ಬಿ) ನಿಯಮದ ಮತ್ತು ಭಾರತ ನ್ಯಾಯವಾದಿ ವೃಂದ ಮಂಡಲಿಯ ನಿಯಮ (1)(ಎ) ಪ್ರಕಾರ ಹಿರಿಯ ವಕೀಲರುಗಳ ಮೇಲೆ ವಿಧಿಸಿರುವ ನಿರ್ಬಂಧಗಳು ಈ ಮುಂದಿನಂತೆ ಇವೆ:

ಭಾರತ ನ್ಯಾಯವಾದಿ ವೃಂದ ಮಂಡಲಿಯ ನಿಯಮ 1(ಎ)

> ಹಿರಿಯ ವಕೀಲರು ವಕಾಲತ್ ನಾಮವನ್ನು ದಾಖಲು ಮಾಡುವ ಹಾಗಿಲ್ಲ. ಯಾವುದೇ ನ್ಯಾಯಾಲಯ ಅಥವಾ ನ್ಯಾಯಾಧಿಕರಣದ ಮುಂದೆಯಾಗಲೀ, ಅಥವಾ ಅಡ್ವೋಕೇಟರುಗಳ ಅಧಿನಿಯಮದ 30ನೆಯ ಖಂಡದಲ್ಲಿ ಸೂಚಿಸಿರುವ ಯಾವ ವ್ಯಕ್ತಿಯ ಮುಂದಾಗಲೀ ಅಥವಾ ಇತರ ಪ್ರಾಧಿಕಾರದ ಮುಂದಾಗಲೀ ವಕೀಲಿ ಕಾರ್ಯ ಮಾಡುವ ಹಾಗಿಲ್ಲ.

1966ರ ಸರ್ವೋಚ್ಚ ನ್ಯಾಯಾಲಯದ ivನೇ ಆದೇಶದ ನಿಯಮ 2(ಬಿ) ಹೀಗೆ ಹೇಳುತ್ತದೆ:

> ಹಿರಿಯ ವಕೀಲರು ವಕಾಲತ್ ನಾಮವನ್ನು ದಾಖಲು ಮಾಡುವ ಹಾಗಿಲ್ಲ ಮತ್ತು ವಕೀಲಿ ಕಾರ್ಯ ಮಾಡುವ ಹಾಗಿಲ್ಲ. 'ಕಾರ್ಯ' ಎಂದರೆ ಯಾವುದೇ ನ್ಯಾಯಾಲಯದಲ್ಲಿ ವಕಾಲತ್ ದಾಖಲುಮಾಡಿ ಹಾಜರಿ ಹಾಕುವುದು ಮತ್ತು ಯಾವುದೇ ವಾದ ಪ್ರತಿವಾದ ಪತ್ರವನ್ನು ಅಥವಾ ಅರ್ಜಿಯನ್ನು ದಾಖಲು ಮಾಡುವುದು.

ಭಾರತದಲ್ಲಿ ಎಲ್ಲಿಯೇ ಆಗಲಿ, ನ್ಯಾಯವಾದಿ ವೃಂದ ಮಂಡಲಿಯ ಪಟ್ಟಿಯಲ್ಲಿ ಭರ್ತಿಯಾಗಿರುವ ವಕೀಲನು, ಸರ್ವೋಚ್ಚ ನ್ಯಾಯಾಲಯವೂ ಸೇರಿದಂತೆ ಯಾವುದೇ ನ್ಯಾಯಾಲಯದಲ್ಲಿ, ನ್ಯಾಯಾಧಿಕರಣದಲ್ಲಿ, ಸಾಕ್ಷಿ ಪಡೆಯಲು ಕಾನೂನಿನನ್ವಯ ಅಧಿಕಾರ ಕೊಡಲ್ಪಟ್ಟ ಯಾವುದೇ ಪ್ರಾಧಿಕಾರದ ಮುಂದೆ, ವಕೀಲಿ ವೃತ್ತಿಯನ್ನು ನಡೆಸಲು ಹಕ್ಕುಳ್ಳವನಾಗಿರುತ್ತಾನೆ.

ಆದಾಗ್ಯೂ ಎಲ್ಲ ನ್ಯಾಯಾಧಿಕರಣಗಳ ಮುಂದೆ ಹಾಜರಾಗಬಹುದಾದ ವಕೀಲರ ಹಕ್ಕು ನಿರುಪಾಧಿಕವಲ್ಲ. ಕೆಲವು ಸಂದರ್ಭಗಳಲ್ಲಿ ಈ ಹಕ್ಕನ್ನು ಕಾನೂನಿನನ್ವಯ ಮೊಟಕುಗೊಳಿಸಲಾಗಿದೆ. ಉದಾ: ಕೈಗಾರಿಕಾ ವಿವಾದ ನ್ಯಾಯಾಲಯಗಳು ಮತ್ತು ಕುಟುಂಬ ನ್ಯಾಯಾಲಯಗಳು. ಈ ನ್ಯಾಯಾಧಿಕರಣದಲ್ಲಿ ಒಬ್ಬ ವಕೀಲನು ಕೇವಲ ವಕಾಲತ್ ನಾಮವನ್ನು ದಾಖಲು ಮಾಡಿ ನ್ಯಾಯಾಧಿಕರಣದ ಮುಂದೆ ಹಾಜರಾಗುವಂತಿಲ್ಲ. ಇದಕ್ಕೆ ಎದುರು ಪಕ್ಷದವರು ಒಪ್ಪಬೇಕು. ಕೈಗಾರಿಕಾ ವಿವಾದ ಅಧಿನಿಯಮ ಮತ್ತು ಕುಟುಂಬ ನ್ಯಾಯಾಲಯಗಳ ಅಧಿನಿಯಮ ಇವುಗಳು ವಿಶೇಷ ಶಾಸನಗಳಾದ್ದರಿಂದ ಅವುಗಳಿಗೆ ಸಾಮಾನ್ಯ ಶಾಸನವಾದ 1961ರ ಅಡ್ವೋಕೇಟರ ಅಧಿನಿಯಮದ ಮೇಲೆ ಮೇಲುಗೈ ಇದೆ.

## ವೃತ್ತಿಪರ ದುರ್ನಡತೆ ಮತ್ತು ವಕೀಲರ ವಿರುದ್ಧ ಕ್ರಮ ಜರುಗಿಸುವುದು

ವಕೀಲರುಗಳು ಕಾನೂನಿಗೂ ಮೇಲ್ಪಟ್ಟವರು, ಒಮ್ಮೆ ಅವರಿಗೆ ಪ್ರಕರಣವನ್ನು ವಹಿಸಿಬಿಟ್ಟರೆ, ಅವರು ಅದನ್ನು ನಡೆಸಬಹುದು ಅಥವಾ ದುರ್ನಡತೆ ಎಂದು ಹೇಳಬಹುದಾದ, ಮಾಡಬಾರದ ಕೆಲಸವನ್ನು ಮಾಡಬಹುದು. ಇಲ್ಲವೇ ಮಾಡಬೇಕಾದ ಕೆಲಸವನ್ನು ಮಾಡದೇ ಬಿಡಬಹುದು ಎಂದು ಸರ್ವೇಸಾಮಾನ್ಯ ಭಾವನೆ ಇತ್ತು. ಆದರೆ ಅದು ಹಾಗಲ್ಲ. ಅವರ ಮೇಲೂ ಕ್ರಮ ಜರುಗಿಸಬಹುದು.

ಕಕ್ಷಿಗಾರನೊಬ್ಬನಿಗೆ ತನ್ನ ವಕೀಲ ದುರ್ನಡತೆ ಮಾಡಿದ್ದಾನೆ ಎಂದು ಅನಿಸಿದರೆ ಅವನು ರಾಜ್ಯದ ನ್ಯಾಯವಾದಿಗಳ ಮಂಡಲಿಯ ಮುಂದೆ ದೂರನ್ನು ಸಲ್ಲಿಸಬಹುದು. ಇಂಥ ದೂರುಗಳನ್ನು ಆಧರಿಸಿ, ಆ ವಕೀಲರ ಮೇಲೆ ಅಡ್ವೋಕೇಟರ ಅಧಿನಿಯಮದ ಕೆಳಗೆ ಮಂಡಲಿ ಕ್ರಮ ಜರುಗಿಸಬಹುದು.

ಭಾರತದ ನ್ಯಾಯವಾದಿ ವೃಂದ ಮಂಡಲಿ ಸೇರಿದಂತೆ ಎಲ್ಲ ರಾಜ್ಯ ನ್ಯಾಯವಾದಿ ವೃಂದ ಮಂಡಲಿಗಳು, ಒಂದು ಅಥವಾ ಒಂದಕ್ಕಿಂತ ಹೆಚ್ಚು ಶಿಸ್ತು ಸಮಿತಿಗಳನ್ನು ರಚನೆ ಮಾಡಬೇಕಾಗಿದೆ. ಪ್ರತಿ ಸಮಿತಿಯಲ್ಲಿ ಇಬ್ಬರು ಚುನಾಯಿತ ಸದಸ್ಯರು ಮತ್ತು ತಕ್ಕದಾದ ಅರ್ಹತೆಯುಳ್ಳ ಒಬ್ಬ ವಕೀಲರನ್ನು ಸಹಸದಸ್ಯನನ್ನಾಗಿ ಸೇರಿಸಿಕೊಳ್ಳಬೇಕು. ಇಂಥ ಸಹ ಸದಸ್ಯನು ಮಂಡಲಿಯ ಚುನಾಯಿತ ಸದಸ್ಯನಾಗಿರಬಾರದು. ಶಿಸ್ತು ಸಮಿತಿಯ ಅತ್ಯಂತ ಹಿರಿಯ ಸದಸ್ಯರು ಸಮಿತಿಯ ಅಧ್ಯಕ್ಷರಾಗುತ್ತಾರೆ.

ಶಿಸ್ತು ಸಮಿತಿಯ ದೂರು ತನ್ನ ಕೈಸೇರಿದ ಮೇಲೆ, ಫಿರ್ಯಾದುದಾರನಿಗೂ ಮತ್ತು ವಕೀಲನಿಗೂ ತಿಳುವಳಿಕೆ ನೀಡಿ, ಅವಕಾಶ ಕೊಟ್ಟು ಅವರು ಹೇಳುವುದನ್ನು ಕೇಳಿದ ಮೇಲೆ ಕೆಳಕಂಡ ಯಾವುದೇ ಆದೇಶವನ್ನು ಕೊಡಬಹುದು:

i. ಅರ್ಜಿಯನ್ನು ವಜಾ ಮಾಡುವುದು

ii. ವಕೀಲರಿಗೆ ವಾಗ್ದಂಡನೆ ಕೊಡುವುದು

iii. ಸಮಿತಿಗೆ ಸೂಕ್ತವೆಂದು ಕಂಡುಬಂದ ಅವಧಿಗೆ ವಕೀಲರನ್ನು ಅಮಾನತ್ತಿನಲ್ಲಿಡುವುದು

iv. ಗಂಭೀರ ಸ್ವರೂಪದ ದುರ್ನಡತೆಯು ಸಾಬೀತಾದ ಸಂದರ್ಭದಲ್ಲಿ ವಕೀಲರ ಹೆಸರನ್ನು ಮಂಡಲಿಯ ವಕೀಲರ ಪಟ್ಟಿಯಿಂದ ತೆಗೆದುಹಾಕುವುದು

ಅಮಾನತ್ತಿನಲ್ಲಿಡಲಾದ ವಕೀಲರು ಅಮಾನತ್ತಿನ ಅವಧಿ ಮುಗಿಯುವವರೆಗೆ ಯಾವುದೇ ನ್ಯಾಯಾಲಯ ಅಥವಾ ನ್ಯಾಯಾಧಿಕರಣದ ಮುಂದೆ ವೃತ್ತಿಯನ್ನು ನಡೆಸುವ ಹಾಗಿಲ್ಲ.

## ಭಾರತದ ನ್ಯಾಯವಾದಿಗಳ ಮಂಡಲಿಗೆ ಮೇಲ್ಮನವಿ

ರಾಜ್ಯ ಮಂಡಲಿಯ ಶಿಸ್ತು ಸಮಿತಿಯ ಆದೇಶದಿಂದ ಅಸಂತುಷ್ಟನಾದ ಯಾರೇ ಆಗಲಿ ಅರವತ್ತು ದಿನಗಳ ಒಳಗೆ ಭಾರತ ನ್ಯಾಯವಾದಿಗಳ ಮಂಡಲಿಗೆ ಮೇಲ್ಮನವಿಯನ್ನು ಸಲ್ಲಿಸಬಹುದು. ಈ ಮೇಲ್ಮನವಿಯನ್ನು ಭಾರತ ಮಂಡಲಿಯ ಶಿಸ್ತು ಸಮಿತಿಯು ಎರಡು ಕಡೆಯ ಪಕ್ಷಗಾರರಿಗೆ ತಿಳುವಳಿಕೆ ಕೊಟ್ಟು, ಅವರು ಹೇಳುವುದನ್ನು ಕೇಳಿ, ತನಗೆ ಸೂಕ್ತ ಕಂಡ ಆದೇಶವನ್ನು ಮಾಡಬಹುದು. ಅಂಥ ಆದೇಶ ರಾಜ್ಯಮಂಡಲಿ ಕೊಟ್ಟ ಶಿಕ್ಷೆಯನ್ನು ಬದಲಾವಣೆ ಮಾಡುವ ಆದೇಶವೂ ಆಗಿರಬಹುದು.

## ಸರ್ವೋಚ್ಚ ನ್ಯಾಯಾಲಯಕ್ಕೆ ಅಂತಿಮ ಮೇಲ್ಮನವಿ

ಭಾರತ ನ್ಯಾಯವಾದಿ ವೃಂದ ಮಂಡಲಿಯ ಆದೇಶದಿಂದ ಅಸಂತುಷ್ಟನಾದ

ಯಾವನೇ ವ್ಯಕ್ತಿ ಅರವತ್ತು ದಿನಗಳ ಒಳಗೆ ಸರ್ವೋಚ್ಚ ನ್ಯಾಯಾಲಯಕ್ಕೆ ಮೇಲ್ಮನವಿ ಮಾಡಬಹುದು. ಸರ್ವೋಚ್ಚ ನ್ಯಾಯಾಲಯವು ಪಕ್ಷಗಾರರ ವಾದವನ್ನು ಕೇಳಿ ಯಾವುದೇ ಆದೇಶವನ್ನು ಮಾಡಬಹುದು. ಅಂಥ ಆದೇಶ ಭಾರತ ನ್ಯಾಯವಾದಿ ವೃಂದ ಮಂಡಲಿ ಕೊಟ್ಟ ಶಿಕ್ಷೆಯನ್ನು ಬದಲಾವಣೆ ಮಾಡುವ ಆದೇಶವೂ ಆಗಿರಬಹುದು.

ವಕೀಲರ ಕುಸಿಯುತ್ತಿರುವ ವೃತ್ತಿ ಮಟ್ಟದ ಬಗ್ಗೆ ಆತಂಕ ಬೆಳೆಯುತ್ತಲೇ ಇದೆ. ವಕೀಲರುಗಳು ಅತ್ಯಂತ ಅನಪೇಕ್ಷಿತ ಅವಶ್ಯಕತೆಯೆಂದು ಜನರಲ್ಲಿ ಭಾವನೆ ಬಂದಿದೆ. ಪ್ರಾಮಾಣಿಕತೆ, ನಿಷ್ಠೆ, ನ್ಯಾಯ ಪರತೆ, ನಿರ್ಭೀತಿ, ಸಕಾರಣವಾದ ಶುಲ್ಕ, ಇವುಗಳು ಗತಕಾಲಕ್ಕೆ ಸೇರಿ ಹೋಗಿವೆ. ನ್ಯಾಯ ಪರತೆ, ನಿರ್ಭೀತಿ, ದಕ್ಷತೆ, ಪ್ರಾಮಾಣಿಕತೆ ಇವುಗಳು ವಕೀಲರಲ್ಲಿರಬೇಕಾದ ಅತ್ಯವಶ್ಯಕ ಗುಣಗಳು. ನೆಮ್ಮದಿಯಾಗಿ ಜೀವನ ಮಾಡುವುದಕ್ಕೆ ಮತ್ತು ತಮ್ಮ ಕರ್ತವ್ಯವನ್ನು ಸಮರ್ಥವಾಗಿಯೂ, ಪ್ರಾಮಾಣಿಕತೆಯಿಂದಲೂ, ನಿರ್ಭೀತಿಯಿಂದಲೂ ನಿರ್ವಹಿಸುವುದಕ್ಕಾಗಿ, ಶುಲ್ಕವನ್ನು ಪಡೆದುಕೊಳ್ಳುವುದು ವಕೀಲರಿಗೆ ಅವಶ್ಯಕವಾಗಿದೆ. ಆದರೆ ಸಂತ್ರಸ್ತ ಕಕ್ಷಿಗಾರನನ್ನು ಸುಲಿಗೆ ಮಾಡಿ. ಹಣವನ್ನು ಗುಡ್ಡೆ ಹಾಕುವ ವ್ಯಾಪಾರವಾಗಬಾರದು. ವಿಳಂಬಗಳಿಗೂ, ವಿಚಾರಣೆ ಸಂಖ್ಯೆಗಳು ದ್ವಿಗುಣ, ತ್ರಿಗುಣವಾಗುವುದಕ್ಕೂ ತಮ್ಮ ವಾದಗಳಿಂದ ನ್ಯಾಯಾಧೀಶರುಗಳಿಗೆ ಗೊಂದಲ ಉಂಟುಮಾಡುವುದಕ್ಕೂ ವಕೀಲರುಗಳೇ ಹೊಣೆ ಎಂದು ಹೇಳಲಾಗಿದೆ.

ಈ ಟೀಕೆಗಳಲ್ಲಿ ಕೆಲವು ನ್ಯಾಯವಾದ ಟೀಕೆಗಳಲ್ಲ. ಕಕ್ಷಿಗಾರರ ಹೊಣೆಯು ಬಹುಮಟ್ಟಿಗೆ ಇದರಲ್ಲಿದೆ. ವಾದಿಗೆ ತಾನು ಹೇಗಾದರೂ ಜಯಿಸಬೇಕಾಗಿದೆ. ಪ್ರತಿವಾದಿಗೆ ಮತ್ತು ಅಪಾದಿತನಿಗೆ ತಾನು ಹೇಗಾದರೂ ಬಿಡುಗಡೆಯಾಗಬೇಕಾಗಿದೆ. ಕೇವಲ ಫೀಸಿಗೋಸ್ಕರ ತನ್ನ ಕಕ್ಷಿಗಾರರ ಪ್ರಭಾವಕ್ಕೆ ವಕೀಲ ಸಿಲುಕಬಾರದೆಂಬ ನಿರೀಕ್ಷೆ ಇದೆ. "ಕುಸಿಯುತ್ತಿರುವ ಗುಣಮಟ್ಟ" ಎಂಬ ಟೀಕೆಯನ್ನು ನಿವಾರಿಸಲು ಬಹಳಷ್ಟೇ ಸುಧಾರಣೆಯಾಗಬೇಕಾಗಿದೆ. ನ್ಯಾಯವಾದಿ ವೃಂದದ ಉನ್ನತ ಸಂಪ್ರದಾಯಗಳ ಅನುಕರಣೆಯಿಂದ, ಹಾಗೂ ಮೌಲ್ಯ, ಪಾಂಡಿತ್ಯ ಮತ್ತು ವಕೀಲಿತನದ ಉನ್ನತ ಗುಣಮಟ್ಟವನ್ನು ಕಾಪಾಡಿಕೊಂಡು ಬರುವುದರಿಂದ, ವಕೀಲರ ಮಟ್ಟ ಸುಧಾರಣೆಯಾಗಬಹುದೇ ವಿನಾ ಸಂಬಂಧಗಳ ಕೃಷಿಯಿಂದಲ್ಲ. ಸಾರ್ವಜನಿಕರು ವಕೀಲಿ ವೃತ್ತಿಯನ್ನು ತಿರಸ್ಕಾರ ದೃಷ್ಟಿಯಿಂದ ನೋಡದ ಹಾಗೆ ವರ್ತಿಸುವುದು ವಕೀಲರುಗಳ ಕರ್ತವ್ಯವಾಗಿದೆ.

# 6

# ಮೊಕದ್ದಮೆಗಳ ಖರ್ಚುಗಳು

ನಮ್ಮ ನ್ಯಾಯಪ್ರದಾನ ವ್ಯವಸ್ಥೆಯ ವೈಶಿಷ್ಟ್ಯಗಳೆಂದರೆ, ಮೊಕದ್ದಮೆಗಳ ಖರ್ಚುಗಳು ಮತ್ತು ಅವುಗಳನ್ನು ಇತ್ಯರ್ಥ ಮಾಡುವಲ್ಲಿನ ವಿಳಂಬಗಳು. ಯಾವುದೇ ಮೊಕದ್ದಮೆಯಾಗಿರಲಿ, ಅದೊಂದು ದುಬಾರಿಯಾದ ಪ್ರಸಂಗ. ನ್ಯಾಯಾಲಯ ಶುಲ್ಕ, ಪ್ರಕರಣವನ್ನು ಸಿದ್ಧಪಡಿಸುವುದಕ್ಕೆ ಖರ್ಚು, ಹೆಚ್ಚುವರಿ ಖರ್ಚು, ಹಲವು ಬಗೆಯ ಚಿಲ್ಲರೆ ಖರ್ಚುಗಳು, ವಕೀಲರುಗಳಿಗೆ ಕೊಡಬೇಕಾದ ಫೀಸು, ಇವೆಲ್ಲವನ್ನೂ ಕಕ್ಷಿಗಾರ ಹೊರಬೇಕಾಗುತ್ತದೆ.

ನ್ಯಾಯ ಯಂತ್ರವನ್ನು ಸಮರ್ಪಕ ಸ್ಥಿತಿಯಲ್ಲಿಡುವುದಕ್ಕೆ ರಾಜ್ಯವು ಹೊರಬೇಕಾದ ಖರ್ಚು ಭಾರಿಯಾದದ್ದೇ. ನ್ಯಾಯಾಧೀಶರುಗಳ ಸಂಬಳಗಳು, ಅಧಿಕಾರಿಗಳ ಸಂಬಳಗಳು, ತೀರ್ಪುಗಳನ್ನು, ಡಿಕ್ರಿಗಳನ್ನು ವಾರಂಟುಗಳನ್ನು ಜಾರಿ ಮಾಡುವ ಸಿಬ್ಬಂದಿ ವರ್ಗದ ವೆಚ್ಚ, ಪೋಲೀಸರ ಮತ್ತು ಸೆರೆಮನೆಗಳ ವೆಚ್ಚ ಈ ಎಲ್ಲಾ ಖರ್ಚುಗಳನ್ನು ರಾಜ್ಯ ಸರ್ಕಾರ ಭರಿಸಬೇಕಾಗುತ್ತದೆ.

ನ್ಯಾಯ ಪರಿಪಾಲನೆಗೆ ಯುಕ್ತವಾದ ವ್ಯವಸ್ಥೆಯನ್ನು ಮಾಡಿ, ಶಾಂತಿಯನ್ನು ಕಾಪಾಡಿಕೊಂಡು ಬರುವುದು, ಯಾವುದೇ ವ್ಯವಸ್ಥಿತ ರಾಜ್ಯದ ಆದ್ಯ ಕರ್ತವ್ಯವಾಗಿದೆ. ಅಪರಾಧಿಕ ನ್ಯಾಯಾಲಯಗಳಿಗೆ ಸಾರ್ವಜನಿಕರ ಹಣವನ್ನು ಖರ್ಚು ಮಾಡಲಾಗುತ್ತಿದೆ. ಏಕೆಂದರೆ, ಆಪಾದಿತನನ್ನಾಗಲೀ ಅಥವಾ ಅಪರಾಧಿಯನ್ನಾಗಲೀ, ಖರ್ಚನ್ನು ಕೊಡುವಂತೆ ಮಾಡುವುದಕ್ಕೆ ಅವಕಾಶವಿಲ್ಲ. ದಂಡಗಳನ್ನು ವಿಧಿಸುವುದರಿಂದ ಬರಬಹುದಾದ ಸಣ್ಣ ಪುಟ್ಟ ಪಾವತಿಗಳಿಂದ, ನ್ಯಾಯಾಂಗವನ್ನು, ಸಿಬ್ಬಂದಿಯನ್ನು, ನ್ಯಾಯಾಲಯಗಳು; ಅಭಿಯೋಜಕರುಗಳನ್ನು, ಪೋಲೀಸ್ ಅಧಿಕಾರಿಗಳನ್ನು, ಮುಂತಾದವರನ್ನು ನಿಭಾಯಿಸಲು ಬೇಕಾಗುವ ಖರ್ಚುಗಳನ್ನು ಸರಿದೂಗಿಸಲಾಗುವುದಿಲ್ಲ. ಅಪರಾಧಗಳನ್ನು ಸ್ಥಳೀಯವಾಗಿಯೇ ವಿಚಾರಣೆ ಮಾಡಬೇಕು; ನ್ಯಾಯಾಲಯಗಳ ವ್ಯವಸ್ಥೆ, ದಂಡಾಧಿಕಾರಿಗಳ ಸಂಬಳಗಳು, ಸಿಬ್ಬಂದಿಗಳ ಸಂಬಳ, ಇತರ ಖರ್ಚುಗಳು, ನಿರೂಪಗಳನ್ನು ಸಿದ್ಧಪಡಿಸುವುದು, ಗಂಭೀರವಾದ ಪ್ರಕರಣಗಳಲ್ಲಿ ನಿರ್ಗತಿಕ ಆಪಾದಿತನ ಪರವಾಗಿ ವಕೀಲರನ್ನು ನೇಮಿಸುವುದು, ಇವುಗಳ ಖರ್ಚನ್ನೆಲ್ಲಾ ಸ್ಥಳೀಯ ಪ್ರಾಧಿಕಾರಗಳು ಮತ್ತು ರಾಜ್ಯ ಸರ್ಕಾರವೇ ಕೊಡಬೇಕೆಂಬುದು ಪ್ರಾಥಮಿಕ ನೀತಿಯಾಗಿದೆ. ಅಭಿಯೋಜನೆಯ ಖರ್ಚುಗಳೂ ಸಹ ರಾಜ್ಯದ ಮೇಲೆ ಬೀಳುತ್ತದೆ. ಅಪರಾಧಿಕ

ಆರೋಪಗಳ ಮೇಲೆ ಒಬ್ಬನನ್ನು ವಿಚಾರಣೆ ಮಾಡುವ ಖರ್ಚು ಅತಿ ಗಣನೀಯವಾಗಿದೆ. ಇದರಲ್ಲಿ ಅವನನ್ನು ಹಿಡಿಯುವ ಖರ್ಚು, ವಿಚಾರಣಾ ನಂತರ ಅವನಿಗೆ ಜೈಲು ಶಿಕ್ಷೆಯಾದರೆ ಅವನನ್ನು ಜೈಲಿನಲ್ಲಿಟ್ಟುಕೊಳ್ಳುವ ಖರ್ಚುಗಳು ಸೇರಿಲ್ಲ. ಭಾರತದ ಸಂಚಿತ ನಿಧಿಯಿಂದ ಕೊಡಲ್ಪಡುವ ಉಚ್ಚ ನ್ಯಾಯಾಲಯದ ನ್ಯಾಯಾಧೀಶರುಗಳ ಸಂಬಳಗಳನ್ನು ಹೊರತುಪಡಿಸಿ, ಬೇರೆ ಎಲ್ಲಾ ಖರ್ಚುಗಳನ್ನೂ ಸ್ಥಳೀಯ ಪ್ರಾಧಿಕಾರಗಳೇ ಕೊಡುತ್ತವೆ. ಹೆಚ್ಚುತ್ತಿರುವ ಜನಸಂಖ್ಯೆ, ಬಡತನ, ಕುಟುಂಬಗಳು ಒಡೆದು ಹೋಗುತ್ತಿರುವುದು, ಸಾಮಾಜಿಕ ಕಟ್ಟುಪಾಡುಗಳು ಕಳಚಿ ಬೀಳುತ್ತಿರುವುದು ಮತ್ತು ಅಧಿಕಾರಿ ವರ್ಗದ ಹೆದರಿಕೆ ತಪ್ಪಿಹೋಗಿರುವುದು ಇವುಗಳಿಂದಾಗಿ, ಅಪರಾಧಗಳ ಸಂಖ್ಯೆ ವೇಗವಾಗಿ ಹೆಚ್ಚಾಗುತ್ತಿದ್ದು, ತತ್ಪರಿಣಾಮವಾಗಿ ಅಪರಾಧಗಳ ಪತ್ತೆ ಹಚ್ಚುವಿಕೆ, ತನಿಖೆಗಳು, ಅಪರಾಧಿಗಳನ್ನು ಶಿಕ್ಷೆಗೆ ಗುರಿಪಡಿಸುವುದೂ ಹೆಚ್ಚಾಗುತ್ತಿದೆ.

ಹೇಗಾದರೂ, ಸಿವಿಲ್ ನ್ಯಾಯಾಲಯಗಳಲ್ಲಿ ಕಕ್ಷಿಗಾರನು ಮೂರು ಮುಖ್ಯ ಬಾಬುಗಳಿಗೆ ಹಣಕೊಡಬೇಕು:

i. ನ್ಯಾಯಾಲಯ ಶುಲ್ಕ; ಇದು ಬಹಳ ದುಬಾರಿಯಾಗಿದ್ದು, ರಾಜ್ಯಗಳಿಗೆ ಗಣನೀಯ ಪ್ರಮಾಣದ ಆದಾಯದ ಮೂಲವಾಗಿದೆ.

ii. ನ್ಯಾಯಾಲಯಗಳಲ್ಲಿ ತನ್ನ ಮೊಕದ್ದಮೆಯನ್ನು ಸಾಧಿಸುವುದಕ್ಕೆ ಅಥವಾ ತನ್ನ ವಿರುದ್ಧದ ಮೊಕದ್ದಮೆಯನ್ನು ಎದುರಿಸುವುದಕ್ಕೆ ಸಾಕ್ಷಗಳನ್ನು ಸಂಗ್ರಹಿಸುವುದು ಮತ್ತು ನ್ಯಾಯಾಲಯಕ್ಕೆ ಸಾಕ್ಷಿಗಳನ್ನು ಕರೆದುಕೊಂಡು ಬರುವ ಖರ್ಚು

iii. ವಕೀಲರುಗಳ ಫೀಸುಗಳು ಮತ್ತು ನಿರೂಪವನ್ನು ಸಿದ್ಧಪಡಿಸುವ ಖರ್ಚು ಮತ್ತು ಇತರ ಚಿಲ್ಲರೆ ಖರ್ಚುಗಳು

ಉಚ್ಚ ನ್ಯಾಯಾಲಯದ ಮತ್ತು ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶರ ಖರ್ಚುಗಳನ್ನು ಸಂಚಿತ ನಿಧಿಯಿಂದ ಕೊಡಬೇಕೆಂದೂ, ಸಿವಿಲ್ ನ್ಯಾಯಾಲಯದ ಎಲ್ಲ ಆಡಳಿತಾತ್ಮಕ ಖರ್ಚುಗಳನ್ನು ಮೊಕದ್ದಮೆಗಳನ್ನು ಹೂಡುವವರ ಮೇಲೆ ಹಾಕಬೇಕೆನ್ನುವ ಸೂತ್ರವನ್ನು ನಮ್ಮ ವ್ಯವಸ್ಥೆ ಅನುಸರಿಸಿದೆ. ನ್ಯಾಯಾಲಯ ಶುಲ್ಕದ ದರಗಳ ಪಟ್ಟಿಯು ರಾಜ್ಯದಿಂದ ರಾಜ್ಯಕ್ಕೆ ವ್ಯತ್ಯಾಸವಾಗುತ್ತದೆ. ಇತ್ತೀಚಿನ ಸರ್ವೋಚ್ಚ ನ್ಯಾಯಾಲಯದ ತೀರ್ಮಾನವೊಂದರಂತೆ, ರಾಜ್ಯವು ನ್ಯಾಯಾಲಯ ಶುಲ್ಕವನ್ನು ಎಷ್ಟು ಬೇಕಾದರೂ ಹೆಚ್ಚಿಸಬಹುದು.

ನಮ್ಮ ವ್ಯವಸ್ಥೆಯಲ್ಲಿ ಕಕ್ಷಿಗಾರರುಗಳ ಮೇಲೆ ಬೀಳುವ ಖರ್ಚು ಅಧಿಕವಾಗಿದ್ದು, ಅದಕ್ಕೆ ಕಾರಣಗಳಲ್ಲಿ ಕೆಲವು ಹೀಗಿವೆ:

i. ನಮ್ಮ ವಿಧಿವಿಧಾನಗಳ ರೀತಿ; ಎಲ್ಲ ಪ್ರಕರಣಗಳನ್ನೂ ವಾಚಿಕ ಸಾಕ್ಷ್ಯದಿಂದ ಸಾಧಿಸಬೇಕೆಂಬ ನಿಯಮ. ಈ ವಾಚಿಕ ಸಾಕ್ಷಿಯೋ ಸವಿಸ್ತಾರವಾಗಿ ನಡೆಯುತ್ತದೆ. ಆಮೇಲೆ ಅಷ್ಟೇ ದೀರ್ಘವಾದ ಪಾಟೀ ಸವಾಲು. ಆಮೇಲೆ ಮರು ವಿಚಾರಣೆ. ಸಾಕ್ಷಿಗಳ ವಿಚಾರಣೆ ತೆರೆದ ನ್ಯಾಯಾಲಯದಲ್ಲಿ ಆಗಬೇಕು.

ಅದೂ ಕೂಡ, ತೊಡಕಾದ ಸಾಕ್ಷ್ಯ ನಿಯಮಗಳ ಅನುಸಾರವೇ ಆಗಬೇಕು. ಇಂಥ ಪ್ರಕ್ರಿಯೆಯು ಎಷ್ಟೇ ಶ್ಲಾಘನೀಯವಾದರೂ, ವಿಚಾರಣಾ ಘಟ್ಟವನ್ನು ಲಂಬಿಸುವುದು ಇದೇನೆ. ಅಲ್ಲದೆ, ಇದಕ್ಕಾಗಿ ಉತ್ತಮವಾಗಿ ತರಬೇತಿ ಹೊಂದಿದ ವಕೀಲರೇ ಬೇಕು.

ii. ಹಿರಿಯ ವಕೀಲರು, ಕಿರಿಯ ವಕೀಲರು ಎಂದು ವಿಭಾಗಗೊಂಡಿರುವ ವಕೀಲಿ ವೃತ್ತಿ* ಇದರಿಂದಾಗಿ ಕಡೆಯ ಪಕ್ಷ ಎರಡು ಬಾರಿ ಫೀಸು ಕೊಡಬೇಕು.

iii. ನಮ್ಮ ನ್ಯಾಯ ವ್ಯವಸ್ಥೆಯ ಒಂದು ವಿಲಕ್ಷಣ ಸ್ಥಿತಿ. ಒಂದಲ್ಲ ಒಂದು ತರದ ಮೊಕದ್ದಮೆಗಳಲ್ಲಿ ತೆಗೆದುಕೊಳ್ಳುವ ಫೀಸುಗಳ ಮೇಲೆ ಮಾತ್ರ ವಕೀಲರುಗಳ ಸಂಪಾದನೆ ಅವಲಂಬಿತವಾಗಿದೆ. ಈ ವೃತ್ತಿಯು ಸರಿಯಾದ ಬಗೆಯ ಪ್ರವೇಶಾರ್ಥಿಯನ್ನು ಆಕರ್ಷಿಸಬೇಕಾದರೆ, ಅವರಿಗೆ ಸಿಗುವ ಪ್ರತಿಫಲ, ಅದನ್ನು ಅವಲಂಬಿಸುವವರ ಮೇಲೆ ಬೀಳುವ ಕೆಲಸ ಮತ್ತು ಜವಾಬ್ದಾರಿಗಳಿಗೆ ಸರಿದೂಗುವಂತಿರಬೇಕು. ಇದಕ್ಕೆ ಮೇಲೆ ನ್ಯಾಯವಾದಿವೃಂದಕ್ಕೆ ಭರ್ತಿಯಾದ ಮೇಲೆ, ಮೊದಲ ಕೆಲವು ವರ್ಷಗಳು, ಎಲ್ಲರಿಗೂ ಗೊತ್ತಿರುವ ಹಾಗೆ ಬಡಕಲು ವರ್ಷಗಳ ಬವಣೆ. ಇದರೊಂದಿಗೆ, ವಕೀಲನ ಆದಾಯದ ಏಕಮಾತ್ರ ಮೂಲವೆಂದರೆ, ಬಹುಮಟ್ಟಿಗೆ ಮೊಕದ್ದಮೆಗಳು ಮಾತ್ರ. ಹೀಗಾಗಿ ಅವನ ಫೀಸು ಅವಶ್ಯಕವಾಗಿ ಪೊಗದಸ್ತಾಗಿಯೇ ಇರಬೇಕು. ಭಾರಿ ಫೀಸು ಕೇಳುವುದಕ್ಕೆ ವಕೀಲರು ಕೊಡುವ ಸಮರ್ಥನೆ ಇದೇನೆ. ಈಗಂತೂ, ಮೊಕದ್ದಮೆಗೆ ತಗಲಬಹುದಾದ ಖರ್ಚು ಎಷ್ಟು ಆಗಬಹುದು ಎಂದು ಹೇಳಲು ಸುತರಾಂ ಸಾಧ್ಯವಿಲ್ಲ. ಖರ್ಚು ಎಷ್ಟು ಆಗುತ್ತದೆ ಎಂದು ಮುನ್ಸೂಚನೆ ಕೊಡಲು ಕೆಲವು ಸಲ ಕಷ್ಟವಾಗುತ್ತದೆ, ಕೆಲವು ಸಲ ಹೇಳಲು ಸಾಧ್ಯವೇ ಇಲ್ಲ. ಏಕೆಂದರೆ, ಎದುರು ಪಕ್ಷದವನು, ಮತ್ತು/ಅಥವಾ ಅವನ ವಕೀಲ, ಮತ್ತು ನ್ಯಾಯಾಲಯ ಯಾವ ರೀತಿಯಲ್ಲಿ ಪ್ರಕರಣವನ್ನು ನಡೆಸುತ್ತಾರೆ ಎಂಬುದರ ಮೇಲೆ ಎಲ್ಲ ಅವಲಂಬಿತವಾಗಿದೆ. 'ಯಾವ ರೀತಿ ನಡೆಸುತ್ತಾರೆ' ಎಂಬುದರಲ್ಲಿ ಕ್ಷುಲ್ಲಕ ಕಾರಣಗಳಿಗೆ ವಿಚಾರಣೆಯನ್ನು ಮುಂದೂಡುವುದೂ ಸೇರಿದೆ. ಹೀಗಾಗಿ, ಗೆದ್ದವನಿಗೆ ಆದ ಮನೋವ್ಯಥೆ, ಕಾಲವ್ಯಯ ಮತ್ತು ಖರ್ಚು ಎಲ್ಲಾ ಲೆಕ್ಕ ಹಾಕಿದರೆ, ಅವನು ನಿಜವಾಗಿಯೂ 'ಗೆದ್ದವನೇ' ಎಂಬುದನ್ನು ತಿಳಿಯಲು ಆಗುವುದಿಲ್ಲ. ಸಣ್ಣ ಪುಟ್ಟ ಮೊಬಲಗಿನ ದಾವೆಗಳು, ಅದನ್ನು ಹೂಡಿದ ಕಕ್ಷಿಗಾರರಿಗೆ ವಿಶೇಷ ಪ್ರತಿಕೂಲವಾಗಿರುತ್ತದೆ. ಮೊಕದ್ದಮೆಗೆ ತಗಲುವ ಖರ್ಚು, ವ್ಯಾಜ್ಯದಲ್ಲಿ ಕೇಳಿರುವ ಹಣವನ್ನೆಲ್ಲಾ ತಾನೇ ನುಂಗಿ ಹಾಕುತ್ತದೆ. ಒಮ್ಮೊಮ್ಮೆ ಖರ್ಚುಗಳು

---

* ಭಾಷಾಂತರಕಾರನ ಟಿಪ್ಪಣಿ: ಕರ್ನಾಟಕ ರಾಜ್ಯದಲ್ಲೆಲ್ಲೂ, ವಕೀಲಿ ವೃತ್ತಿ ಹೀಗೆ ವಿಭಾಗಗೊಂಡಿಲ್ಲ. ಬೆಂಗಳೂರಿನಲ್ಲಿರುವ ಉಚ್ಚ ನ್ಯಾಯಾಲಯದ ಕೆಲವೇ ಮಂದಿ 'ಹಿರಿಯ' ವಕೀಲರುಗಳನ್ನು ಬಿಟ್ಟರೆ, ಇನ್ನಾವ 'ಹಿರಿಯ' ವಕೀಲರೂ ಇಲ್ಲ. 'ಹಿರಿಯ' ವಕೀಲರು ಯಾರು ಎಂಬುದನ್ನು ನಾವು 'ವಕೀಲರುಗಳು' ಅಧ್ಯಾಯದಲ್ಲಿ ನೋಡಿದ್ದೇವೆ.

ಅದಕ್ಕೂ ಜಾಸ್ತಿಯೇ ಆಗುತ್ತದೆ. ಹಾಗಿಲ್ಲದಿದ್ದರೂ, ಖರ್ಚುಗಳು ವ್ಯಾಜ್ಯದ ಮೊಬಲಗನ್ನು ಎಷ್ಟು ತಿಂದುಹಾಕುತ್ತದೆಯೆಂದರೆ, ವ್ಯಾಜ್ಯ ಹೂಡಿದ್ದೇ ನಿರರ್ಥಕವಾಗುತ್ತದೆ. ಇದಕ್ಕೆ ವಿರುದ್ಧವಾಗಿ ಗಣನೀಯವಾಗಿ ಧನವಂತರಾಗಿರುವ ವ್ಯಕ್ತಿಗಳಿಗೆ ಅಥವಾ ಸಂಸ್ಥೆಗಳಿಗೆ, ಅಥವಾ ಎದುರು ಪಕ್ಷದವನಿಗೆ ಹೋಲಿಕೆ ಮಾಡಿದರೆ ಹೆಚ್ಚಿಗೆ ಧನವಂತರಾದವರಿಗೆ, ಮೊಕದ್ದಮೆಗೆ ತಗಲುವ ಖರ್ಚನ್ನು ಧಾರಾಳವಾಗಿ ಕೊಡಲು ಸಾಧ್ಯ. ಹೀಗಾಗಿ ಮೊಕದ್ದಮೆಯನ್ನು ಮುಂದುವರಿಸಲು ಅಥವಾ ಎದುರಿಸಲು, ಕಣ್ಣಿಗೆ ಕಂಡಂತೆ ಇಂಥ ಧನವಂತರಿಗೆ ಹೆಚ್ಚಿಗೆ ಅನುಕೂಲಗಳಿವೆ. ಮೊದಲನೆಯದಾಗಿ ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡಬಲ್ಲ ಆರ್ಥಿಕ ಶಕ್ತಿ ಇದೆ. ಕೇಳಿದಷ್ಟು ಫೀಸುಕೊಟ್ಟು ಉತ್ತಮ ವಕೀಲರುಗಳನ್ನು ನೇಮಿಸಿಕೊಳ್ಳುವ ಚೈತನ್ಯವಿದೆ. ಇದಕ್ಕೆ ಮೇಲೆ ಮೊಕದ್ದಮೆಗಳಲ್ಲಿ ಆಗುವ ವಿಳಂಬವನ್ನು ಇವರು ತಡೆದುಕೊಳ್ಳಬಲ್ಲರು. ಪಕ್ಷಗಾರನಿಗಿರುವ ಈ ಪ್ರತಿಯೊಂದು ಸಾಮರ್ಥ್ಯವೂ ಅವನ ಕೈನಲ್ಲಿ ಇರುವ ಒಂದೊಂದು ಶಕ್ತಿಯುತವಾದ ಆಯುಧವಿದ್ದಂತೆ. ಇಂಥ ಪರಿಸ್ಥಿತಿಯಲ್ಲಿ ಮೊಕದ್ದಮೆ ಎಂದರೆ ನಿಜಕ್ಕೂ ನಡುಕಬರುತ್ತದೆ. ಪಕ್ಷಗಾರನೊಬ್ಬ ಇನ್ನೊಬ್ಬನಿಗಿಂತ ಹೆಚ್ಚಿಗೆ ಖರ್ಚುಮಾಡಲು ಶಕ್ತನಾಗಿದ್ದರೆ, ಹೆಚ್ಚು ಪರಿಣಾಮಕಾರಿಯಾಗಿ ತನ್ನ ಮೊಕದ್ದಮೆಯನ್ನು ನಡೆಸಬಲ್ಲ. ನಿಷ್ಕ್ರಿಯ ನಿರ್ಣಯಕಾರರು, ಅವರ ಇತರ ಪ್ರಶಂಸನೀಯವಾದ ಗುಣ ವೈಶಿಷ್ಟಗಳೇನೇ ಇರಲಿ ತನಿಖೆ ಮಾಡುವುದಕ್ಕೂ, ಸಾಕ್ಷವನ್ನು ಮುಂದಿಡುವುದಕ್ಕೂ, ಪ್ರಕರಣವನ್ನು ಬೆಳೆಸುವುದಕ್ಕೂ, ವಾದ ಮಾಡುವುದಕ್ಕೂ, ಪಕ್ಷಗಾರರನ್ನೇ ಅವಲಂಬಿಸಿ, ಈ ಸಮಸ್ಯೆಯನ್ನು ಇನ್ನೂ ದೊಡ್ಡದು ಮಾಡುತ್ತಾರೆ.

iv. ಹೀರಿಂಗುಗಳಿಗೆ ನಿಗದಿಪಡಿಸಿದ ದಿನಗಳಿಲ್ಲದೇ ಇರುವುದರಿಂದ, ಪಕ್ಷಗಾರರೂ ಅವರ ಸಾಕ್ಷಿಗಳೂ ಮತ್ತು ಅವರ ವಕೀಲರುಗಳು, ಅವರ ಕೇಸನ್ನು ಕೂಗಿಸುವವರಗೆ ಕೆಲವು ಸಂದರ್ಭಗಳಲ್ಲಿ, ದಿನಗಟ್ಟಲೆ ಕಾಯಬೇಕಾಗುವುದರಿಂದ, ಅಪಾರವಾದ ಕಾಲ ವ್ಯಯ ಮತ್ತು ಹಣ ವ್ಯಯವಾಗುತ್ತದೆ. ಸಾಲದ್ದಕ್ಕೆ, ಒಂದು ಪ್ರಕರಣವು ವಿಚಾರಣೆ ಘಟ್ಟಕ್ಕೆ ತಲುಪಬೇಕಾದರೆ, ಎಷ್ಟು ದಿನಗಳು ಅಥವಾ ಎಷ್ಟು ವಾರಗಳು ಬೇಕು; ಅಥವಾ ತಲುಪಿದ ಮೇಲೂ ಮೊಕದ್ದಮೆಯು ಮುಂದೂಡಲ್ಪಡುತ್ತದೆಯೋ ಎಂಬುದನ್ನು ಗೊತ್ತುಪಡಿಸಿಕೊಳ್ಳಲು ಆಗದೆ ಇರುವುದರಿಂದ, ಇತರ ವ್ಯವಹಾರಗಳಿಗೆ ಗಟ್ಟಿ ಏರ್ಪಾಡುಗಳನ್ನು ಮಾಡಿಕೊಳ್ಳುವುದಕ್ಕೆ ಕಷ್ಟವೂ ಆಗುತ್ತದೆ.

v. ಈಗಿನ ವ್ಯವಸ್ಥೆಯಲ್ಲಿ, ಒಂದು ಪ್ರಕರಣ ಹಲವಾರು ಬಾರಿ ವಿಚಾರಣೆ ಆಗುವ ಸಂಭವವಿದೆಯಲ್ಲದೆ, ಮೇಲ್ಮನವಿಗಳಿಗೂ ಸಹ ಅಧಿಕವಾದ ಖರ್ಚು ತಗಲುತ್ತದೆ.

ಎಲ್ಲವೂ ಅಲ್ಲದಿದ್ದರೂ, ಮೇಲ್ಕಂಡ ಕಾರಣಗಳಲ್ಲಿ ಅನೇಕ ಕಾರಣಗಳು,

ಅಸ್ತಿತ್ವದಲ್ಲಿರುವ ನಮ್ಮ ಈಗಿನ ಕಾನೂನಿನ ವ್ಯವಸ್ಥೆಯಲ್ಲಿ ಮತ್ತು ಅದರ ದೀರ್ಘಕಾಲದ ಸಂಪ್ರದಾಯಗಳಲ್ಲಿ, ಆಳವಾಗಿ ಬೇರು ಬಿಟ್ಟಿವೆ. ಎಲ್ಲಿಯವರೆಗೆ ಈಗಿನ ವ್ಯವಸ್ಥೆಯ ಈ ಅತಿಮುಖ್ಯ ಸ್ವರೂಪಗಳನ್ನು ಉಳಿಸಿಕೊಂಡು ಬರುವ ಆಕಾಂಕ್ಷೆ ಇರುತ್ತದೆಯೋ, ಅಲ್ಲಿಯವರೆಗೆ, ಅದರ ನೇರ ಪರಿಣಾಮವಾಗಿ, ಮೊಕದ್ದಮೆಗಳಿಗೆ ಅಧಿಕವಾದ ಖರ್ಚು ತಗಲುತ್ತಲೇ ಇರುತ್ತದೆ.

ವ್ಯವಹಾರಿಕ ಮತ್ತು ಅಪರಾಧಿಕ ಮೊಕದ್ದಮೆಗಳನ್ನು ವಿಚಾರಣೆ ಮಾಡುವ ನ್ಯಾಯಾಲಯಗಳಲ್ಲದೆ, ಅನೇಕ ಶಾಸನಬದ್ಧ ನ್ಯಾಯಾಧಿಕರಣಗಳೂ ಅಸ್ತಿತ್ವದಲ್ಲಿ ಇವೆ. ಅವುಗಳೆಂದರೆ, ವರಮಾನ ತೆರಿಗೆ, ಮಾರಾಟ ತೆರಿಗೆ, ಸೀಮಾಸುಂಕ, ಏಕಸ್ವಾಮ್ಯ ಮತ್ತು ಪರಿಬಂಧಕ ವ್ಯಾಪಾರ ಪದ್ಧತಿಗಳ ಆಯೋಗ, ಕುಟುಂಬ ನ್ಯಾಯಾಲಯಗಳು, ಇತ್ಯಾದಿ. ಇಲ್ಲಿ, ನ್ಯಾಯಾಲಯ ಶುಲ್ಕವಿಲ್ಲದಿದ್ದರೂ ಕಕ್ಷಿಗಾರನು ವಕೀಲರಿಗೆ ಕೊಡಬೇಕಾದ ಫೀಸು ಮತ್ತು ಖರ್ಚುಗಳು ಗಣನೀಯ ಪ್ರಮಾಣದಲ್ಲೇ ಇರುತ್ತವೆ.

ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆಗಳು ಮತ್ತು ಎಲ್ಲರಿಗೂ ಸಮಾನ ನ್ಯಾಯ ಎನ್ನುವುದು ಸಂವೈಧಾನಿಕ ಆದ್ಯತೆಗಳಲ್ಲಿ ಮುಖ್ಯವಾದವುಗಳಲ್ಲಿ ಸೇರಿದ್ದರೆ, ಶೀಘ್ರವಾದ ಮತ್ತು ಸುಲಭ ಖರ್ಚಿನ ಕಾನೂನಿನ ವ್ಯವಸ್ಥೆ ಮತ್ತು ಪರಿಹಾರೋಪಾಯಗಳಿಗೆ ನೇರವಾದ ಪ್ರಮಾಣದಲ್ಲಿ ಈ ಆದ್ಯತೆಯನ್ನು ಆಚರಣೆಗೆ ತರಬಹುದೂ ಅಲ್ಲದೆ ಸಾಕ್ಷಾತ್ಕರಿಸಿಕೊಳ್ಳಲೂಬಹುದು. ನ್ಯಾಯವನ್ನು ದೊರಕಿಸಿಕೊಳ್ಳಲು, ಈ ದಿನಗಳಲ್ಲಿರುವಂತೆ, ಇಷ್ಟು ದುಬಾರಿಯಾದರೆ, ನ್ಯಾಯ ಪ್ರದಾನವು ಪರಿಣಾಮಕಾರಿಯೂ ಆಗುವುದಿಲ್ಲ, ನೈಜವೂ ಆಗುವುದಿಲ್ಲ.

ಕಾನೂನು ನೆರವನ್ನು ಒದಗಿಸುವುದರ ಮೂಲಕ ಸ್ವಲ್ಪ ಉಪಶಮನವನ್ನೇನೋ ಮಾಡಲಾಗಿದೆಯಾದರೂ, ಇದು ಅಧಿಕ ವೆಚ್ಚಗಳ ಸಾಗರದಲ್ಲಿ ಒಂದು ಜಲ ಬಿಂದುವಿನಂತೆ ಇದೆ.

# 7

# ನ್ಯಾಯಾಂಗದ ಸಮಸ್ಯೆಗಳು

ನಮ್ಮ ನ್ಯಾಯಾಲಯಗಳ ಮತ್ತು ಅವುಗಳ ಪ್ರಕ್ರಿಯೆಗಳ ಈಗಿನ ವ್ಯವಸ್ಥೆಯನ್ನು ನಾವು ಬ್ರಿಟಿಷರ ಉತ್ತರಾಧಿಕಾರಿಗಳಾಗಿ ಪಡೆದಿದ್ದೇವೆ. ಈ ವ್ಯವಸ್ಥೆಯನ್ನು 150 ವರ್ಷಗಳಿಂದ ಪ್ರಯೋಗಿಸುತ್ತಲೇ ಇದ್ದೇವೆ. ಆದರೆ ಪುರಾತನವಾದದ್ದೆಲ್ಲಾ ಪೂಜನೀಯವಲ್ಲ. ಅದನ್ನು ಆಚರಣೆಗೆ ತಂದ ಹೊಸದರಲ್ಲಿ ಅದು ಚೆನ್ನಾಗಿಯೇ ಹೊಂದಾಣಿಕೆಯಾಗಿತ್ತು. ಈಗಲೂ ಕೂಡ ಅದು ಉತ್ತಮ ವ್ಯವಸ್ಥೆಯಾಗಿಯೇ ಇದೆ. ಆದರೆ ಯಾವುದೇ ಇತರ ವ್ಯವಸ್ಥೆಯಂತೆ ಅದು ಹಳೆಯದಾಗಿದೆ, ಪರಿಣಾಮಕಾರಿಯಾಗಿಲ್ಲ ಮತ್ತು ಸಮಾಜದ ಬದಲಾವಣೆಯಾಗುತ್ತಿರುವ ಆದರ್ಶಗಳನ್ನು ನಿಭಾಯಿಸಲು ಆಗುತ್ತಿಲ್ಲ. ಅದಕ್ಕೆ ಈಗ ಹೊಸ ರಕ್ತ ನೀಡಬೇಕಾಗಿದೆ. ಎಷ್ಟು ಬೇಗ ಕೊಟ್ಟರೆ ಅಷ್ಟು ಒಳ್ಳೆಯದು. ಭಾರತದ ಮೊದಲನೆ ಅಟಾರ್ನಿ-ಜನರಲ್ ಅವರಾಗಿದ್ದ ದಿ. ಶ್ರೀ ಎಮ್.ಸಿ. ಸೆಟಲ್‌ವಾಡ್ ಅವರು ಭಾರತದ ಬಾರ್ ಅಸೋಸಿಯೇಷನ್ ಅನ್ನು ಉದ್ದೇಶಿಸಿ ಮಾತನಾಡುತ್ತಾ ಹೀಗೆ ಹೇಳಿದ್ದಾರೆ:

> "ಬ್ರಿಟಿಷ್ ನ್ಯಾಯಾಡಳಿತ ವ್ಯವಸ್ಥೆ ನಿಜಕ್ಕೂ ಬಹಳ ಚೆನ್ನಾಗಿತ್ತು. ಒಳ್ಳೆಯ ಫಲಿತಾಂಶಗಳನ್ನು ಕೊಟ್ಟಿತು. ಆದರೆ ಅದರ ದೋಷಗಳು ಎರಡು ತರದಲ್ಲಿ ವೃದ್ಧಿಯಾಗಿವೆ. ನಾವೀಗ ಒಂದು ಪ್ರಜಾಪ್ರಭುತ್ವ. ನಮ್ಮ ದೇಶ ಈಗ ಬಹಳ ಜನನಿಬಿಡವಾದ ದೇಶ. ನ್ಯಾಯ ಪರಿಪಾಲನೆ ವಿಧಾನದಲ್ಲಿ ಈಗ ಮೂಲಭೂತವಾದ ಬದಲಾವಣೆ ಮಾಡಬೇಕಾದ ಅವಶ್ಯಕತೆ ಇದೆ. ಜನಗಳು ಸುಲಭವಾಗಿ ಹೋಗಬಹುದಾದಂಥ ನ್ಯಾಯಾಲಯಗಳು ನಮಗೆ ಬೇಕು. ಎಷ್ಟು ಸಾಧ್ಯವೋ ಅಷ್ಟು ಕಡಿಮೆ ಖರ್ಚಿನಲ್ಲಿ ನ್ಯಾಯ ದೊರೆಯುವಂತಾಗಬೇಕು. ಶೀಘ್ರ ನ್ಯಾಯವಷ್ಟೇ ಸಾಕಾಗುವುದಿಲ್ಲ. ನಮಗೆ ಬೇಕಾಗಿರುವುದು ಅದನ್ನು ಸುಲಭವಾಗಿ ಎಟುಕಿಸಿಕೊಳ್ಳುವ ಬಗ್ಗೆ ಮತ್ತು ಶೀಘ್ರವಾದ ವಿಲೇವಾರಿ; ವ್ಯವಸ್ಥೆಯನ್ನು ಸಂಪೂರ್ಣವಾಗಿ ದುರಸ್ತು ಮಾಡಿದರೆ ಮಾತ್ರ ಇದನ್ನು ನಾವು ಸಾಧಿಸಬಹುದು."

ಇದನ್ನು ಅವರು 'ಹೇಳಿ ನಲವತ್ತು ವರ್ಷಗಳು ಸಂದುಹೋದವು. ನಾವೇನಾದರೂ ಅಭಿವೃದ್ಧಿಯನ್ನು ಸಾಧಿಸಿದ್ದೇವೆಯೆ ?ಮುಖ್ಯ ನ್ಯಾಯಾಧೀಶರಾಗಿದ್ದ,

ಶ್ರೀ ರಂಗನಾಥ ಮಿಶ್ರಾ ಅವರು ಆಶಾವಾದದ ಧ್ವನಿಯಲ್ಲಿ ತಮ್ಮ 1990ರ ಕಾನೂನು ದಿನಾಚರಣೆ ಭಾಷಣದಲ್ಲಿ ಹೀಗೆ ಹೇಳಿದ್ದರು:

> "ಈ ನಾಲ್ವತ್ತು ವರ್ಷಗಳಲ್ಲಿ ಕಾನೂನು ಅನೇಕ ಮುಖಗಳಲ್ಲಿ ಗಣನೀಯವಾಗಿ ಮುಂದುವರೆದಿದೆ. 1981ನೆಯ ಇಸವಿಯಷ್ಟು ಮುಂಚೆಯೇ 'ಪ್ರಶ್ನಿಸುವ ಸ್ಥಾನ'ದ ತಡೆಯನ್ನು ಉದಾರೀಕರಣಗೊಳಿಸಲಾಯಿತು. ಅಲ್ಲಿಂದೀಚೆಗೆ ಮೊಕದ್ದಮೆಯ ರೀತಿ ರಿವಾಜುಗಳಲ್ಲಿ ಒಂದು ದೊಡ್ಡ ಪ್ರಮಾಣದ ಬದಲಾವಣೆ ಉನ್ನತ ನ್ಯಾಯಾಲಯಗಳಲ್ಲಿ ಆಗಿದೆ. ಈ 8-9 ವರ್ಷಗಳಲ್ಲಿ ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆಗಳು ಜನಪ್ರಿಯವಾಗಿವೆ. ಸಮುದಾಯದ ಉದ್ದೇಶಗಳನ್ನು ನೆರವೇರಿಸಿಕೊಳ್ಳುವುದಕ್ಕೆ ಬಹುಮಟ್ಟಿಗೆ ಉಪಯೋಗವಾಗಿವೆ. ಇಂಥ ಪ್ರಕರಣಗಳ ಗುಂಪಿನಲ್ಲೇ ತಾನು ಒಂದು ಸಮರ್ಥ ಸಾಮಾಜಿಕ ಲೆಖ್ಖ ಪರೀಕ್ಷಕನೆಂಬುದಾಗಿ ನ್ಯಾಯಾಲಯ ಪ್ರದರ್ಶಿಸಿದೆ. ಸಾಮಾಜಿಕ ಜೀವನದಲ್ಲಿ ನ್ಯಾಯಿಕ ವಿಧಾನದ ಒತ್ತು ಬಹಳ ಸ್ಪಷ್ಟವಾದುದೂ, ದೃಷ್ಟಿಗೋಚರವಾದದ್ದೂ ಆಗಿದೆ. ನ್ಯಾಯಿಕ ವ್ಯವಸ್ಥೆಯು ತಂದುಕೊಡಬಲ್ಲ ಪ್ರಯೋಜನವೇನೆಂದು ಜನಸಾಮಾನ್ಯನಿಗೆ ಬಹುಶಃ ಗೊತ್ತಾಗಿರಬಹುದು.
>
> ನ್ಯಾಯಿಕ ವ್ಯವಸ್ಥೆಯಲ್ಲಿ ಬಿರುಕು ಬಿಟ್ಟಿರುವುದಕ್ಕೆ, ದಣಿವಾದ ಕುರುಹುಗಳನ್ನು ತೋರಿಸುತ್ತಿರುವುದಕ್ಕೆ, ಒಂದಕ್ಕಿಂತ ಹೆಚ್ಚು ಕಾರಣಗಳಿವೆಯೆಂದು ಪ್ರಶಂಸೆಮಾಡುವವರು ಹಾಗೂ ಟೀಕೆ ಮಾಡುವವರು ಅನೇಕ ಬಾರಿ ಸೂಚಿಸಿದ್ದಾರೆ. ಆದ್ದರಿಂದ, ಪರಿಸ್ಥಿತಿಯೊಡನೆ ಚುರುಕಾಗಿ ಮತ್ತು ಜಾಣತನದಿಂದ ವ್ಯವಹರಿಸಬೇಕಾದ ಅವಶ್ಯಕತೆ ಇದೆ."

ಬಹುಮಟ್ಟಿಗೆ ಅನಿವಾರ್ಯವಾದ, 'ಕಾನೂನಿನಂತೆ ನ್ಯಾಯ' ಎನ್ನುವ ತತ್ತ್ವದ ಅಸಮರ್ಪಕತೆಯನ್ನು ನಿವಾರಿಸಿದರೆ ಮಾತ್ರ ಸಾಕಾಗುವುದಿಲ್ಲ. ಆದರೆ, ಈಗ ರೂಢಿಯಲ್ಲಿರುವ, ವ್ಯಕ್ತಿ ಭಾವದ ಮೇಲೆ ಆಧಾರಿತವಾದ ಧ್ಯೇಯವೇ ಮೇಲುಗೈ ಪಡೆದಿರುವವರೆಗೂ, ವ್ಯಾಪಕವಾದ ಬದಲಾವಣೆಗಳನ್ನು ತರಲು ಖಂಡಿತ ಅಸಾಧ್ಯ. ಎಲ್ಲಿಯವರೆಗೆ ವ್ಯಕ್ತಿಗತವಾದ ಹಿತಾಸಕ್ತಿಗೆ ಸಮಾಜದ ಹಿತಾಸಕ್ತಿಗಿಂತ ಹೆಚ್ಚು ಒಲವು ತೋರಿಸಲಾಗುತ್ತದೋ, ಅಲ್ಲಿಯವರೆಗೆ, ವ್ಯಾವಹಾರಿಕ ನ್ಯಾಯ ಮತ್ತು ಅಪರಾಧಿಕ ನ್ಯಾಯಗಳೆರಡೂ ಬಹುತೇಕ ಅಸಮರ್ಪಕವಾಗಿ ಉಳಿಯಲೇ ಬೇಕಾಗುತ್ತದೆ. ನ್ಯಾಯಿಕ ಅಸಮರ್ಪಕತೆಯ ಬಗ್ಗೆ ಮಾತನಾಡುವವರಿಗೆ ಅದರ ಪರಿಕಲ್ಪನೆಯ ತೀರಾ ಕೃತಕವಾದ ಅರ್ಥ, ಸಾಮಾನ್ಯವಾಗಿ ಅರಿವಾಗುವುದಿಲ್ಲ. ವ್ಯಾವಹಾರಿಕ ಮೊಕದ್ದಮೆಗಳು, ತೀರ್ಪುಕೊಡುವ ಹಂತವನ್ನು ತಲುಪಿ, ಎಷ್ಟು ಬೇಗ ಸಾಧ್ಯವೋ ಅಷ್ಟು ಬೇಗ ಆ ತೀರ್ಪನ್ನು ಜಾರಿಗೆ ಕೊಡುವುದಾದರೆ, ಆಗ ಕಾನೂನು ಪರಿಣಾಮಕಾರಿಯಾಗುತ್ತದೆ. ತದನಂತರ ಅದರ ಕಾರ್ಯಸಾಮರ್ಥ್ಯವು ಪ್ರಾಥಮಿಕ ಪರಿಗಣನೆಗೆ ಬರುವುದು ನಿಂತು ಹೋಗುತ್ತದೆ. ಈಗಿನ ಅವಶ್ಯಕ ಉಪಸಿದ್ಧಾಂತವಾದ ಮಾನವೀಯತಾ ಭಾವದ ಫಲಶ್ರುತಿಯಾಗಿ, ತೀರ್ಪನ್ನು

ಜಾರಿಗೊಳಿಸುವುದಕ್ಕೆ ಎಡರುತೊಡರುಗಳ ಸರಮಾಲೆಯೇ ಹುಟ್ಟಿಕೊಳ್ಳುತ್ತದೆ; ಅನೇಕ ವೇಳೆ ಪ್ರಕ್ರಿಯೆಗಳಿಂದಾಗುವ ಉಪಯೋಗವನ್ನು ಪಡೆದುಕೊಂಡು, ಸಾಲಗಾರನ ಆಸ್ತಿಯನ್ನು ಸಾಲಿಗನಿಗೆ ಎಟುಕಲಾರದ ಹಾಗೆ ಮಾಡಲಾಗುತ್ತದೆ. ಇದರಿಂದಾಗಿ, ಸಾಲಗಾರನು ಬೇರೆಯವರಿಗೆ ಆಸ್ತಿಯನ್ನು ವರ್ಗಾಯಿಸಬಹುದು ಅಥವಾ ಜಾರಿ ಮಾಡದ ಹಾಗೆ ವಿನಾಯಿತಿಯನ್ನು ಪಡೆದುಕೊಳ್ಳಬಹುದು. ಆದರೆ ಸಾಲಗಾರನನ್ನೇ ಹಿಡಿದುಕೊಳ್ಳಲಾಗುವುದಿಲ್ಲ. ಈ ದಿಸೆಯಲ್ಲಿ ಹಿಂದಿನ ಶತಮಾನಗಳ ಕಾನೂನೇ ತಾತ್ಕಾಲಿಕವಾಗಿ ಬಂಧಿಸುವುದನ್ನು ಅಡಿಗಡಿಗೆ ಮಾನ್ಯ ಮಾಡಿತ್ತು. ಸಾಲ ವಾಪಸ್ ಮಾಡದಿದ್ದರೆ ಜೈಲು ಎಂಬುದು ಖಂಡಿತವಾಗಿ ಹೆಚ್ಚು ಪರಿಣಾಮಕಾರಿಯಾಗಿತ್ತು, ಆದರೆ ಹಳೆಯ ಕಾನೂನಿಗೆ ಹಿಂದಿರುಗುವುದು ಯಾರಿಗೂ ಒಪ್ಪಿಗೆಯಾಗುವಂಥದಲ್ಲ* ಏನೇ ಆದರೂ ಸಾಲಗಾರನ ಆರ್ಥಿಕ ಬಡತನ ಕಾನೂನಿನ ಕಾರ್ಯ ಸಾಮರ್ಥ್ಯವನ್ನು ಕುಂಠಿತಗೊಳಿಸುತ್ತದೆ. ಅಪರಾಧಿಕ ನ್ಯಾಯದಲ್ಲಿ ಪರಿಸ್ಥಿತಿಯು ಸ್ವಲ್ಪಮಟ್ಟಿಗೆ ಹಿಂದುಮುಂದಾಗಿದೆ. ಅಪರಾಧ ಮಾಡಿದವನ ವಿರುದ್ಧ ಒಮ್ಮೆ ತೀರ್ಪು ಕೊಡಲಾಯಿತೆಂದರೆ, ಅದು ಜಾರಿಯಾಗುವುದು ಹೆಚ್ಚು ಸಂಭವನೀಯವಾಗುತ್ತದೆ. ಆದರೆ ವ್ಯಕ್ತಿಯ ಬಗ್ಗೆ ಚಿಂತೆ, ತೀರ್ಪು ಕೊಡುವ ವಿಧಾನದಲ್ಲಿ ವ್ಯಕ್ತವಾಗುತ್ತದೆ. ಉಪಬಂಧಗಳು ಕೇವಲ ಪ್ರಕ್ರಿಯಾರೂಪದ ರಕ್ಷಣಾಕವಚಗಳೆಂದು ಪರಿಗಣಿಸಲಾಗಿಲ್ಲ; ಅವು ಮಹಾ ಸಂವೈಧಾನಿಕ ಹಕ್ಕುಗಳು ಕೂಡಾ ಆಗಿವೆ. ನಿಜಕ್ಕೂ ಸಂವೈಧಾನಿಕ ಹಕ್ಕುಗಳಾದ ಅವುಗಳನ್ನು ಅನೇಕ ಶತಮಾನಗಳ ರಕ್ತಪಾತದ ನಂತರ ರೂಪಿಸಲಾಗಿದೆ; ಯಾವುದೇ ಪ್ರಜಾಪ್ರಭುತ್ವದಲ್ಲಿ ಅವನ್ನು ಪರಿತ್ಯಾಗ ಮಾಡುವುದನ್ನು ಗಂಭೀರವಾಗಿ ಪರಿಗಣಿಸುವುದಿಲ್ಲ. ಆದರೆ ಪರಿಹರಿಸಲಾಗದ ಉಭಯಸಂಕಟವೆಂದರೆ, ಯಾವಾಗಲೋ ಒಮ್ಮೆ ಕಾನೂನಿನ ಚಕ್ರವ್ಯೂಹದಲ್ಲಿ ಸಿಕ್ಕಿ ಹಾಕಿಕೊಳ್ಳುವ ಸಾಮಾನ್ಯ ಪೌರನಿಗೆ ಇದರಿಂದ ಪ್ರಯೋಜನವಾಗುತ್ತದೆಯಾದರೂ, ಅಪರಾಧವನ್ನೇ ಕಸುಬು ಮಾಡಿಕೊಂಡ ಅಪರಾಧಿಗೂ ಅದರಿಂದ ಅನುಕೂಲವಾಗುತ್ತದೆ. ಅವನೋ, ದೀರ್ಘಕಾಲದ ಅನುಭವದಿಂದ ಕಾನೂನು ಒದಗಿಸುವ ಎಲ್ಲಾ ರಕ್ಷಣೆಗಳನ್ನೂ ಕಂಡುಕೊಂಡಿರುತ್ತಾನೆ.

ಮೂಲಭೂತ ಸಾಮಾಜಿಕ ಸಂಸ್ಥೆಗಳಲ್ಲಿ, ಕ್ರಾಂತಿಕಾರಕ ಬದಲಾವಣೆಗಳನ್ನು ತರುವುದು ಕಷ್ಟ ಸಾಧ್ಯವಾದುದರಿಂದ ನ್ಯಾಯ ಯಂತ್ರವನ್ನು ಸಂದರ್ಭಕ್ಕೆ ತಕ್ಕ ಹಾಗೆ ಹೊಂದಾಣಿಕೆ ಮಾಡಿಕೊಳ್ಳುವುದಕ್ಕೆ ನ್ಯಾಯಿಕ ಆಡಳಿತವು ಗಮನಕೊಡುತ್ತದೆ. ಸಾರಭೂತವಾದ ಕಾನೂನಿನ ಬದಲಾವಣೆಗಳಿಗಿಂತ ಪ್ರಕ್ರಿಯೆಗಳಲ್ಲಿ ಸುಧಾರಣೆಯಾಗುವುದು ಹೆಚ್ಚು ಸಂಭವನೀಯವಾಗಿರುತ್ತದೆ. ಬಹುಶಃ ಇದರಿಂದಾಗಿಯೇ ಫಲಿತಾಂಶಗಳು ಪದೇ ಪದೇ ಅಪರಿಪೂರ್ಣವಾಗಿಯೇ ಉಳಿಯುತ್ತವೆ.

---

*ಭಾಷಾಂತರಕಾರನ ಟಿಪ್ಪಣಿ: ಸಿವಿಲ್ ಪ್ರಕ್ರಿಯಾ ಸಂಹಿತೆಯ ಆದೇಶ 21 ನಿಯಮ 11(ಎ) ಪ್ರಕಾರ ಡಿಕ್ರಿಯನ್ನು ಜಾರಿ ಮಾಡುವ ವಿಧಾನಗಳಲ್ಲಿ, ಡಿಕ್ರಿ ಸಾಲಗಾರನನ್ನು ಬಂಧಿಸಿ, ಸಿವಿಲ್ ಜೈಲಿನಲ್ಲಿ ಇಡುವುದಕ್ಕೆ ಈಗಲೂ ಅವಕಾಶವಿದೆ.

ಸಾರಭೂತವಾದ ಕಾನೂನಿಗೂ ಮತ್ತು ಪ್ರಕ್ರಿಯೆಗೂ ಇರುವ ವ್ಯತ್ಯಾಸ ಬಹುತೇಕ ಕೃತಕವಾದುದು ಎನ್ನುವುದು ನಿಜ. ಪ್ರಕ್ರಿಯೆಯಲ್ಲಿ ಮಾಡಿದ ಸುಧಾರಣೆಗಳು ಸಾರಭೂತವಾದ ಹಕ್ಕನ್ನು ತಟ್ಟುತ್ತವೆ; ಆದರೆ ಅಸ್ಪಷ್ಟ ಸ್ವಭಾವದ ಹಕ್ಕುಗಳನ್ನು ಅವು ಖಂಡಿತ ಉತ್ತಮಗೊಳಿಸಲಾರವು. ಸಾಮಾನ್ಯವಾಗಿ ಹೊಸ ನ್ಯಾಯಾಲಯಗಳ ರಚನೆ ಮತ್ತು ಆಗಲೇ ಅಸ್ತಿತ್ವದಲ್ಲಿರುವ ನ್ಯಾಯಾಲಯಗಳಿಗೆ ಹೆಚ್ಚುವರಿ ನ್ಯಾಯಾಧೀಶರುಗಳನ್ನು ನೇಮಕ ಮಾಡುವುದು, ಸುಧಾರಣೆಗಳಲ್ಲಿನ ಅಡಿಗಡಿಯ ಔಚಿತ್ಯವಾಗಿದೆ. ಹೊಸ ಸ್ಥಾನಗಳನ್ನು ತುಂಬಿಸಲು ಅವಕಾಶ ಒದಗಿಸುವ ಮೂಲಕ ತಮ್ಮನ್ನು ಓಲೈಸುವವರ ಸಂಖ್ಯೆ ಹೆಚ್ಚಾಗುತ್ತದೆಂಬ ಕಾರಣಕ್ಕಾಗಿ, ರಾಜಕಾರಣಿಗಳಲ್ಲಿ ಇದು ಹೆಚ್ಚು ಜನಪ್ರಿಯವಾಗಿದೆ. ಪ್ರಕ್ರಿಯೆಯಲ್ಲಿ ಮೆಟ್ಟಲು ಮೆಟ್ಟಲಾಗಿ ಮಾಡುವ ಬದಲಾವಣೆಗಳು, ನ್ಯಾಯಾಸ್ಥಾನಗಳಲ್ಲಿ ಸ್ವಲ್ಪ ಸಮಯದವರೆಗಾದರೂ ಕಿಕ್ಕಿರಿತವನ್ನು ಹೆಚ್ಚು ಮಾಡುವ ಕುತೂಹಲಕಾರಿ ಫಲಿತಾಂಶವನ್ನುಂಟುಮಾಡುತ್ತದೆ. ಇವುಗಳ ಪರಿಣಾಮವನ್ನೆದುರಿಸಲು ಅನೇಕ ವೇಳೆ ಬಹಳಷ್ಟೇ ಕಾನೂನಿನ ಕ್ರಮವನ್ನು ಕೈಗೊಳ್ಳಬೇಕಾಗುತ್ತದೆ. ಪ್ರಕ್ರಿಯೆಯ ಸುಧಾರಣೆಯಲ್ಲಿ ಮೂಲಭೂತವಾದ ಒಗಟೆಂದರೆ ಯಾವುದೇ ನಿರ್ದಿಷ್ಟವಾದ ಸಾಧನವೊಂದನ್ನು ಬಿಡಲಾಗದೇ ಇರುವುದು. ಒಂದೇ ತೆರನಾದ ಉದ್ದೇಶಗಳನ್ನು ಸಾಧಿಸಲು ಗಣನೀಯ ಪ್ರಮಾಣದಲ್ಲಿ ಮಾರ್ಪಾಟುಗಳನ್ನು ಮಾಡಿಕೊಳ್ಳಲು ಕಾನೂನಿನ ಪ್ರಯೋಗ ತಂತ್ರಗಳು ಸಾಧ್ಯಗೊಳಿಸುವುದರಿಂದ ಕಾನೂನಿನ ಮೂಲಭೂತ ಉದ್ದೇಶಗಳನ್ನು ಸಾಧಿಸುವುದಕ್ಕಾಗಿ ಯಾವುದೇ ರೀತಿಯ ಪ್ರಕ್ರಿಯೆಯನ್ನು ಅಳವಡಿಸಿಕೊಂಡರೂ ಅದನ್ನು ಕೆಲಸ ಮಾಡಿಸುವುದಕ್ಕೆ ಮನಸ್ಸಿದ್ದರೆ ಅದು ಕೆಲಸ ಮಾಡುತ್ತದೆ.

ತದ್ವಿರುದ್ಧವಾಗಿ ಜನಗಳು ತಮ್ಮ ವ್ಯವಹಾರಿಕ ಋಣಗಳನ್ನು ತೀರಿಸುವುದು ಮತ್ತು ಅಪರಾಧ ಮಾಡದೆ ದೂರ ಉಳಿಯುವುದು ಕಾನೂನಿನ ದಂಡನೆಯ ಭಯದಿಂದ ಮಾತ್ರವಲ್ಲದೆ ನೈತಿಕವಾದ ಮತ್ತು ಕಾರ್ಯಸಾಧುವಾದ ಎಣಿಕೆಗಳಿಂದಲೂ ಸಾಧ್ಯ ಎಂಬುದನ್ನು ನಾವು ನೆನಪಿನಲ್ಲಿಟ್ಟುಕೊಳ್ಳಬೇಕು. ಈ ಆಧುನಿಕ ಪ್ರವೃತ್ತಿಗೆ ಯಾವ ವಿಧವಾದ ಸಾಮಾಜಿಕ ನಿಯಂತ್ರಣವೂ ಖಂಡಿತವಾಗಿ ಇಲ್ಲ. ಅಂತಿಮವಾಗಿ, ನ್ಯಾಯ ಪರಿಪಾಲನೆಯಲ್ಲಿರುವ ದೋಷಗಳು ಕಡೆಯ ಪಕ್ಷ ವ್ಯವಹಾರಿಕ ವಿಷಯಗಳಲ್ಲಿ ಮೊಕದ್ದಮೆಗಳನ್ನು ಹೂಡುವವುದಕ್ಕೆ ಹಿಂದೆಗೆಯುವಂತೆ ಮಾಡುವ ಮತ್ತು ಸಂಧಾನ ಮಾರ್ಗದ ಸಾಧ್ಯತೆಗಳನ್ನೆಲ್ಲಾ ಮುಗಿಸುವಂತೆ ಮಾಡುವ ಸಾಮಾಜಿಕ ಮೌಲ್ಯವನ್ನು ಸ್ವಲ್ಪ ಹೊಂದಿರಬಹುದು. ಸಂಗ್ರಹಣ ಶೀಲತೆಯ ಸಮಾಜದಲ್ಲಿ, ಕಾನೂನು ವ್ಯವಹಾರಗಳ ದಾರಿಯಲ್ಲಿ ಒಂದಿಷ್ಟು ಮುಳ್ಳುಗಳಿರುವುದು ಬಹುಶಃ ಅಪೇಕ್ಷಣೀಯವಾದದದ್ದೇ.

## ನ್ಯಾಯಾಲಯಗಳಲ್ಲಿನ ನೆನೆಗುದಿಗೆ ಬಿದ್ದಿರುವ ಪ್ರಕರಣಗಳು

ನ್ಯಾಯ ಪರಿಪಾಲನೆಯ ಬಗ್ಗೆ ಜನಗಳಲ್ಲಿ ಇರುವ ಅತೃಪ್ತಿ, ಹಿಂದಿನ ಶತಮಾನಗಳಲ್ಲಿದ್ದುದಕ್ಕಿಂತ ಇಪ್ಪತ್ತನೇ ಶತಮಾನದಲ್ಲಿ ಕಡಿಮೆಯಾಗೇನೂ ಇಲ್ಲ. ಜನಜೀವನವು ಸಾಗುತ್ತಿರುವ ಗತಿಯಲ್ಲಿ, ನಿರ್ದಿಷ್ಟವಾಗಿ ವೇಗ ವೃದ್ಧಿಯಾಗುತ್ತಿರುವ

ಕಾಲದಲ್ಲಿ, ಈಗ ಇರುವ ಅತೃಪ್ತಿಗೆ ಕಾರಣವೇನೆಂಬುದನ್ನು ಸಾಂಸ್ಥಿಕ ಬದಲಾವಣೆಗಳಾದ ನೆಲೆಯಲ್ಲಿ ವಿವರಿಸಬಹುದು. ಆದರೆ ಈ ಬದಲಾವಣೆ ಸ್ಥಿರವಾಗಿರುವಂಥದ್ದಾದರೆ ಬದಲಾಯಿಸುತ್ತಿರುವ ಸ್ಥಿತಿ-ಗತಿಗಳಿಂದಲೇ ಈ ಅತೃಪ್ತಿ ಸಂಪೂರ್ಣವಾಗಿ ಉಂಟಾಯಿತೆಂದು ಹೇಳಲಾಗುವುದಿಲ್ಲ. ಇನ್ನೂ ಹೆಚ್ಚಿನ ಮೂಲಭೂತವಾದ ಅಂಶಗಳು ಇಲ್ಲದಿದ್ದಲ್ಲಿ ಮಾತ್ರ, ಕೇವಲ ಸಾಮಾಜಿಕ ಬೇಧಕಾರಕಗಳ ನೆಲೆಯಲ್ಲಿ ಕೊಡುವ ವಿವರಣೆಯು ಸಾಕಾಗಬಹುದು. ಉದಾಹರಣೆಗೆ: ಈಗಿನ ನ್ಯಾಯಾಲಯಗಳಲ್ಲಿ ನ್ಯಾಯದ ಬುಡವನ್ನೇ ಸಿಡಿಸಿ ಅಲುಗಾಡಿಸುವ ಸುಳ್ಳು ಸಾಕ್ಷ್ಯದ ವ್ಯಾಪಕತೆಗೂ, ಧಾರ್ಮಿಕ ವಿಚಾರಗಳ ಪ್ರಭಾವ ಕ್ಷೀಣಿಸುತ್ತಿರುವುದಕ್ಕೂ ಸಂಬಂಧ ಕಲ್ಪಿಸಲು ಪ್ರೇರೇಪಣೆಯಾಗುತ್ತದೆ. ಆದರೆ ಸುಳ್ಳು ಸಾಕ್ಷ್ಯ ಹೇಳುವುದೇನೂ ಆಗೊಮ್ಮೆ ಈಗೊಮ್ಮೆ ಮಾಡುವ ಅಪರಾಧವಲ್ಲ. ಮರಣಾನಂತರದ ಲೋಕದ ಶಿಕ್ಷೆಯ ಹೆದರಿಕೆಗಿಂತ ಈ ಪ್ರಪಂಚದ ಶಿಕ್ಷೆಯ ಹೆದರಿಕೆಯೇನೂ ಕಡಿಮೆ ಶಕ್ತಿಶಾಲಿಯಾದ ನಿಗ್ರಹವೇನಲ್ಲ. ಧಾರ್ಮಿಕ ಸಂಸ್ಥೆಗಳ ಅವಸಾನವಾದಾಗ್ಯೂ ಕೂಡ ವಿಧಾಯಕ ಶಕ್ತಿ ಹೇಗೋ ತನ್ನನ್ನು ತಾನೇ ಕಾಪಾಡಿಕೊಂಡು ಬಂದಿದೆ. ಇನ್ನೊಂದು ನಿದರ್ಶನವನ್ನು ತೆಗೆದುಕೊಳ್ಳುವುದಾದರೆ, ಸಂಪರ್ಕ ಸಾಧನಗಳಲ್ಲಿ ಆಗಿರುವ ವಿಸ್ತಾರವಾದ ಅಭಿವೃದ್ಧಿಗಳು. ಸುಲಭಸಾಧ್ಯವಾಗಿ ದೊರಕುವ ಸಾಧನಗಳು, ತಪ್ಪಿಸಿಕೊಳ್ಳುವ ಪ್ರಯತ್ನ ಮಾಡುವುದಕ್ಕೆ ನಿಸ್ಸಂಶಯವಾಗಿ ಅವಕಾಶ ಕೊಟ್ಟಿದೆ ಎಂದು ಹೇಳಬಹುದಾದರೂ, ಅಷ್ಟೇ ಸುಲಭವಾಗಿ ಅವನನ್ನು ಹಿಡಿಯಲು ಅದೇ ಸಾಧನಗಳು ಪರಿಣಾಮಕಾರಿಯಾಗಿ, ಸ್ಥಿತಿಯನ್ನು ಸಮತೋಲನಗೊಳಿಸಿದೆ. ಮತ್ತೆ ಆಧುನಿಕ ನಗರದ ಹಾನಿಕಾರಕ ಪ್ರಭಾವವೂ ಇದೆ. ನ್ಯಾಯಾಲಯದಲ್ಲಿ ನಾವು ನೋಡುವ ಕಿಕ್ಕಿರಿತಕ್ಕೆ ಇದನ್ನೇ ಕಾರಣೀಭೂತವನ್ನಾಗಿ ತಿಳಿಯಲಾಗಿದೆ. ನ್ಯಾಯ ಪರಿಪಾಲನೆಯು ಸರಿಯಾಗಿ ಆಗದೇ ಇರುವುದಕ್ಕೆ ಇದೇ ಆಧಾರವೆಂದು ಊಹಿಸಲಾಗಿದೆ. ಮಹಾ ನಗರದ ನ್ಯಾಯಪ್ರದಾನ ಕ್ರಮದಲ್ಲಿರುವ ಕೆಡಕುಗಳಿಗೆ ಪಟ್ಟಣದ ಕೇವಲ ವೈಶಾಲ್ಯ ಮಾತ್ರ ಕಾರಣವಲ್ಲ. ಹಾಗೆ ನೋಡುವುದಾದರೆ ಕಾನೂನು ವ್ಯವಸ್ಥೆಗಳ ಚರಿತ್ರೆಯಲ್ಲಿ, ಪ್ರಕ್ರಿಯೆಯಲ್ಲಿ ಉಂಟಾಗಿರುವ ಸುಧಾರಣೆಗಳಲ್ಲಿ ಬಹಳಷ್ಟು ಸುಧಾರಣೆಗಳಿಗೆ ನಗರದಲ್ಲೇ ನಾಂದಿಯಾಗಿದೆ. ನಗರದಲ್ಲಿ ಕಕ್ಷಿಗಾರರುಗಳು ಹೆಚ್ಚು ಸಂಖ್ಯೆಯಲ್ಲಿರಬಹುದು. ಆದರೆ ಅದನ್ನು ನಿಭಾಯಿಸಲು ಹೆಚ್ಚಿಗೆ ನ್ಯಾಯಾಧೀಶರುಗಳು ಮತ್ತು ಉತ್ತಮ ವಕೀಲರುಗಳನ್ನು ನೇಮಿಸಿಕೊಳ್ಳಲು ಬೇಕಾದ ಹಣ ಕೂಡ ಅಲ್ಲಿದೆ.

ಅತ್ಯುನ್ನತ ಮಟ್ಟದಿಂದ ಹಿಡಿದು, ಅತಿ ಕೆಳಗಿನ ಮಟ್ಟದವರೆಗೂ ನಮ್ಮ ನ್ಯಾಯಿಕ ವ್ಯವಸ್ಥೆಯು ಅನೇಕ ಕೊರತೆಗಳಿಂದ ನರಳುತ್ತಿದೆ ಎಂಬುದು ಸರ್ವ ಸಮ್ಮತವಾದ ಅಭಿಪ್ರಾಯ. ನ್ಯಾಯಿಕ ವ್ಯವಸ್ಥೆಯ ಬಗ್ಗೆ ಮಾತನಾಡುವವರೆಲ್ಲರೂ, ಅದರ ಕುಸಿಯುತ್ತಿರುವ ಮಟ್ಟಗಳ ಬಗ್ಗೆ ಒಪ್ಪಿಕೊಂಡು ಕ್ಷಮಾಪಣೆ ಕೇಳಿಯೇ ತಮ್ಮ ಮಾತನ್ನು ಪ್ರಾರಂಭಿಸುತ್ತಾರೆ. ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶರಾದ ಡಿ. ತುಳಜಾಪುರ್‌ಕರ್ ಅವರು ಈ ರೀತಿ ಹೇಳಿದ್ದಾರೆ:

ಸ್ವತಂತ್ರ ನ್ಯಾಯಾಂಗವು ಒಂದು ಗಣತಂತ್ರದ ಹೃದಯವೆನ್ನುವುದಾದರೆ

ಭಾರತದ ಗಣರಾಜ್ಯವು ಈಗ ಹೃದಯರೋಗದಿಂದ ಬಳಲುತ್ತಿದೆ. ನಿಜಕ್ಕೂ ದೇಶದ ಉನ್ನತ ನ್ಯಾಯಾಂಗವು ಒಂದೇ ಸಮನಾಗಿ ಆಕ್ರಮಣಗಳನ್ನು ಎದುರಿಸುತ್ತಿದೆ. ಈ ಆಕ್ರಮಣ ಹೊರಗಡೆಯದಷ್ಟೇ ಅಲ್ಲ, ಒಳಗಡೆಯದೂ ಕೂಡ. ಇದರಿಂದಾಗಿ, ನಮ್ಮ ರಾಷ್ಟ್ರ ಶರೀರದ ಆರೋಗ್ಯ, ಯೋಗಕ್ಷೇಮ ಮತ್ತು ಅಭಿವೃದ್ಧಿ ಕುಂಠಿತವಾಗಿದೆ. ಏಕೆಂದರೆ ರಾಷ್ಟ್ರದ ಪ್ರಜೆಗಳ ದೃಢವಾದ ಆರೋಗ್ಯಕ್ಕೆ ರೋಗ ಪೀಡಿತ ಹೃದಯವು ರಕ್ತ ಪೂರೈಕೆಯ ಕೆಲಸವನ್ನು ಕಸುವಿನಿಂದ ಮಾಡಲಾರದು.

ಮಾಜಿ ಮುಖ್ಯ ನ್ಯಾಯಾಧೀಶರಾದ ಪಿ.ಎನ್. ಭಗವತಿಯವರು 1985ರ ತಮ್ಮ ಕಾನೂನು ದಿನಾಚರಣೆ ಭಾಷಣದಲ್ಲಿ ಹೀಗೆ ಹೇಳಿದ್ದಾರೆ:

"ಈ ದೇಶದಲ್ಲಿನ ನಮ್ಮ ನ್ಯಾಯಿಕ ವ್ಯವಸ್ಥೆಯು ಇನ್ನೇನು ಕುಸಿದು ಬೀಳುವ ಅಂಚಿನಲ್ಲಿದೆಯೆಂದು ಹೇಳಲು ನನಗೆ ವ್ಯಥೆಯಾಗುತ್ತಿದೆ........ ನಮ್ಮ ನ್ಯಾಯಿಕ ವ್ಯವಸ್ಥೆಯು ನೆನೆಗುದಿಗೆ ಬಿದ್ದಿರುವ ಮೊಕದ್ದಮೆಗಳ ಭಾರದಿಂದ ರಭಸವಾಗಿ ಕುಸಿಯುತ್ತಿದೆ. ನಿಧಾನಿಸಿದ ನ್ಯಾಯ ನಿರಾಕರಿಸಿದ ನ್ಯಾಯ ಆಗುತ್ತಿದೆ ಎಂದು ಹೇಳುವುದು ಸರ್ವಸಾಮಾನ್ಯವಾದ ಮಾತಾಗಿದೆ. ಪ್ರಕರಣಗಳ ಇತ್ಯರ್ಥದಲ್ಲಿ ಆಗುತ್ತಿರುವ ವಿಳಂಬವನ್ನು ಕುರಿತು ನಮ್ಮ ಕೋಪತಾಪಗಳನ್ನು ವ್ಯಕ್ತಪಡಿಸಲು ನಾವು ಅನೇಕ ಬಾರಿ ಈ ಚರ್ವಿತಚರ್ವಣವಾದ ವಾಕ್ಯವೃಂದವನ್ನು ಉಚ್ಚರಿಸುತ್ತೇವೆ. ನಮ್ಮದೇ ನ್ಯಾಯಾಲಯಗಳಲ್ಲಿ ನ್ಯಾಯವನ್ನು ಬೇಡುತ್ತಿರುವವರು ವರ್ಷಾನುಗಟ್ಟಲೆ ತಾಳ್ಮೆಯಿಂದ ಕಾಯಬೇಕಾಗಿದೆ. ಅವರು ಚಕ್ರಭೀಮನ ಕೋಟೆಯಲ್ಲಿರುವ ಒಂದು ನ್ಯಾಯಾಲಯದ ಮೂಲಕ ಇನ್ನೊಂದು ನ್ಯಾಯಾಲಯಕ್ಕೆ ಹೋಗಬೇಕು. ತಾಳ್ಮೆ ತಪ್ಪಿ, ಆಸೆಯನ್ನು ಬಿಟ್ಟು, ಹತಾಶನಾಗುವವರೆಗೂ ಹೋಗುತ್ತಲೇ ಇರಬೇಕು. ನ್ಯಾಯಾಲಯಗಳಲ್ಲಿ ಆಗುವ ವಿಳಂಬದಿಂದ ಪ್ರಯೋಜನವನ್ನು ಪಡೆಯುತ್ತಿರುವವರೆಂದರೆ ಅನೇಕ ವರ್ಷಗಳ ಕಾಲ ತಮ್ಮ ಕಾನೂನಿನ ಹೊಣೆಗಳನ್ನು ಭಂಡತನದಿಂದ ತಪ್ಪಿಸಿಕೊಳ್ಳಬಲ್ಲ ಅಪ್ರಮಾಣಿಕರು ಮತ್ತು ಸರ್ಕಾರದ ವಿರುದ್ಧ, ಸಾರ್ವಜನಿಕ ಪ್ರಾಧಿಕಾರಗಳ ವಿರುದ್ಧ ತಡೆಯಾಜ್ಞೆಯನ್ನು ಮತ್ತು ಪ್ರತಿಬಂಧಕಾಜ್ಞೆಗಳನ್ನು ಪಡೆದುಕೊಂಡು ಸಾರ್ವಜನಿಕ ಹಿತಕ್ಕೆ ವಿರುದ್ಧವಾಗಿ ಇಂತಹ ತಡೆಯಾಜ್ಞೆ, ಅಥವಾ ಪ್ರತಿಬಂಧಕಾಜ್ಞೆಯ ಪ್ರಯೋಜನವನ್ನು ವರ್ಷಾನುಗಟ್ಟಲೆ ಅನುಭವಿಸಿ ಕೊಂಡು ಬರುವ ಪ್ರತಿಯೊಬ್ಬ ಸ್ಥಿತಿವಂತ ವ್ಯಕ್ತಿ."

ಸರ್ವೋಚ್ಚ ನ್ಯಾಯಾಲಯವನ್ನು ಕುರಿತು ಮುಖ್ಯ ನ್ಯಾಯಾಧೀಶರು ಹೀಗೆ ಅವಲೋಕಿಸಿದ್ದಾರೆ:

ಇತ್ಯರ್ಥವಾಗದೆ ಬಾಕಿ ಬಿದ್ದಿರುವ ಪ್ರಕರಣಗಳ ವಿಪರೀತವಾದ ಭಾರದಿಂದ ಮತ್ತು ಅಗಾಧವಾದ ಪ್ರಮಾಣದಲ್ಲಿ ಒಳಗೆ ಹರಿದು ಬರುತ್ತಿರುವ ಮೊಕದ್ದಮೆಗಳಿಂದ, ಸರ್ವೋಚ್ಚ ನ್ಯಾಯಾಲಯವು ಇನ್ನೇನು

> ಕುಸಿದುಬೀಳುವಂತಿದೆ. ನ್ಯಾಯಾಧೀಶರುಗಳ ಸಂಖ್ಯೆಯಯನ್ನು ಬಹುವಾಗಿ ಹೆಚ್ಚಿಸುವುದು ಅಪೇಕ್ಷಣೀಯವಲ್ಲವೆಂದು ನನ್ನ ಮಟ್ಟಿಗೆ ಅಭಿಪ್ರಾಯ ಪಡುತ್ತೇನೆ. ನ್ಯಾಯಾಧೀಶರುಗಳ ಸಂಖ್ಯೆಯನ್ನು ಯದ್ವಾತದ್ವ ಹೆಚ್ಚು ಮಾಡಿದರೆ ಸರ್ವೋಚ್ಚ ನ್ಯಾಯಾಲಯವು, ಒಂದು ವೈಭವೀಕರಿಸಿದ, ತುಂಡು ತುಂಡು ಪೀಠಗಳ ರಚನೆಯನ್ನೊಳಗೊಂಡ ಉಚ್ಚ ನ್ಯಾಯಾಲಯವಾಗಿ ಬಿಡುತ್ತದೆ. ಸರ್ವೋಚ್ಚ ನ್ಯಾಯಾಲಯವು ಶೃಂಗ ನ್ಯಾಯಾಲಯವಾಗಿರುವ ತನ್ನ ವ್ಯಕ್ತಿತ್ವವನ್ನು ಕಳೆದುಕೊಳ್ಳುವುದೇ ಅಲ್ಲದೆ ಸುಸಂಗತ್ವವೂ, ಏಕರೂಪತೆಯೂ ಇರುವುದಿಲ್ಲ. ಹಾಗೆಯೇ ಸರ್ವೋಚ್ಚ ನ್ಯಾಯಾಲಯದ ಅನುಚ್ಛೇದ 136ರ ಕೆಳಗಿನ ಅಸಾಧಾರಣ ಅಧಿಕಾರ ವ್ಯಾಪ್ತಿಯನ್ನು ಮೊಟಕುಗೊಳಿಸುವುದನ್ನು ನಾನು ಬೆಂಬಲಿಸುವುದಿಲ್ಲ.

ಮುಂದುವರೆಯುತ್ತಾ, ಉಚ್ಚ ನ್ಯಾಯಾಲಯಗಳ ಬಗ್ಗೆ ಅವರು ಹೀಗೆ ಹೇಳಿದರು:

> ಇದೇ ರೀತಿಯಲ್ಲಿ ಉಚ್ಚ ನ್ಯಾಯಾಲಯಗಳ ಪರಿಸ್ಥಿತಿಯೂ ಕೂಡ ಗಾಬರಿಪಡಿಸುವಂತದಾಗಿದೆ.

**ಕಾನೂನಿನ ವಿಳಂಬಗಳು:**

ಕಾನೂನಿನ ವಿಳಂಬವು ಹೆಸರುವಾಸಿಯಾದುದು ಮತ್ತು ಸರ್ವವ್ಯಾಪಿಯೂ ಆಗಿದೆ. ವ್ಯವಹಾರಿಕ ದಾವೆಗಳ ಹೆಚ್ಚು-ಕಡಿಮೆ ನೆನಪಿಗೆ ಮೀರಿದ ಸ್ಥಿತಿಯನ್ನು ವರ್ಣಿಸಲು ಕಾನೂನಿನ ವಿಳಂಬವನ್ನು ಹೆಸರಿಸಬಹುದು. ವ್ಯವಹಾರ ಪ್ರಕರಣಗಳ ದಿನಚರಿ ಪುಸ್ತಕಗಳು ಯಾವಾಗಲೂ ಹೊರಚೆಲ್ಲುವಷ್ಟು ತುಂಬಿಕೊಂಡಿದ್ದು, ಒಂದು ಪ್ರಕರಣವನ್ನು ಅಂತಿಮವಾಗಿ ಅದರ ಅರ್ಹತೆಯ ಮೇಲೆ ವಿಚಾರಣೆ ಮಾಡಲು ವರ್ಷಗಳೇ ಸಂದುತ್ತವೆ. ವ್ಯವಹಾರ ಪ್ರಕರಣವನ್ನು ಪ್ರಾರಂಭಿಸಲು ಮಾಡುವ ಖರ್ಚುಗಳು ಮತ್ತು ಕಾನೂನಿನ ಖರ್ಚುಗಳು ವಿಪರೀತ ಭಾರವಾದುದಾಗಿದ್ದು, ಸಣ್ಣ ಕ್ಲೇಮುಗಳಿಗಾಗಿ ಮೊಕದ್ದಮೆಗಳನ್ನು ಪ್ರಾರಂಭಿಸುವುದು ದಂಡವಾಗುತ್ತದೆ. ಪ್ರಕ್ರಿಯೆಯು ಅತಿ ವಿಶದವಾದುದಾಗಿ ಪರಿಭಾಷೆಗಳು ಪ್ರತಿಯೊಂದು ಘಟ್ಟದಲ್ಲಿಯೂ ಕಕ್ಷಿಗಾರನಿಗೆ ತೊಡಕು ಉಂಟುಮಾಡುತ್ತವೆ. ಮೊದಲ ತೀರ್ಪಿನ ನಂತರ ಒಂದಾದ ಮೇಲೊಂದು ಮೇಲ್ಮನವಿಗಳು ಇನ್ನೂ ಹೆಚ್ಚಿನ ವಿಳಂಬಕ್ಕೆ ಕಾರಣವಾಗುತ್ತವೆ. ಅಂತಿಮ ತೀರ್ಪು ಬಂದರೂ ಕೂಡ, ಜಾರಿಯಾಗದೆ ಉಳಿಯುವ ಸಂಭವವೇ ಹೆಚ್ಚಾಗಿರುತ್ತದೆ. ಇಂಥ ಸಂದರ್ಭಗಳಲ್ಲಿ ಪ್ರಾಮಾಣಿಕ ಕಕ್ಷಿಗಾರನಿಗೆ ತನ್ನ ಕಾನೂನುದತ್ತ ಹಕ್ಕುಗಳನ್ನು ಪ್ರತಿಪಾದಿಸಲು ಅಡ್ಡಿ ಉಂಟಾಗುತ್ತದಲ್ಲದೆ, ಅದೇ ಸಮಯಕ್ಕೆ ಸಾಕಷ್ಟು ಸಂಗತವಾಗಿಯೋ ಎಂಬಂತೆ ಇಲ್ಲದೇ ಇರುವ ಅಥವಾ ವಿಪರೀತವಾಗಿ ಹಿಗ್ಗಿಸಿದ ಕ್ಲೇಮುಗಳನ್ನು ಪ್ರತಿಪಾದಿಸಲು ಅಪ್ರಮಾಣಿಕನಾದ ಕಕ್ಷಿಗಾರನನ್ನು ಹುರಿದುಂಬಿಸಿದಂತೆ ಆಗುತ್ತದೆ. ಅತಿ ದೀರ್ಘಕಾಲದವರೆಗೆ ವಿಸ್ತರಿಸುವ ಮೊಕದ್ದಮೆಗಳಲ್ಲಿ ನಿರತರಾಗುವುದಕ್ಕೆ ತಗಲುವ ಖರ್ಚುಗಳು ಸಣ್ಣ ಕಕ್ಷಿಗಾರರನ್ನು ಕಮ್ಮಿ ಹಣಕ್ಕೆ ಇತ್ಯರ್ಥಮಾಡಿಕೊಳ್ಳುವಂತೆ ಅಥವಾ ಪರಿಹಾರವೂ ಬೇಡ ನ್ಯಾಯವೂ ಬೇಡ ಎಂದೆನಿಸುವಂತೆ ಮಾಡುತ್ತದೆ.

ವಿಳಂಬ ಮತ್ತು ಪರಿಭಾಷೆಗಳು ಬರಿಯ ವ್ಯವಹಾರ ಪ್ರಕರಣಗಳಲ್ಲಿ ಮಾತ್ರವೇ ಚಾಲನೆಯಲ್ಲಿಲ್ಲ. ಅಪರಾಧಿಕ ನ್ಯಾಯದ ಪರಿಪಾಲನೆಯ ಸ್ಥಿತಿಯೇನೂ ಉತ್ತಮವಾಗಿಲ್ಲ. ಪ್ರಜಾಪ್ರಭುತ್ವಕ್ಕೆ ಮುಂಚಿನ ವರ್ಷಗಳಲ್ಲಿ ಅಪರಾಧಿಕ ನ್ಯಾಯಪ್ರದಾನ ವ್ಯವಸ್ಥೆಯಲ್ಲಿನ ನಿರಂಕುಶ ಸ್ವಭಾವದ ಕಾರಣವಾಗಿ, ವಿಪರೀತವಾಗಿ ನಿರ್ದಯವಾದುದು ಎಂಬ ದೂರುಗಳಿಗೆ ಎಡಮಾಡಿಕೊಟ್ಟಿತು; ಆದರೆ ಈಗ ಕೇಡಿಗರ ಬಗ್ಗೆ ವಿಪರೀತ ಮೃದುವಾಗಿ ವರ್ತಿಸಲಾಗುತ್ತಿದೆಯೆಂದು ಕೂಗು ಹಾಕಲಾಗುತ್ತಿದೆ. ಅನೇಕ ಅಪರಾಧಿಗಳನ್ನು ಎಂದಿಗೂ ಹಿಡಿಯುವುದು ಸಹಾ ಇಲ್ಲ. ಸಿಕ್ಕಿ ಬಿದ್ದವರು ಕಾನೂನಿನಲ್ಲಿರುವ ಕಿಂಡಿಗಳ ಮೂಲಕ ತೂರಿಕೊಂಡು ತಪ್ಪಿಸಿಕೊಳ್ಳುವ ಸಂಭವ ಅರ್ಧಕ್ಕಿಂತ ಹೆಚ್ಚಾಗಿದೆ. ಅಪರಾಧಿಕ ಪ್ರಕರಣದ ವಿಚಾರಣೆಯಲ್ಲಿ ಅಂತರ್ಗತವಾದ ನಾಟಕವು ಸ್ವಭಾವಜನ್ಯವಾಗಿಯೇ, ಅಪರಾಧಿಗಳ ಪರವಾಗಿಯೇ ಇದೆ. ವೈವಾಹಿಕ ಪ್ರಕರಣಗಳು ಮತ್ತು ಮಾನ ನಷ್ಟ ಮೊಕದ್ದಮೆಗಳನ್ನು ಬಿಟ್ಟು ಸಿವಿಲ್ ಪ್ರಕರಣದ ವಿಚಾರಣೆಯು ಇಂಥ ಪ್ರಭಾವದಿಂದ ಮುಕ್ತವಾಗಿದೆ. ಇದಕ್ಕೆ ವಿರುದ್ಧವಾಗಿ ಭ್ರಷ್ಟಾಚಾರ, ಪಕ್ಷಪಾತ, ಸುಳ್ಳು ಸಾಕ್ಷ್ಯ ಇವುಗಳು ಅಪರಾಧಿಕ ವಿಚಾರಣೆಗಳಲ್ಲಿ ವಿಶೇಷವಾಗಿ ರೂಢಿಯಲ್ಲಿವೆ. ಪ್ರತಿಯೊಂದು ಕಾಲದಲ್ಲೂ ಅದರದೇ ಆದ, ಹೆಚ್ಚು ಗಮನ ಸೆಳೆಯುವ ಕೋಲಾಹಲಕರವಾದ ಮೊಕದ್ದಮೆಯೊಂದು ಇರುತ್ತದೆ.

ಧನವಂತರೂ, ಶಕ್ತಿಶಾಲಿಗಳೂ ಆದ ಕೇಡಿಗರು ತಪ್ಪಿಸಿಕೊಳ್ಳುತ್ತಾರೆ. ಆದರೆ ಬಡವರೂ, ಸ್ನೇಹಿತರಿಲ್ಲದವರೂ ಜೈಲಿಗೆ ಹೋಗುತ್ತಾರೆಂಬ ಗಾಳಿಮಾತೊಂದಿದೆ. ನಿರ್ದೋಷಿಗಳನ್ನೂ ಕೆಲವು ವೇಳೆ ಪೋಲೀಸರು ಸಿಕ್ಕಿಸಿ ಬಿಡುತ್ತಾರೆ; ಇದೇ ತಂತ್ರವನ್ನು ಬನಾವಟ್ಟಿನ ಆಪಾದನೆಗಳ ಮೇಲೆ ಕಳ್ಳತನವೇ ಕಸುಬನ್ನಾಗಿ ಮಾಡಿಕೊಂಡ ಅಪರಾಧಿಗಳನ್ನು ಕಂಬಿಯ ಹಿಂದೆ ಕಳುಹಿಸಲು ಉಪಯೋಗಿಸಲಾಗುತ್ತದೆ ಎಂಬುದು ಅಷ್ಟೇನೂ ಸಮಾಧಾನ ಪಟ್ಟುಕೊಳ್ಳುವಂಥದಲ್ಲ. ಸರ್ವೋಚ್ಚ ನ್ಯಾಯಾಧೀಶ ಹೆಚ್.ಆರ್. ಖನ್ನ ಹೀಗೆ ಹೇಳಿದ್ದಾರೆ:

> "ನ್ಯಾಯಿಕ ವ್ಯವಸ್ಥೆಯಲ್ಲಿ ಜನಗಳು ಇಟ್ಟಿರುವ ನಂಬಿಕೆಯನ್ನು ಅಲುಗಾಡಿಸುತ್ತಿರುವ ಇನ್ನೊಂದು ಸಂಗತಿಯೆಂದರೆ, ಅತಿ ಹೆಚ್ಚಾಗಿ ಆಗುತ್ತಿರುವ ಬಿಡುಗಡೆಗಳು ಮತ್ತು ದೊಡ್ಡ ಕಳ್ಳರನ್ನು ಹಿಡಿದು ಹಾಕುವುದರಲ್ಲಿ ಸೋತಿರುವ ವ್ಯವಸ್ಥೆ. ಕಟ್ಟಿನಲ್ಲಿರುವ ದಾಖಲೆಗಳ ಮೇಲೆ ನ್ಯಾಯಾಧೀಶರುಗಳು ಅವಶ್ಯಕವಾಗಿ ತಮ್ಮ ತೀರ್ಮಾನವನ್ನು ಹೇಳಬೇಕಾಗಿದೆ; ಆಪಾದಿತನ ವಿರುದ್ಧ ಆಪಾದನೆಯನ್ನು ಸಾಬೀತುಮಾಡುವುದಕ್ಕೆ ನಂಬಬಹುದಾದ ಸಾಕ್ಷ್ಯವಿಲ್ಲದ ಹೊರತು ಅವನನ್ನು ತಪ್ಪಿತಸ್ಥನೆಂದು ಹೇಳಬೇಕೆಂದು ನ್ಯಾಯಾಲಯಗಳನ್ನು ಯಾರೂ ನಿರೀಕ್ಷಿಸಲಾಗದು. ಪ್ರತಿಶತ ಅಧಿಕ ಬಿಡುಗಡೆಗಳಿಗೆ ಮುಖ್ಯವಾದ ಒಂದು ಕಾರಣವೇನೆಂದರೆ, ಪೋಲೀಸ್ ತನಿಖೆಗಳ ಅವನತಿಯಾಗುತ್ತಿರುವ ಗುಣಮಟ್ಟ ಮತ್ತು ತತ್ಪರಿಣಾಮವಾಗಿ. ಆಪಾದಿತನು ತಪ್ಪಿತಸ್ಥನೆಂದು

ಸ್ಥಿರಪಡಿಸಲು ನಂಬಬಹುದಾದ ಸಾಕ್ಷವನ್ನು ಕಲೆಹಾಕಿ ನ್ಯಾಯಾಲಯದ ಮುಂದೆ ಹಾಜರುಪಡಿಸಲು ಅವರ ಅಶಕ್ತತೆ. ಪ್ರಕರಣಗಳ ತನಿಖೆಯಲ್ಲಿ ರಾಜಕಾರಣಿಗಳು ಮಧ್ಯ ಪ್ರವೇಶ ಮಾಡುತ್ತಿರುವುದು ಇಂಥ ಅವನತಿಗೆ ಕಾರಣವಾಗಿದೆ. ಒಬ್ಬ ವ್ಯಕ್ತಿ ಎಷ್ಟು ದೊಡ್ಡ ಗೂಂಡಾ ಅಥವಾ ದೊಡ್ಡ ಸಮಾಜ ಘಾತುಕನಾಗಿದ್ದರೆ, ಚುನಾವಣೆಗಳ ಸಮಯದಲ್ಲಿ ಅವನ ಮೌಲ್ಯ ಮತ್ತು ಉಪಯೋಗ ಅಷ್ಟು ದೊಡ್ಡದಾಗಿರುತ್ತದೆ. ಚುನಾವಣೆಗಳ ಸಮಯದಲ್ಲಿ ರಾಜಕಾರಣಿಗಳು ಸಮಾಜಘಾತಕರ ನೆರವನ್ನು ಕೋರಿ ಪಡೆದುಕೊಳ್ಳುವಾಗ, ಕಾನೂನನ್ನು ಜಾರಿಗೊಳಿಸುವ ಅಧಿಕಾರಿಗಳ ಕೈಗೆ ತೊಂದರೆಗೆ ಸಿಕ್ಕಿ ಹಾಕಿಕೊಂಡಾಗ, ಈ ರಾಜಕಾರಣಿಗಳು ತಮ್ಮನ್ನು ಆಪತ್ತಿನಿಂದ ಪಾರು ಮಾಡಿ ಅವರ ಕಷ್ಟವನ್ನು ನಿವಾರಣೆ ಮಾಡುತ್ತಾರೆಂಬ ನಿರೀಕ್ಷೆಯಿಂದಲೇ ಈ ಸಮಾಜಘಾತಕರು ತಮ್ಮ ಸಹಾಯ ಹಸ್ತವನ್ನು ಮುಂದೆ ಚಾಚುತ್ತಾರೆ. ಸಮಾಜಘಾತಕರು ಚುನಾವಣೆಗಳ ಸಮಯದಲ್ಲಿ ನೀಡಿದ ಸಹಾಯದ ಬೆಲೆಯೆಂದರೆ, ರಾಜಕಾರಣಿಗಳು ಆ ಘಾತಕರಿಗೆ ಅವರು ತೊಂದರೆಯಲ್ಲಿದ್ದಾಗ ಕೊಟ್ಟ ನೆರವು. ಸ್ವಾಭಾವಿಕವಾಗಿ, ಅಪರಾಧಗಳ ತನಿಖೆ ಮಾಡುವುದಕ್ಕೆ, ಪೋಲೀಸರಿಗೆ ಇಂಥದೆಲ್ಲಾ ವಿಪರೀತ ಕಷ್ಟ ಉಂಟುಮಾಡುತ್ತದೆ. ಇದೂ ಅಲ್ಲದೆ ಪೋಲೀಸ್ ದಳದ ಬಹಳಷ್ಟು ಸಮಯ, ವಿ.ಐ.ಪಿ.ಗಳ (ಬಹು ಮುಖ್ಯವಾದ ವ್ಯಕ್ತಿಗಳ) ಭದ್ರತೆ ಮತ್ತು ಇತರ ವ್ಯವಸ್ಥೆಗಳನ್ನು ಮಾಡುವುದರಲ್ಲಿ ಹೋಗಿಬಿಡುತ್ತದೆ. ಪ್ರದರ್ಶನಗಳು. ಬಂದ್‌ಗಳು, ಮುಷ್ಕರಗಳು, ಹರತಾಳಗಳು, ಚಳುವಳಿಗಳು, ಇವೆಲ್ಲಾ ಹೆಚ್ಚು ಹೆಚ್ಚಾಗಿ ಸಾರ್ವಜನಿಕ ಜೀವನದ ಒಂದು ಭಾಗವಾಗಿ ಬಿಟ್ಟಿವೆ. ಇವುಗಳು ಪೋಲೀಸ್ ದಳದ ಬಹಳಷ್ಟು ಗಮನವನ್ನು ಸೆಳೆಯುತ್ತವೆ. ಪೋಲೀಸರ ಕೆಲಸದಲ್ಲಿ, ಅಪರಾಧಗಳ ತನಿಖೆ-ಮಾಡುವುದಕ್ಕೆ ತುಲನಾತ್ಮಕವಾಗಿ ಕಡಿಮೆ ಪ್ರಾಮುಖ್ಯತೆಯನ್ನು ಕೊಡಲಾಗುತ್ತಿದೆ. ತತ್ಪರಿಣಾಮವಾಗಿ, ತನಿಖೆಯಲ್ಲಿನ ಗುಣಮಟ್ಟ ಕ್ಷೀಣವಾಗುತ್ತಾ ಬಂದಿದ್ದು, ವಿಚಾರಣೆಯ ಸಮಯದಲ್ಲಿ ನಂಬಬಹುದಾದ ಸಾಕ್ಷ್ಯವನ್ನು ಮುಂದಿಡುವಲ್ಲಿ ಪೋಲೀಸ್ ದಳದ ಅಸಾಮರ್ಥ್ಯ ಕಾರಣವಾಗಿದೆ. ಅದು ಹೇಗೇ ಇದ್ದರೂ, ಹೆಚ್ಚು ಹೆಚ್ಚು ಬಿಡುಗಡೆಯಾಗುತ್ತಿರುವ ಪ್ರಸಂಗಗಳಿಗೆ ಏನೇ ಕಾರಣವಿರಲಿ, ಇದರ ಅನಿವಾರ್ಯ ಪರಿಣಾಮವೆಂದರೆ, ನ್ಯಾಯಾಲಯಗಳು ತಪ್ಪಿತಸ್ತರನ್ನು ಶಿಕ್ಷಿಸುತ್ತವೆಂಬ ನಂಬಿಕೆಯು ನಷ್ಟವಾಗುತ್ತಿದೆ. ಜನಗಳು ನ್ಯಾಯಿಕ ವ್ಯವಸ್ಥೆಯಲ್ಲಿ ನಂಬಿಕೆಯನ್ನು ಕಳೆದುಕೊಂಡು ನ್ಯಾಯಾಂಗವು ತಪ್ಪಿತಸ್ತರನ್ನು ಶಿಕ್ಷಿಸಲು ಸಮರ್ಥವಲ್ಲವೆಂಬ ಅಭಿಪ್ರಾಯಕ್ಕೆ ಬಂದರೆ ಪೀಡಿತರು ಮತ್ತು ಪೀಡನೆಗೊಳಗಾದವರ ಬಂಧುಗಳು, ಸಾಮಾನ್ಯವಾಗಿ ತಪ್ಪಿತಸ್ತರು ಯಾರು ಎಂಬುದನ್ನು ತಿಳಿದುಕೊಂಡು, ಅವರ ಮೇಲೆ ಸೇಡು ತೀರಿಸಿಕೊಳ್ಳಲು ಕಾನೂನು ಬಾಹಿರ ವಿಧಾನಗಳ ಮೊರೆ ಹೋಗುತ್ತಾರೆ. ಇಂಥ ಒಂದು

ವಿದ್ಯಮಾನವು ಗೊಂದಲಮಯವಾದ ಮತ್ತು ಅರಾಜಕತೆಯ ಪರಿಸ್ಥಿತಿಗೆ ಕೊಂಡೊಯ್ಯುತ್ತದೆಂಬುದು ಸ್ಪಷ್ಟವಾಗಿದೆ."

## ಕಾನೂನಿನ ಪರಿಭಾಷೆಗಳು ಮತ್ತು ಅದರ ಪ್ರಕ್ರಿಯೆ

ಯಾವುದೋ ಒಂದು ನಿರ್ದಿಷ್ಟ ನೀತಿಗೆ ಅಂಟಿಕೊಳ್ಳುವುದಕ್ಕಿಂತ ಸಾರ್ವತ್ರಿಕ ನೀತಿಯನ್ನು ಅನುಸರಿಸಿದರೆ ಮಾತ್ರ ನ್ಯಾಯಿಕ ಪರಿಪಾಲನೆಯಲ್ಲಿರುವ ದೋಷಗಳಲ್ಲಿ, ಹೆಚ್ಚಿನವುಗಳಿಗೆ ವಿವರಣೆಯನ್ನು ಕೊಡಬಹುದು. ಕೋರ್ಟು ವ್ಯವಹಾರದಲ್ಲೇ ಮುಳುಗಿರುವುದು ಮಾನವ ಸ್ವಭಾವ. ಪ್ರಪಂಚದ ಎಲ್ಲೆಡೆ ವಾದ ವೈಖರಿಯ ಪ್ರದರ್ಶನವು ಬಹು ಜನರ ಮೆಚ್ಚಿಗೆಯನ್ನು ಆಕರ್ಶಿಸುತ್ತದೆ. ಆದರೆ ಕುತೂಹಲಕಾರಿಯಾದ ಸಂಗತಿಯೇನೆಂದರೆ, ವಕೀಲರ ಚತುರತೆಗೆ, ಕೌಶಲಕ್ಕೆ ಮೆಚ್ಚಿಗೆ ಸಿಕ್ಕರೂ, ಕಾನೂನಿನ ಪರಿಭಾಷೆಗಳು ಹೀನಾಯವಾದ ದೂಷಣೆಗೆ ಒಳಗಾಗುತ್ತವೆ. ನಿರಾಶೆ ಹೊಂದಿದ ಕಕ್ಷಿಗಾರನು ಯಾವಾಗಲೂ ಮೌನವಾಗಿರುವುದಿಲ್ಲ; ಸೋಲುಂಟಾದಾಗ, 'ಕಾನೂನನ್ನು' ಬಿಟ್ಟು 'ನ್ಯಾಯದ' ಮೊರೆ ಹೋಗುತ್ತಾನೆ. ತಮ್ಮ ಕುಶಲ ಕಲೆಯ ಜಟಿಲತೆಗಳನ್ನು ಜತನವಾಗಿಟ್ಟುಕೊಳ್ಳುವುದರಿಂದ ಇಡೀ ವಕೀಲ ವೃಂದಕ್ಕೆ ಲಾಭವಾಗುತ್ತದೆ. ಅದನ್ನು ಸರಳಗೊಳಿಸಿ ಬಿಟ್ಟರೆ ಅವರ ಸೇವೆ ಪಡೆದುಕೊಳ್ಳಬೇಕಾದ ಅವಶ್ಯಕತೆಯೇ ಬೀಳುವುದಿಲ್ಲ. ಯಾವುದೇ ಇತರ ಸಂಸ್ಥೆಗಳಿಗಿಂತ ಕಾನೂನಿನ ಸಂಸ್ಥೆಗಳು ಅನೇಕ ಕಾರಣಗಳ ದೆಸೆಯಿಂದ ಸಾರ್ವಜನಿಕ ಅಭಿಪ್ರಾಯಕ್ಕೆ ಹಿಂದೆ ಬೀಳುತ್ತವೆ. ವ್ಯಾವಹಾರಿಕ ಮತ್ತು ಅಪರಾಧಿಕ ನ್ಯಾಯಾಲಯಗಳಲ್ಲಿನ ಪ್ರಕ್ರಿಯೆಗಳು, ತೀರಾ ಪಾರಿಭಾಷಿಕವಾದುದೂ, ತೊಡಕು, ಅಡಚಣೆಗಳಿಂದ ಕೂಡಿದುದೂ, ದುಬಾರಿಯಾದುದೂ ಮತ್ತು ಮಂದಗತಿಯದೂ ಆಗಿಬಿಟ್ಟಿವೆ. ಮೇಲ್ಮನವಿಗಳು ವಿಪರೀತವಾಗಿವೆ. ಅದನ್ನು ಆಚರಣೆಗೆ ತಂದಾಗ, ಆ ಕಾಲದ ಸಾಮಾಜಿಕ ಮತ್ತು ರಾಜಕೀಯ ಮನೋಧರ್ಮಕ್ಕೆ ಅದು ಅತ್ಯುತ್ತಮವಾಗಿತ್ತು. ಆದರೆ ಈಗ ಅದು ಸಾಮಾನ್ಯ ಕಕ್ಷಿಗಾರನ ಬೆನ್ನಿನ ಮೇಲಿನ, ಮಳೆಯಿಂದ ತೋಯ್ದ ಹೊದ್ದಿಕೆಯಾಗಿದೆ. ನ್ಯಾಯಾಧೀಶರುಗಳಿಗೆ, ವಕೀಲರುಗಳಿಗೆ ಮತ್ತು ಪ್ರತಿವಾದಿಗಳಿಗೆ ಈ ಪ್ರಕ್ರಿಯೆಯಲ್ಲಿ ಪಟ್ಟಭದ್ರ ಹಿತಾಸಕ್ತಿ ಇದೆ.

1986ರಲ್ಲಿ ಕಾನೂನು ದಿನಾಚರಣೆ ಅಂಗವಾಗಿ ತಾವು ಮಾಡಿದ ಭಾಷಣದಲ್ಲಿ ಮುಖ್ಯ ನ್ಯಾಯಾಧೀಶ ಶ್ರೀ ಪಿ.ಎನ್. ಭಗವತಿಯವರು ಹೀಗೆ ಹೇಳುತ್ತಾರೆ:

"ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆಗಳ ಪರಿಣಾಮವಾಗಿ ನ್ಯಾಯಿಕ ವಿಧಾನದಲ್ಲಿ ಉಂಟಾಗುತ್ತಿರುವ ಹೊಸ ಬದಲಾವಣೆಯನ್ನು ಮನ್ನಣೆ ಮಾಡಲು ನಿರಾಕರಿಸುವ, ಆಸ್ಟ್ರಿಚ್ ಪಕ್ಷಿಯಂತೆ ತಮ್ಮ ತಲೆಗಳನ್ನು ಮರಳಿನಲ್ಲಿ ಹುದುಗಿಸಲು ಬಯಸುವ ಕೆಲವು ಮಂದಿ ವಕೀಲರುಗಳು ಮತ್ತು ನ್ಯಾಯ ಶಾಸ್ತ್ರಿಗಳು ನಮ್ಮ ದೇಶದಲ್ಲಿ ದುರಾದೃಷ್ಟವಶಾತ್ ಇನ್ನೂ ಇದ್ದಾರೆ. ಪ್ರತಿ ಕಕ್ಷಿ ನ್ಯಾಯ ಪದ್ಧತಿಯ ಹಳೆಯ ಬ್ರಿಟಿಷ್ ಸಂಪ್ರದಾಯದಲ್ಲಿ ತರಬೇತಿ ಹೊಂದಿ, ಯಥಾಸ್ಥಿತಿ ಮುಂದುವರೆಯಲಿ ಎಂಬ ಸಿದ್ಧಾಂತ ಪ್ರಚಲಿತವಾಗಿದ್ದ ಶಕದಲ್ಲಿ

ಹುಟ್ಟಿ ಬೆಳೆದ ಮತ್ತು ಮುಪ್ಪಡರಿ ಪಳೆಯುಳಿಕೆಯಾದ ಮನಸ್ಸುಳ್ಳ ಇವರುಗಳಿಗೆ ಪುರಾತನ ಮೊಗಸಾಲೆಗಳಲ್ಲಿ ಭೋರೆಂದು ಬೀಸುತ್ತಿರುವ ಬದಲಾವಣೆಯ ಹೊಸಗಾಳಿಗೆ ತಮ್ಮನ್ನು ತಾವು ಒಡ್ಡಿ ಕೊಂಡು ಬದಲಾಯಿಸಿಕೊಳ್ಳುವುದು ಕಷ್ಟಕರವಾಗಿ ತೋರುತ್ತಿದೆ. ಅವರಿನ್ನೂ ಬೌದ್ಧಿಕವಾಗಿ 20ನೆಯ ಶತಮಾನದ ಪೂರ್ವಾರ್ದ ಅಥವಾ 19ನೆಯ ಶತಮಾನದಲ್ಲೇ ಜೀವಿಸುತ್ತಿದ್ದು ಆ ಎರಕದ ಅಚ್ಚಿನಿಂದ ಹೊರಗೆ ಬೆಳೆಯಲು ಅವರಿಗೆ ಸಾಧ್ಯವಾಗುತ್ತಿಲ್ಲ. ಸವೆದು ಹೋದದಾರಿಗೆ ಅವರೆಷ್ಟು ಹೊಂದಿಕೊಂಡು ಬಿಟ್ಟಿದ್ದಾರೆಂದರೆ, ಯಾವುದೇ ಪರ್ಯಾಯ ಮಾರ್ಗ ಅಥವಾ ಬದಲಾವಣೆಯನ್ನು ಅವರು ಸಹಿಸಲಾರರು. ಅವರಿಗೆ ನ್ಯಾಯ ತೀರ್ಮಾನದ ವಿಧಾನವೆಂದರೆ ನ್ಯಾಯಾಧೀಶರುಗಳು ಮತ್ತು ವಕೀಲರುಗಳು ತಮ್ಮ ಜ್ಞಾನವನ್ನು ಮತ್ತು ಪಾಂಡಿತ್ಯವನ್ನು ಪ್ರದರ್ಶಿಸಬಹುದಾದ ಒಂದು ಬೌದ್ಧಿಕ ವ್ಯಾಯಾಮವಷ್ಟೆ. ಇಲ್ಲದವರು, ವಿಕಲಾಂಗರು, ನಿಮ್ನರು ಮತ್ತು ದಿಕ್ಕು ತಪ್ಪಿದವರು ಇವರುಗಳಿಗೆ, ಅವರ ಯೋಜನೆಗಳಲ್ಲಿ ಸ್ಥಳವೇ ಇಲ್ಲ. ನ್ಯಾಯಾಂಗವು ಶಿಥಿಲವಾದ ಮತ್ತು ಅಸಂಗತವಾದ ಆಂಗ್ಲೋ-ಸ್ಯಾಕ್ಸನ್ ನ್ಯಾಯಶಾಸ್ತ್ರದ ಅನುಸಾರವಾಗಿಯೇ ನ್ಯಾಯ ಪ್ರದಾನ ಮಾಡುವುದನ್ನು ಮುಂದುವರಿಸಬೇಕೆಂದು ಅವರು ಬಯಸುತ್ತಾರೆ; ಏಕೆಂದರೆ, ಈ ನ್ಯಾಯಶಾಸ್ತ್ರದ ಉಪಾಸಕರಾಗಿ, ಅದರಂತೆಯೇ ನ್ಯಾಯಪ್ರದಾನ ಮಾಡುವವರು, ಅವರ ದೃಷ್ಟಿಯಲ್ಲಿ ಅರ್ಧದೇವತಾ ಸ್ವರೂಪರು. ಆದರೆ ನ್ಯಾಯ ದೊರಕಬೇಕಾದ ಅಗಾಧರಾಶಿಯ ಜನಗಳು ಈ ದೇಶದಲ್ಲಿದ್ದಾರೆ ಎಂಬುದು ಈ ನ್ಯಾಯ ಧುರೀಣರಿಗೆ ಗೋಚರಿಸುವುದೇ ಇಲ್ಲ; ಒಂದಿಲ್ಲೊಂದು ದಿನ, ಆ ಜನಗಳು ಹೆದ್ದಾರಿಗೆ ಮುತ್ತಿಗೆ ಹಾಕಿ, ಅದರ ಮೇಲೆ ಸಂಚರಿಸುವುದು ತಮಗೆ ಮಾತ್ರ ಸೇರಿದ ಹಕ್ಕು ಎಂದು ಸಾಧಿಸುವವರನ್ನು ನಾಶಪಡಿಸುತ್ತಾರೆ ಎಂಬ ಅರಿವೂ ಅವರಿಗಿಲ್ಲ. ಅದೃಷ್ಟವಶಾತ್, ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆಗಳ ಪರಿಣಾಮವಾಗಿ ನಿರ್ಬಲ ವರ್ಗದ ಜನರು, ಅನನುಕೂಲ ಪರಿಸ್ಥಿತಿಯಲ್ಲಿರುವ ಸಮುದಾಯದ ಭಾಗಗಳು, ಅನ್ಯಾಯದ ವಿರುದ್ಧ ತಮ್ಮನ್ನು ಕಾಪಾಡುತ್ತವೆಂದು ಮೊದಲ ಬಾರಿಗೆ ನ್ಯಾಯಾಲಯಗಳತ್ತ ನೋಡುತ್ತಿದ್ದಾರೆ. ಇಲ್ಲಿಯವರೆಗೆ ನ್ಯಾಯಾಲಯಗಳು ಅವರಿಗೆ ಎಟುಕುತ್ತಿರಲಿಲ್ಲ. ಆದರೆ, ಈಗ, ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆಗಳ ಮೂಲಕ, ಅವರ ಸಮಸ್ಯೆಗಳನ್ನೂ ನ್ಯಾಯಾಲಯಗಳ ಮುಂದೆ ತಂದು ನ್ಯಾಯವನ್ನು ದೊರಕಿಸುವ ಭರವಸೆಯನ್ನು, ಅವರಿಗೆ ಕೊಡಬಹುದಾಗಿದೆ. ಈ ದೇಶದ ಜನ ಸಂಖ್ಯೆಯಲ್ಲಿ ಅರ್ಧಭಾಗದಷ್ಟು ಇರುವ, ಹಕ್ಕುಗಳೇ ಇಲ್ಲದ, ಸಮಾಜದ ಒಂದು ವರ್ಗದವರ ದುರವಸ್ಥೆ ನರಳಾಟ ಮತ್ತು ಶೋಷಣೆ ಇವುಗಳಿಗೆ ಗಮನಗೊಡದೆ, ದಂತ ಗೋಪುರಗಳಲ್ಲಿ ವಸ್ತುಸ್ಥಿತಿಗೆ ದೂರವಾಗಿ ವಾಸಿಸುತ್ತಿರುವವರ ಸಕಾರಣವಲ್ಲದ ಟೀಕೆಗಳಿದ್ದರೂ, ನ್ಯಾಯ ವಿತರಣ ವ್ಯವಸ್ಥೆಯಲ್ಲಿ ಹತ್ತಿರ ಹತ್ತಿರ ಒಂದು ಕ್ರಾಂತಿಯೇ ಆಗುತ್ತಿದೆ."

## ಅಧೀನ ನ್ಯಾಯಾಂಗದ ಸ್ಥಿತಿಗತಿಗಳು

ನ್ಯಾಯಿಕ ರಚನೆಯ ಬೆನ್ನುಮೂಳೆಯಂತಿರುವ ಅಧೀನ ನ್ಯಾಯಾಂಗದ ಸ್ಥಿತಿಗತಿಗಳು ಕರುಣಾಜನಕವಾಗಿವೆ. ಅದರ ಬಗ್ಗೆ ಮುಖ್ಯ ನ್ಯಾಯಾದೀಶ ಶ್ರೀ ಪಿ.ಎನ್. ಭಗವತಿ ಹೀಗೆ ಹೇಳಿದ್ದಾರೆ:

> "ಜಿಲ್ಲಾ ನ್ಯಾಯಾಧೀಶರುಗಳ, ಸಿವಿಲ್ ನ್ಯಾಯಾಧೀಶರುಗಳ ಮತ್ತು ಮುನ್‌ಸೀಫ್‌ರುಗಳ ಅಧೀನ ನ್ಯಾಯಾಲಯಗಳಲ್ಲಿ ಬಹು ಸಂಖ್ಯಾತ ಪ್ರಕರಣಗಳು ಇತ್ಯರ್ಥವಾಗದೇ ಉಳಿದಿವೆ. ಈ ಅಗಾಧ ಪ್ರಮಾಣದಲ್ಲಿ ಒಳಗೆ ಹರಿದು ಬರುತ್ತಿರುವ ಪ್ರಕರಣಗಳನ್ನು, ರಚನಾ ಕ್ರಮದಲ್ಲಿ ಬದಲಾವಣೆಗಳನ್ನು ಮಾಡುವವರೆಗೂ, ಮಾಡದ ಹೊರತೂ, ನಿಭಾಯಿಸಲು ನಮಗೆ ಸಾಧ್ಯವಾಗುವುದಿಲ್ಲ. ಆದರೂ ಕೂಡ, ಅಧೀನ ನ್ಯಾಯಾಧೀಶರುಗಳ ಸಂಬಳ ಮತ್ತು ಸೇವಾ ನಿಯಮಗಳನ್ನು ಉತ್ತಮಪಡಿಸಿ ಅವರಿಗೆ ಉತ್ತಮವಾದ ಕಾರ್ಯ ಸೌಲಭ್ಯಗಳನ್ನು ಒದಗಿಸಿಕೊಟ್ಟರೆ, ಈಗ ಇರುವ ವ್ಯವಸ್ಥೆಯೊಳಗೇ, ನಾವು ಬಹಳಷ್ಟು ಕೆಲಸ ಮಾಡಬಹುದು. ಅಧೀನ ನ್ಯಾಯಾಧೀಶರುಗಳಿಗೆ ಕೊಡುವ ತೀರ ಕಡಿಮೆ ಸಂಭಾವನೆ ಮತ್ತು ಅತೃಪ್ತಿಕರವಾದ ಸೇವಾ ನಿಯಮಗಳಿಂದಾಗಿ, ಒಳ್ಳೆಯ ಮೇಧಾಶಕ್ತಿ ಇರುವವರನ್ನು, ಅಧೀನ ನ್ಯಾಯಾಂಗಕ್ಕೆ ಆಕರ್ಷಿಸಲು ನಮಗೆ ಆಗುತ್ತಿಲ್ಲ. ಅನೇಕ ರಾಜ್ಯಗಳಲ್ಲಿ, ಅದೀನ ನ್ಯಾಯಾಂಗದಲ್ಲಿ ಸಾಕಷ್ಟು ಸಂಖ್ಯೆಯ ನ್ಯಾಯಾಧೀಶರುಗಳೂ ಇಲ್ಲ. ಸಾಕಷ್ಟು ನ್ಯಾಯಾಲಯಗಳೂ ಇಲ್ಲ. ಬಹಳಷ್ಟು ರಾಜ್ಯಗಳಲ್ಲಿ ಅಧೀನ ನ್ಯಾಯಾಧೀಶರುಗಳಿಗೆ ವಸತಿ ಸೌಲಭ್ಯಗಳೇ ಇಲ್ಲ. ಹೀಗಾಗಿ ಅವರು ವಸತಿಗಾಗಿ ವಕೀಲರುಗಳನ್ನು, ಕೆಲವು ಸಮಯದಲ್ಲಿ, ಕಕ್ಷಿಗಾರರನ್ನೂ ಅವಲಂಬಿಸಬೇಕು; ಅದೂ ಕೂಡ, ಅವರಿಗೆ ಕೊಡಲಾಗದಂಥ ದುಬಾರಿ ಬಾಡಿಗೆ. ಅನೇಕ ಕಡೆಗಳಲ್ಲಿ, ನ್ಯಾಯಾಲಯಕ್ಕೆ ಸರಿಯಾದ ಕಟ್ಟಡಗಳೇ ಇಲ್ಲ. ಇದಕ್ಕೆ ಮೇಲೆ, ನಾವು ನಮ್ಮ ಅಧೀನ ನ್ಯಾಯಾಧೀಶರುಗಳಿಗೆ ನೇಮಕಾತಿಗೆ ಮುಂದಿನ ತರಬೇತಿಯನ್ನಾಗಲೀ ಅಥವಾ ಸೇವಾವಧಿಯಲ್ಲಿ ತರಬೇತಿಯನ್ನಾಗಲೀ ಕೊಡುವುದಿಲ್ಲ. ಅವರು ನ್ಯಾಯಾಧೀಶರುಗಳಾಗಿ ನೇಮಕ ಹೊಂದಿದ ಕೂಡಲೇ ಒಂದು ದೈವೀ ತಿಳುವಳಿಕೆ ಅವರ ಮೇಲೆ ಅವಾಹನೆಯಾಗಿ, ಅವರು ನ್ಯಾಯಪ್ರದಾನ ಮಾಡಲು ಬೇಕಾದ ಕೌಶಲ್ಯ ಮತ್ತು ಸಾಮರ್ಥ್ಯವನ್ನು ಪಡೆದುಕೊಳ್ಳುತ್ತಾರೆ ಎಂಬ ಊಹೆಯ ಮೇಲೆ ನಾವು ಮುಂದುವರಿಯುತ್ತೇವೆ. ಅನೇಕ ರಾಜ್ಯಗಳಲ್ಲಿ ನ್ಯಾಯ ಪರಿಪಾಲನೆಯ ವಿಷಯಕ್ಕೆ ಕೆಳಸ್ತರದ ಪ್ರಾಮುಖ್ಯತೆ ಇರುವುದೇ ಇದಕ್ಕೆಲ್ಲ ಕಾರಣವಾಗಿದೆ. ಕೆಳಗಿನ ಮಟ್ಟಗಳಲ್ಲಿ ನ್ಯಾಯಿಕ ವ್ಯವಸ್ಥೆಯನ್ನು ಉತ್ತಮ ಪಡಿಸುವುದಕ್ಕೆ ಹಣ ಬೇಕಾದಾಗ, ಅದನ್ನು ಒದಗಿಸಲು ಮನಸ್ಸೇ ಬರುವುದಿಲ್ಲ. ನ್ಯಾಯದ ಪಿರಮಿಡ್ಡಿಗೆ, ಅಧೀನ ನ್ಯಾಯಾಲಯಗಳು ತಳಹದಿಯೆಂದು ನಾವು ತಿಳಿಯಲಾರದಾಗಿದ್ದೇವೆ; ತಳಹದಿಯನ್ನು ಭದ್ರಗೊಳಿಸದ ಹೊರತು, ಪಿರಮಿಡ್ಡು ಉರುಳಿ ಬಿದ್ದೇ

ಬೀಳುತ್ತದೆ. ನ್ಯಾಯವ್ಯವಸ್ಥೆಯೊಡನೆ ಜನಸಾಮಾನ್ಯನಿಗೆ ಇರುವ ಸಂಪರ್ಕ ಅಧೀನ ನ್ಯಾಯಾಲಯಗಳ ಮಟ್ಟದಲ್ಲೆ ಎಂಬುದನ್ನು ನಾವು ಅನೇಕ ಬಾರಿ ಮರೆಯುತ್ತೇವೆ; ಉಚ್ಚ ನ್ಯಾಯಾಲಯಕ್ಕೆ ಅವನು ಹೋಗುವ ಸಂದರ್ಭಗಳು ಅತಿ ವಿರಳ. ಆದುದರಿಂದ, ನ್ಯಾಯ ಸಿಗುತ್ತದೆಯೆಂಬ ಭರವಸೆಯನ್ನು ಅವನಲ್ಲಿ ಮೂಡಿಸಬೇಕಾದರೆ, ಅಧೀನ ನ್ಯಾಯಾಂಗವನ್ನು ಬಲಪಡಿಸಲೇ ಬೇಕಾಗಿದೆ. ಶಕ್ತಿಶಾಲಿಯಾದ ಅಧೀನ ನ್ಯಾಯಾಂಗವಿದ್ದರೆ, ಉಚ್ಚ ನ್ಯಾಯಾಲಯಗಳಿಗೆ ಮಾಡುವ ಮೇಲ್ಮನವಿಗಳ ಸಂಖ್ಯೆ ಕಡಿಮೆಯಾಗಿ, ಉಚ್ಚ ನ್ಯಾಯಾಲಯಗಳ ಹೊರೆ ಗಣನೀಯವಾಗಿ ಇಳಿಮುಖವಾಗುತ್ತದೆಂದು ಅನೇಕರಿಗೆ ಅರ್ಥವಾಗುವುದೇ ಇಲ್ಲ."

## ನ್ಯಾಯಾಧೀಶರುಗಳ ನಿಷ್ಪಕ್ಷಪಾತ ಮತ್ತು ಪ್ರಾಮಾಣಿಕತೆ

ನ್ಯಾಯಿಕ ಆಡಳಿತ ವ್ಯವಸ್ಥೆಯಲ್ಲಿ ಉತ್ತಮ ರೀತಿಯ ದೃಢತೆ ಇರಲೇಬೇಕೆಂಬ ಒತ್ತಾಯ ಯಾವಾಗಲಿಂದಲೂ ಇದೆ. ಅಲ್ಲದೆ ನ್ಯಾಯದ ಉದಾತ್ತತೆಯೂ ಅವಶ್ಯಕವಾಗಿ ಬೇಕಾಗಿದೆ. ನ್ಯಾಯ ಪ್ರದಾನವು ರಾಜ್ಯದ ಒಂದು ಕರ್ತವ್ಯವಷ್ಟೇ ಅಲ್ಲದೆ ಅದೊಂದು ನಿಗೂಢ ವಿಷಯವೆಂದೂ ಪರಿಗಣಿಸಲಾಗಿದೆ. ನಮಗೆ ಪರಿಚಿತವಾದ ಅನೇಕ ಆಚರಣೆಗಳಿಂದಲೂ, ಭಾವನೆಗಳಿಂದಲೂ, ಇದು ವ್ಯಕ್ತವಾಗಿದೆ. ಕೊನೆಯ ಪಕ್ಷ ಉಚ್ಚ ನ್ಯಾಯಾಲಯಗಳಾದರೂ, ಎಲ್ಲ ಕಡೆಯಲ್ಲೂ ವಾಸ್ತು ಶಿಲ್ಪದ ದೃಷ್ಟಿಯಿಂದ ವೈಭವೋಪೇತವಾಗಿರಬೇಕು. ನ್ಯಾಯಾಸ್ಥಾನದಲ್ಲಿ ನಡೆಯುವ ವಿಚಾರಣೆ, ಅದರಲ್ಲೂ ಅಪರಾಧಿಕ ನ್ಯಾಯಾಲಯದಲ್ಲಿ ನಡೆಯುವ ವಿಚಾರಣೆಯು, ಧಾರ್ಮಿಕ ಸಮಾರಂಭವಷ್ಟೇ ಅಲ್ಲದೆ, ಒಂದು ಸಂಸ್ಕಾರವೂ ಆಗಿದೆ. ವಿಚಾರಣೆಯಲ್ಲಿ ಪಾಲ್ಗೊಳ್ಳುವವರು ಮತ್ತು ಪ್ರೇಕ್ಷಕರು ಇಬ್ಬರನ್ನೂ ಸಂದರ್ಭದ ಗಂಭೀರತೆಯಿಂದಲೂ, ನ್ಯಾಯ ಪರಿಪಾಲನೆಯಲ್ಲಿನ ಘನತೆಯಿಂದಲೂ ಪ್ರಭಾವಿತರಾಗುವಂತೆ, ನಡವಳಿಕೆಗಳನ್ನು ವ್ಯವಸ್ಥಿತಗೊಳಿಸಲಾಗಿದೆ. ಅಸಭ್ಯ ಒರಟರೂ, ತಿಳುವಳಿಕೆ ಇದ್ದವರೂ ಒಂದು ತರಹ ಭಯ ಭಕ್ತಿಯಿಂದ ಈ ಸಂಸ್ಕಾರಕ್ಕೆ ಸ್ಪಂದಿಸುತ್ತಾರೆ. ನ್ಯಾಯಿಕ ಪರಿಪಾಲನೆಯ ಕಡೆಗೆ ಇರುವ ಈ ವಿಚಿತ್ರ ಮನೋಭಾವನೆಗೆ ಕಾರಣಗಳನ್ನು ಹುಡುಕಿದರೆ ಅವು ನಮ್ಮನ್ನು ದೇಶದ ಚರಿತ್ರೆಯ ಪ್ರಾರಂಭಿಕ ಯುಗಕ್ಕೆ ಹಿಂದೆ ಕರೆದೊಯ್ಯುತ್ತವೆ. ಮನುಷ್ಯ ಮನುಷ್ಯನ ನಡುವೆ ನ್ಯಾಯ ತೀರ್ಮಾನ ಮಾಡುವ ಪ್ರಾಥಮಿಕ ಪ್ರಾಮುಖ್ಯತೆಯಿದೆ ಎಂದು ಆ ಯುಗದಲ್ಲಿ ಸಿದ್ಧಪಡಿಸಲಾಗಿತ್ತು. ಆ ಸ್ವಯಂ ಸಹಾಯದ ಯುಗದ ಅರಾಜಕತೆಯ ಕಾಲದ ನೆನಪು ಇನ್ನೂ ಮರುಕಳಿಸುತ್ತಲೇ ಇದೆ. ಪ್ರಾರಂಭದ ದಿನಗಳಲ್ಲಿ ನ್ಯಾಯ ಪರಿಪಾಲನೆಯು ಪವಿತ್ರ ಕರ್ಮಗಳೊಂದಿಗೆ ಸಂಯೋಜನೆ ಹೊಂದಿತ್ತೆಂಬುದು ನೆನಪಿನಿಂದ ಅಳಿಸಿಲ್ಲ. ಯಾವಾಗಲೂ ಕದನಗಳಲ್ಲಿ ನಿರತರಾಗಿದ್ದ ತನ್ನ ಹಠಮಾರಿ ಶ್ರೀಮಂತ ಸಭಾಸದರ ಮೇಲೆ ರಾಜನು ತನ್ನ ಅಧಿಕಾರವನ್ನು ಸಾಧಿಸಿದಾಗ ರಾಜ್ಯಗಳ ಬುನಾದಿಯಾಗಿ ನ್ಯಾಯವು ಸ್ಥಾಪಿತವಾಯಿತು. ಜನಸಾಮಾನ್ಯರಿಗೆ ಆಗ ಬಲಶಾಲಿಗಳ ದುರಾಕ್ರಮಣದಿಂದ ತಕ್ಕಮಟ್ಟಿಗೆ ಪರಿಹಾರ ದೊರೆಯಿತು. ಅವನು ಕೃತಜ್ಞತೆಯಿಂದ

ನ್ಯಾಯಕ್ಕೆ ಪವಿತ್ರತೆಯ ವಿಶೇಷ ಗುಣಲಕ್ಷಣಗಳನ್ನು ಲೇಪಿಸಿದ. ಶತಮಾನಗಳವರೆಗೆ ರಾಜ್ಯವು ಕೇವಲ ಶಾಂತಿ ಪಾಲನೆಯನ್ನು ಮಾತ್ರ ಮಾಡುತ್ತಿತ್ತು. ಜನ ಸಾಮಾನ್ಯನ ಹಿತ ದೃಷ್ಟಿಯಿಂದ ಅದು ನಿರ್ವಹಿಸುತ್ತಿದ್ದ ನ್ಯಾಯ ಪರಿಪಾಲನೆಯು ಅದರ ಏಕಮಾತ್ರ ಸಾರ್ವಜನಿಕ ಕರ್ತವ್ಯವಾಗಿತ್ತು. ಕಾನೂನಿನ ನ್ಯಾಯವು ಸಾಮಾಜಿಕ ನ್ಯಾಯದ ಪರ್ಯಾಯವಾಗಿತ್ತು; ಹೀಗಾಗಿ ಅದು ಹೆಚ್ಚಾದ ಮೆಚ್ಚುಗೆಯನ್ನು ಪಡೆದುಕೊಂಡಿದ್ದುದು ಸ್ವಾಭಾವಿಕವಾಗಿಯೇ ಇತ್ತು. ಈಗಿನ ದಿನಗಳಲ್ಲಿ ರಾಜ್ಯವು ಅನೇಕ ಆಡಳಿತಾತ್ಮಕ ಸೇವೆಗಳನ್ನು ನಿರ್ವಹಿಸುತ್ತಿದೆ.

ರಾಜ್ಯದೊಂದಿಗೆ ಸಾಮಾನ್ಯ ಪ್ರಜೆಯ ಸಂಪರ್ಕವು ರಾಜ್ಯದ ನ್ಯಾಯಿಕ ನಿಯೋಗಗಳಿಗಿಂತ ಆಡಳಿತಾತ್ಮಕ ನಿಯೋಗಗಳೊಂದಿಗೆ ಹೆಚ್ಚು ಹೆಚ್ಚಾಗಿ ಇರುತ್ತದೆ. ಶ್ರೀ ಸಾಮಾನ್ಯನು ತನ್ನ ಜೀವಿತ ಕಾಲದಲ್ಲಿ ರಾಜ್ಯದ ನ್ಯಾಯಿಕ ಯಂತ್ರದೊಂದಿಗೆ ಸಂಪರ್ಕ ಹೊಂದಲೇ ಬೇಕಾಗುತ್ತದೆ. ಆದರೆ ಔದ್ಯೋಗಿಕ ಲೈಸೆನ್ಸ್ ಅನ್ನು ಲಂಚ ಕೊಟ್ಟು ಪಡೆಯುವುದು, ನ್ಯಾಯಾಲಯಗಳಲ್ಲಿ ನ್ಯಾಯ ದೊರಕದೇ ಹೋದದ್ದಕ್ಕಿಂತ ಅಥವಾ ಹಣಕೊಟ್ಟು ನ್ಯಾಯವನ್ನು ಪಡೆದುಕೊಂಡದ್ದಕ್ಕಿಂತ ತೀರ ಕಮ್ಮಿಯಾದ ಅಪತ್ತಿನದು ಎಂದು ಅವನು ಪರಿಗಣಿಸುತ್ತಾನೆ. ನಿಷ್ಪಕ್ಷಪಾತಿಯಾಗಿಲ್ಲದೇ ಇರುವುದು ನ್ಯಾಯ ದೊರಕುವ ಸಂಭವಕ್ಕೆ ಹಾನಿಯುಂಟುಮಾಡುವಷ್ಟು ಬೇರೆ ಇನ್ನಾವುದೂ ಖಂಡಿತವಾಗಿ ಹಾನಿ ಮಾಡುವುದಿಲ್ಲ. ಹೀಗಾಗಿ ನ್ಯಾಯ ಪರಿಪಾಲನೆಯಲ್ಲಿನ ಪ್ರಾಮಾಣಿಕತೆಯನ್ನು ಆದರ್ಶದ ಮಟ್ಟಕ್ಕೆ ಏರಿಸಲಾಗಿದೆ. ಮೇಲಾಗಿ ಆಡಳಿತ ವ್ಯವಸ್ಥೆಯ ಇತರ ಶಾಖೆಗಳಿಗಿಂತ ಉತ್ತಮ ಮಟ್ಟದ ಪ್ರಾಮಾಣಿಕತೆಯು ನ್ಯಾಯ ಪರಿಪಾಲನೆಯಲ್ಲಿರಬೇಕೆಂದು ಒತ್ತಾಯಿಸಲಾಗಿದೆ. ನ್ಯಾಯಿಕ ಆಡಳಿತಕ್ಕೆ ವಿಶೇಷ ರಕ್ಷಣೆಗಳನ್ನು ಒದಗಿಸಲಾಗಿದೆ. ಆಧುನಿಕ ರಾಜ್ಯದಲ್ಲಿ ಆರ್ಥಿಕ ನ್ಯಾಯಕ್ಕಿಂತ ಅತ್ಯುತ್ಕೃಷ್ಟವಾದ ಕಾನೂನಿನ ನ್ಯಾಯವನ್ನು ಸಾಧಿಸಲು ಶ್ರಮ ವಹಿಸಲಾಗಿದೆ. ನ್ಯಾಯಿಕ ಪರಿಪಾಲನೆಯಲ್ಲಿ ಗುಲ್ಲುಂಟಾಗುವುದು ವಿಶೇಷವಾಗಿ ವ್ಯಥೆ ಪಡುವಂಥ ವಿಷಯ ಎಂದು ಪರಿಗಣಿಸಲಾಗಿದೆ. ನ್ಯಾಯಾಲಯಗಳಲ್ಲಿನ ನಿಯಮ ತಪ್ಪುವಿಕೆಯ ಅಥವಾ ಅನೌಚಿತ್ಯದ ತೀರ ಸಣ್ಣದಾದ ಸುಳಿವೂ ಕೂಡ ಆತಂಕ ಮತ್ತು ಗಾಬರಿಗೆ ಕಾರಣವಾಗುತ್ತದೆ. ಶಾಸಕನೊಬ್ಬ ಅಥವಾ ಅಧಿಕಾರಿಯೊಬ್ಬ ಭ್ರಷ್ಟಾಚಾರದಲ್ಲಿ ತೊಡಗಿದ್ದಾನೆಂದು ಸಾಬೀತಾದರೂ ರಾಜ್ಯದ ಅಡಿಪಾಯಕ್ಕೇನೂ ಅಪಾಯ ತಟ್ಟುವುದಿಲ್ಲ. ಆದರೆ ನ್ಯಾಯಾಧೀಶನೊಬ್ಬ ಅನುಮಾನಕ್ಕೆಡೆಕೊಡದ ಹಾಗೆ ನಡೆದುಕೊಳ್ಳಬೇಕು. ನ್ಯಾಯಾಧೀಶರುಗಳ ಸ್ವಾತಂತ್ರ್ಯ, ನಿಷ್ಪಕ್ಷಪಾತತನ ಮತ್ತು ಪ್ರಾಮಾಣಿಕತೆಯ ಬಗ್ಗೆ ಮಾತನಾಡುವುದು ಹೆಚ್ಚು ಕಡಿಮೆ ಒಂದು ಅಂಧಶ್ರದ್ಧೆಯೇ ಆಗಿಬಿಟ್ಟಿದೆ. ನ್ಯಾಯಾಲಯಗಳಲ್ಲಿ ಮತ್ತು ನ್ಯಾಯಾಧೀಶರುಗಳಲ್ಲಿ ನ್ಯಾಯಪರತೆ, ನಿಷ್ಪಕ್ಷಪಾತ ವರ್ತನೆ ಮತ್ತು ಪ್ರಾಮಾಣಿಕತೆ ಇಲ್ಲದಿದ್ದರೆ, ಅವರ ಪರಮ ಪವಿತ್ರತೆ, ಎತ್ತರದಲ್ಲಿರುವ ಆಧಾರ ಪೀಠ ಮತ್ತು ನ್ಯಾಯಾಲಯ ನಿಂದನೆಗೆ ಶಿಕ್ಷಿಸುವ ಅಧಿಕಾರ ಇವು ಯಾವುದೂ ತಮ್ಮನ್ನು ಉಳಿಸುವುದಿಲ್ಲವೆಂದು ಅವರು ಅರಿತುಕೊಳ್ಳಬೇಕು. ನ್ಯಾಯಾಧೀಶರನ್ನು ಟೀಕಿಸುವ ಹಕ್ಕು, ಅವರ ಕಾರ್ಯ ನಿರ್ವಹಣೆಯಲ್ಲಿ ಅತ್ಯುತ್ತಮ ಮಟ್ಟವನ್ನು ಖಚಿತ ಪಡಿಸಿಕೊಳ್ಳುವುದಕ್ಕಿರುವ ರಕ್ಷಣಾ ಕವಚಗಳಲ್ಲಿ ಒಂದೆಂಬುದಾಗಿ

ಪರಿಗಣಿಸುವುದು ಆಧುನಿಕ ಪ್ರವೃತ್ತಿಯಾಗಿದೆ. ಪ್ರಕರಣ ಒಂದರಲ್ಲಿ ನಮ್ಮ ಸರ್ವೋಚ್ಚ ನ್ಯಾಯಾಲಯವು ಹೀಗೆ ಪರಿವೀಕ್ಷಣೆ ಮಾಡಿದೆ:

> ಪ್ರಾಜ್ಞರಾದ ನ್ಯಾಯಾಧೀಶರುಗಳು ತಮ್ಮ ಸ್ಥಾನದ ಗೌರವ ಮತ್ತು ಅಂತಸ್ತು ಇವುಗಳನ್ನು ಉಳಿಸಿಕೊಳ್ಳಬೇಕಾದರೆ ಸಮಸ್ತ ಸಾರ್ವಜನಿಕರಿಂದ ಗೌರವಿಸಲ್ಪಡುವ ಅರ್ಹತೆಯನ್ನು ಹೊಂದಬೇಕು. ಅವರ ತೀರ್ಪುಗಳ ಗುಣಮಟ್ಟ, ಅವರು ಸಾಗುವ ರೀತಿಯಲ್ಲಿನ ವಿವೇಚನೆ, ನ್ಯಾಯಪರತೆ ಮತ್ತು ತಮ್ಮ ನ್ಯಾಯಿಕ ನಡವಳಿಕೆಯಲ್ಲಿ ಅವರು ಅನುಸರಿಸುವ ನಿಗ್ರಹ, ಗಾಂಭೀರ್ಯ, ಸಭ್ಯಾಚಾರ ಇವುಗಳಿಂದಲೇ ಆ ಸಾರ್ವಜನಿಕ ಗೌರವವನ್ನು ಸಂಪಾದಿಸಲು ಸಾಧ್ಯ.

ಇಂಡಿಯಾ ಟುಡೆ ಎಂಬ ಪತ್ರಿಕೆ ಈ ಸನ್ನಿವೇಶದ ಬಗ್ಗೆ ಹೀಗೆ ಅಭಿಪ್ರಾಯ ವ್ಯಕ್ತಪಡಿಸಿದೆ:

> "ಈ ದಿನಗಳಲ್ಲಿ ನ್ಯಾಯಾಧೀಶರುಗಳ ಸಮುದಾಯವು ಮುತ್ತಿಗೆಗೆ ಒಳಗಾಗಿದೆ. ಅವರ ರಕ್ಷಣಾ ಕವಚವೂ ಮತ್ತು ಕತ್ತಿಯೂ ಆದ ಏಕೈಕ ಸದ್ಗುಣವನ್ನು, (ವಿಶ್ವಾಸಾರ್ಹತೆಯನ್ನೂ) ಅವರಿಂದ ಕಿತ್ತುಕೊಳ್ಳಲಾಗುತ್ತಿದೆ. ಅವರ ಸಾಮರ್ಥ್ಯ ಮತ್ತು ಇಂಗಿತಗಳನ್ನು ಪ್ರಶ್ನಿಸುತ್ತಿರುವುದು ಕೇವಲ ಕೆಲವು ನೂರು ಜನ ವ್ಯಕ್ತಿಗಳಿಗೆ ಸೀಮಿತವಾದ ದುರಂತ ಮಾತ್ರವಲ್ಲ. ಈ ವ್ಯಕ್ತಿಗಳು ನಮ್ಮ ಸ್ವಾತಂತ್ರ್ಯದ ಮತ್ತು ಆಸ್ತಿಯ ಸಂರಕ್ಷಕರೂ ನಮ್ಮ ರಾಜ್ಯಾಂಗದ ನಿರ್ವಚನಕಾರರೂ ಮತ್ತು ಅದನ್ನು ಎಚ್ಚರದಿಂದ ಕಾವಲು ಕಾಯುವವರೂ ಆಗಿರುವಾಗ, ಅದು ಒಂದು ರಾಷ್ಟ್ರೀಯ ದುರಂತವಾಗುತ್ತದೆ. ಅದು ನಮ್ಮಲ್ಲಿ ಪ್ರತಿಯೊಬ್ಬರನ್ನೂ ಬಾಧಿಸುತ್ತದೆಯಲ್ಲದೆ, ನಮ್ಮನ್ನು ಮೂರ್ಖರನ್ನಾಗಿ ತೋರುವಂತೆಯೂ ಮಾಡುತ್ತದೆ."

# ಗ್ರಂಥಋಣ

ಆನಂದ್, ಸಿ.ಎಲ್. - *ಗೌರ್ನಮೆಂಟ್ ಆಫ್ ಇಂಡಿಯಾ ಆಕ್ಟ್ಸ್*, 1935, 1939

ಆನಂದ್, ಸಿ.ಎಲ್. - *ಆ್ಯನ್ ಇಂಟ್ರೊಡಕ್ಷನ್ ಟು ದಿ ಹಿಸ್ಟರಿ ಆಫ್ ಗೌರ್ನಮೆಂಟ್ ಆಫ್ ಇಂಡಿಯಾ* (ಬ್ರಿಟಿಷ್ ಕಾಲ, ಭಾಗ II) 1923

ಭಗವತಿ, ಪಿ.ಎನ್ - 26.11.1985 ಮತ್ತು 1986, ಕಾನೂನು ದಿನಾಚರಣೆಯ ದಿನ, ಗೌರವಾನ್ವಿತ ಮುಖ್ಯ ನ್ಯಾಯಾಧೀಶರು ಮಾಡಿದ ಭಾಷಣಗಳು

ಭಟ್ಟಾಚಾರ್ಜೀ - *ಅಡ್ಮಿನಿಸ್ಟ್ರೇಷನ್ ಆಫ್ ಲಾ ಅಂಡ್ ಜಸ್ಟೀಸ್ ಇನ್ ಇಂಡಿಯಾ*, 1982 (ಭಾರತದಲ್ಲಿ ಕಾನೂನು ಮತ್ತು ನ್ಯಾಯ ಪರಿಪಾಲನೆ, 1982)

ಕೋವೆಲ್, ಹರ್ಬರ್ಟ್ - *ಹಿಸ್ಟರಿ ಆಫ್ ದಿ ಕಾನ್ಸ್ಟಿಟ್ಯೂಷನ್ ಆಫ್ ದಿ ಕೋರ್ಟ್ಸ್ ಅಂಡ್ ಲೆಜಿಸ್ಲೇಟೀವ್ ಅಥಾರಿಟೀಸ್ ಇನ್ ಇಂಡಿಯಾ* (ಟಾಗೂರ್ ಲಾ ಲೆಕ್ಚರ್ಸ್) (ಭಾರತದಲ್ಲಿ ನ್ಯಾಯಾಲಯಗಳ ಮತ್ತು ನ್ಯಾಯ ವಿಧಾಯಕ ಪ್ರಾಧಿಕಾರಗಳ ರಚನೆಯ ಇತಿಹಾಸ)

ಧನ್‌ಕರ್, ಸಿ.ಡಿ. - *ಲಾರ್ಡ್ ಮೆಕಾಲೇಸ್ ಲೆಜಿಸ್ಲೇಟಿವ್ ಮಿನಿಟ್ಸ್* (1946)(ಲಾರ್ಡ್ ಮೆಕಾಲೆಯವರ ನ್ಯಾಯ ವಿಧಾಯಕ ಕಲಾಪಗಳ ಸಂಕ್ಷಿಪ್ತ ವರದಿ, 1946)

ಘೋಶಾಲ್,ಯು.ಎನ್. - *ಎ ಹಿಸ್ಟರಿ ಆಫ್ ಇಂಡಿಯನ್ ಪಬ್ಲಿಕ್ ಲೈಫ್* (ಭಾಗ-2) 1966 (ಭಾರತ ಸಾರ್ವಜನಿಕ ಜೀವನದ ಇತಿಹಾಸ, 1966)

ಇಬ್ನ ಹಸನ್ - *ದಿ ಸೆಂಟ್ರಲ್ ಸ್ಟ್ರಕ್ಚರ್ ಆಫ್ ದಿ ಮೊಘಲ್ ಎಂಪೈರ್*, 1980 (1936) (ಮೊಘಲ್ ಚಕ್ರಾಧಿಪತ್ಯದ ಕೇಂದ್ರ ರಚನಾ ಕ್ರಮ, 1980 (1936),)

ಜಂಗ್, ಎ.ಎಮ್.ಯು. - *ದಿ ಅಡ್ಮಿನಿಸ್ಟ್ರೇಷನ್ ಆಫ್ ಜಸ್ಟೀಸ್ ಆಫ್ ಮುಸ್ಲಿಮ್ ಲಾ* (1926-1977) (ಮುಸ್ಲಿಮ್ ಕಾನೂನಿನಲ್ಲಿ ನ್ಯಾಯ ಪರಿಪಾಲನೆ (1926-1977))

ಜೈನ್, ಬಿ.ಎಸ್. - *ಅಡ್ಮಿನಿಸ್ಟ್ರೇಷನ್ ಆಫ್ ಜಸ್ಟಿಸ್ ಇನ್ ಸೆವೆನ್‌ಟೀನ್ತ್ ಸೆಂಚುರಿ ಇಂಡಿಯಾ*, 1970.(17ನೇ ಶತಮಾನದಲ್ಲಿ ಭಾತದಲ್ಲಿ ನ್ಯಾಯ ಪರಿಪಾಲನೆ, 1970)

ಜೂಲಿಯಸ್, ಜಾಲಿ - *ನಾರದೀಯ ಧರ್ಮಶಾಸ್ತ್ರ*, 1981ನೇ ಇಸವಿಯ ಆವೃತ್ತಿ

ಜಾಕ್‌ಸನ್, ಆರ್.ಎಮ್. ಮೆಷಿನರಿ ಆಫ್ ಜಸ್ಟಿಸ್ ಇನ್ ಇಂಗ್ಲೆಂಡ್ (2ನೇ ಆವೃತ್ತಿ, 1953) ಕೇಂಬ್ರಿಡ್ಜ್ (ಇಂಗ್ಲೆಂಡಿನಲ್ಲಿ ನ್ಯಾಯಯಂತ್ರ)

ರಾಮಾ ಜೋಯಿಸ್, ಎಮ್. - *ಲೀಗಲ್ ಅಂಡ್ ಕಾನ್ಸ್ಟಿಟ್ಯೂಷನಲ್ ಹಿಸ್ಟರಿ ಆಫ್ ಇಂಡಿಯಾ*, 1990 (ಭಾಗ 1 ಮತ್ತು 2) (ಭಾರತದ ಕಾನೂನಿನ ಮತ್ತು ಸಂವಿಧಾನದ ಇತಿಹಾಸ, 1990, ಭಾಗ 1 ಮತ್ತು 2)

ಖನ್ನ, ಹೆಚ್.ಆರ್. - *ಇಂಡಿಯನ್ ಜುಡಿಷಿಯಲ್ ಸಿಸ್ಟಮ್* (ಭಾರತದ ನ್ಯಾಯಿಕ ವ್ಯವಸ್ಥೆ 19-12-1987ರಂದು ಲಕ್ನೋದಲ್ಲಿ ಮಾಡಿದ ಭಾಷಣ - ಎ.ಐ.ಆರ್. 1988, ಜರ್ನಲ್ ವಿಭಾಗ)

ಮಾರ್ಲೆ - *ಅಡ್ಮಿನಿಸ್ಟ್ರೇಷನ್ ಆಫ್ ಬ್ರಿಟಿಷ್ ಜಸ್ಟಿಸ್ ಇನ್ ಇಂಡಿಯ* (1858-1976) (ಭಾರತದಲ್ಲಿ ಬ್ರಿಟಿಷ್ ನ್ಯಾಯ ಪರಿಪಾಲನೆ)

ರಂಗನಾಥ ಮಿಶ್ರಾ - 24-11-1990ರಂದು ಕಾನೂನು ದಿನಾಚರಣೆಯ ಅಂಗವಾಗಿ ಗೌರವಾನ್ವಿತ ಮುಖ್ಯ ನ್ಯಾಯಾಧೀಶರು ಮಾಡಿದ ಭಾಷಣ

ಬಿರೇಂದ್ರ ನಾಥ್ - *ಜುಡಿಷಿಯಲ್ ಅಡ್ಮಿನಿಸ್ಟ್ರೇಷನ್ ಇನ್ ಏನ್‌ಶೆಂಟ್ ಇಂಡಿಯಾ* 1979 (ಪ್ರಾಚೀನ ಭಾರತದಲ್ಲಿ ನ್ಯಾಯಿಕ ಪರಿಪಾಲನೆ)

ರಾಹುಲ್ ಪಾಠಕ್ - *ಕ್ರಂಬ್ಲಿಂಗ್ ಸಿಟಾಡೆಲ್, ಇಂಡಿಯಾ ಟು ಡೇ* 30.6.1992

ಸೆನ್ ಗುಪ್ತ ಎನ್.ಸಿ. - *ಎ ಹಿಸ್ಟರಿ ಆಫ್ ಇಂಡಿಯನ್ ಪಬ್ಲಿಕ್ ಲೈಫ್* (ಭಾಗ 2) 1966 (ಭಾರತದ ಸಾರ್ವಜನಿಕ ಜೀವನ ಭಾಗ 2, 1966)

ಸಾಂಘಿ, ಜಿ.ಎಲ್. - ಟ್ರಯಲ್ ಅಂಡ್ ಕೋರ್ಟ್ ಪ್ರೊಸೀಜರ್ಸ್ ಇನ್ ಇಂಡಿಯಾ, *ಟ್ರಯಲ್ ಅಂಡ್ ಕೋರ್ಟ್ ಪ್ರೊಸೀಜರ್ಸ್ ವರ್ಲ್ಡ್‌ವೈಡ್*, 1991 (ಭಾರತದಲ್ಲಿ ನ್ಯಾಯಾಲಯಗಳಲ್ಲಿನ ಪ್ರಕ್ರಿಯೆ, ವಿಶ್ವದಲ್ಲಿ ನ್ಯಾಯಾಲಯಗಳಲ್ಲಿನ ವಿಚಾರಣೆ ಮತ್ತು ಪ್ರಕ್ರಿಯೆ.)

ಸ್ಮಿತ್, ಹೆಚ್ - *ಅಡ್ಮಿನಿಸ್ಟ್ರೇಷನ್ ಆಫ್ ಜಸ್ಟಿಸ್* - *ಎನ್‌ಸೈಕ್ಲೋಪೆಡಿಯ ಆಫ್ ಸೋಷಿಯಲ್ ಸೈನ್ಸ್* (ಭಾಗ 8) 1951. (ನ್ಯಾಯ ಪರಿಪಾಲನೆ - ಸಾಮಾಜಿಕ ವಿಜ್ಞಾನದ ವಿಶ್ವಕೋಶ)

ಪ್ರಭಾವತಿ ಸಿನ್ಹ - *ಸ್ಮೃತಿ - ಪೊಲಿಟಿಕಲ್ ಅಂಡ್ ಲೀಗಲ್ ಸಿಸ್ಟಮ್*, 1982 (ಸ್ಮೃತಿ ರಾಜಕೀಯ ಮತ್ತು ಕಾನೂನು ವ್ಯವಸ್ಥೆ 1982)

# ವಿಷಯಸೂಚಿ

Laser typeset at Laser Line Graphics, Bangalore and printed at Beauty Prints, New Delhi.